# ಕಸ್ತೂರಿ

ಕನ್ನಡ ಡೈಜೆಸ್ಟ್




ವ್ಯವಸ್ಥಾಪಕ ಸಂಪಾದಕ :

ಎಚ್. ಆರ್. ಬಸವರಾಜ್

ಕಲೆ :

ಕೆ. ಬಿ. ಕುಲಕರ್ಣಿ


ಮುಖಪುಟ :

ಬಾದಾಮಿ ಗುಹೆಯಲ್ಲಿಯ ನರಸಿಂಹ ಶಿಲ್ಪ


ಚಂದಾದರ :

ಅರ್ಧವರ್ಷ ಅಂಚೆ ಸೇರಿ ರೂ. ೧೦-೦೦

೧ ವರ್ಷ ,, ರೂ. ೧೮-೦೦

(ವಿಶೇಷ ಸಂಚಿಕೆ ಸೇರಿ)

KASTURI September 1980


## ಬೆಳಕಿಂಡಿ

ಸ್ವರ್ಗದಲ್ಲಿ ಗುರುತು ಪರಿಚಯುವಿಲ್ಲದೇ ಹೋಗುವುದು ಸಾಧ್ಯವೆ? ಅಲ್ಲಿ ಗುಣಪರೀಕ್ಷೆಯಿಂದ ಪ್ರವೇಶ ನಿರ್ಧಾರವಾಗುವುದಾದರೆ ನಿಮ್ಮ ನಾಯಿ ಒಳಗೂ ನೀವು ಹೊರಗೂ ನಿಲ್ಲಬೇಕಾಗುತ್ತದೆ.

•

'ಥೂ ಬೇಗ ಸಾಯುಲೊಲ್ಲ' ಎನಿಸಿಕೊಂಡು ಗನ್ನೆಂದು ನಾರುತ್ತ ಇದ್ದು ಸಾಯುವುದೇ ನರಕ.

'ಇನ್ನೂ ಇರಬೇಕಿತ್ತು' ಎನಿಸಿಕೊಳ್ಳುವ ಹಾಗೆ ಪಟ್ಟೆಂದು ಬಿದ್ದು ಸಾಯುವುದೇ ಸ್ವರ್ಗ.

•

ಸ್ಮಶಾನ: ನಾವಿಲ್ಲದಿದ್ದರೆ ಜಗತ್ತೇ ನಡೆಯುವುದಿಲ್ಲ ಎಂದು ತಿಳಕೊಂಡವರು ಮಣ್ಣಾಗಿ ಮಲಗಿರುವ ಜಾಗ.

•

ಬಹುತೇಕ ಗೋರಿಗಳ ಫಲಕದ ಮೇಲೆ ಅಕ್ಯವಶ್ಯವಾಗಿ ಬರೆಯಬೇಕಾದ ವಾಕ್ಯವೆಂದರೆ – "ಸತ್ತದ್ದು ಮೂವತ್ತಕ್ಕೆ, ಹೂಳಿದ್ದು ಅರವತ್ತಕ್ಕೆ." ಎಂಬುದು.

– ಮಾರ್ಕ್ ಟ್ವೇನ್

✡

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪ್ರತವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



## ಪುಸ್ತಕ ವಿಭಾಗ



**ನಾಸಾಭರಣ**

ಜುಲೈ ೮೦ರ 'ಪದಾರ್ಥ ಚಿಂತಾಮಣಿ'ಯಲ್ಲಿ ಪಾವೆಂ ಅವರು ನಾಸಾಭರಣವನ್ನು ಕುರಿತು ವಿಚಾರಮಾಡುತ್ತಾ, ಬುಲಾಕಿನ ವಿಚಾರವನ್ನು ಪ್ರಸ್ತಾಪಿಸಿ 'ಈ ಆಭರಣವಾಗಲೀ ಅದರ ಹೆಸರಾಗಲೀ ಕನ್ನಡದ್ದಂತೂ ಅಲ್ಲ, ಭಾರತೀಯ ಕೂಡ ಅಲ್ಲ. ಮೂಗಿನ ಯಾವ ಆಭರಣವೂ ಭಾರತೀಯವಲ್ಲ ಎಂದು ಸಂಶೋಧಕರು ಹೇಳುತ್ತಾರೆ' ಎಂದಿದ್ದಾರೆ. ಮುಂದುವರಿದು 'ಪ್ರಾಚೀನ ಧಾರ್ಮಿಕ ಗ್ರಂಥಗಳಲ್ಲಿ, ಶಿಲ್ಪಗಳಲ್ಲಿ, ಚಿತ್ರಗಳಲ್ಲಿ ಕಿವಿಯ ಆಭರಣ ಹೇಳಿದ್ದರೂ ಮೂಗಿನದು ಹೇಳಿಲ್ಲ' ಎಂದು ಕಂಸದಲ್ಲಿ ಕೊಟ್ಟಿದ್ದಾರೆ.

ಈ ಸಂದರ್ಭದಲ್ಲಿ ಕನ್ನಡದ ಸುಪ್ರಸಿದ್ಧ ಸಂಶೋಧಕರಾಗಿದ್ದ ಡಾ. ಎಸ್. ಶ್ರೀಕಂಠ ಶಾಸ್ತ್ರಿಗಳು ಭಾರತೀಯ ಸಂಸ್ಕೃತಿಯಲ್ಲಿ (ಪುಟ ೨೩೨) ಮುಕುರದ ಪ್ರಾಚೀನತೆಯನ್ನು ಕುರಿತು ಬರೆಯುತ್ತಾ, 'ಮೂಗುಬೊಟ್ಟು ಅನಾರ್ಯರಲ್ಲಿಯೂ, ವಿದೇಶಿಯರಲ್ಲೂ, ಹರಪ್ಪಾ ಸಂಸ್ಕೃತಿಯಲ್ಲೂ ಕಂಡುಬಂದರೂ ಶಂಕರಾಚಾರ್ಯರ ಕೆಲವು ಸ್ತೋತ್ರಗಳಲ್ಲಿ ಮುಕುರದ ಉಲ್ಲೇಖವಿದ್ದರೂ, ೩ನೆಯ ಶತಾಬ್ದಿಯಿಂದೀಚೆಗೆ ಅದು ಸುಮಂಗಲೆಯ ಲಕ್ಷಣವೆಂದು ಗಣಿಸಲ್ಪಟ್ಟಿತು' ಎಂದು ಹೇಳಿದ್ದಾರೆ. ಶಾಸ್ತ್ರಿಗಳ ಆಧಾರಭೂತ ಹೇಳಿಕೆಯ ಪ್ರಕಾರ 'ಮೂಗಿನ ಯಾವ ಆಭರಣವೂ ಭಾರತೀಯವಲ್ಲ' ಎಂದು ಸಂಶೋಧಕರು ಹೇಳುತ್ತಾರೆ ಎಂಬ ಮಾತನ್ನು ನಂಬುವುದು ಕಷ್ಟವಾಗುತ್ತದೆ.

ದೇಹದ ಯಾವ ಯಾವ ಭಾಗಗಳನ್ನು ಅಲಂಕರಿಸಿದರೆ ತುಂಬ ಶೃಂಗಾರವಾಗಿ ಸೊಬಗು ಪಡೆಯುತ್ತದೆ ಎಂಬುದರ ಬಗೆಗೆ ಹಿಂದಿನವರು ವಿಚಾರ ಮಾಡಿ ಷೋಡಶಾಲಂಕಾರಗಳನ್ನು ಹೇಳಿದ್ದಾರೆ. ಆ ಷೋಡಶಾಲಂಕಾರಗಳಲ್ಲಿ 'ನಾಸಾಭೂಷಣವೂ ಒಂದು' ಎಂಬುದು ಇಲ್ಲಿ ಗಮನಾರ್ಹ. ಇದರ ಬಗೆಗೆ ಹೆಚ್ಚಿನ ವಿವರಗಳನ್ನು ತೀ. ನಂ. ಶ್ರೀಯವರ 'ಗದಾಯುದ್ಧ ಸಂಗ್ರಹಂ' ಟಿಪ್ಪಣಿಗಳು ಪುಟ ೯೪ರಲ್ಲೂ 'ಶ್ರೀವತ್ಸ ನಿಘಂಟು' ಪುಟ ೪೫೩ರಲ್ಲೂ ನೋಡಬಹುದು.

ಹೀಗೆ ಅನೇಕ ಮೂಲಗಳಿಂದ ಮೂಗುತಿ ಭಾರತೀಯ ಆಭರಣ ಎಂಬುದನ್ನು ಗುರುತಿಸಲು ಸಾಧ್ಯವಿದೆ. 'ಬುಲಾಕು' ತುರ್ಕಿ ಶಬ್ದ ಇರಬಹುದು. ಅದು ಅನ್ಯದೇಶ್ಯ ಶಬ್ದವಾದರೂ ಆ ಮಾದರಿಯ ನಾಸಾಭರಣ ನಮ್ಮ ದೇಶದಲ್ಲಿ ಬಳಕೆಯಲ್ಲಿದೆ.

ಬೆಂಗಳೂರು — ಡಾ. ಕೆ. ಶ್ರೀಕಂಠಯ್ಯ

**ಕೃತಿಚೌರ್ಯ**

ಜುಲೈ ಸಂಚಿಕೆಯಲ್ಲಿ ದೊಡ್ಡಬಾಣಗೆರೆ ರಾಮಚಂದ್ರ ಅವರು ಬರೆದ 'ಆ ರಹಸ್ಯಮಯ ಖಡ್ಗಗಳು' ಕೃತಿಚೌರ್ಯವಾಗಿದೆ. ಏಕೆಂದರೆ ಅದೇ ಲೇಖನವನ್ನು ಅಕ್ಟೋಬರ್ ೧೯೭೧ರ 'ಉತ್ಥಾನ'ದಲ್ಲಿ ಬಿ. ಸುಬ್ರಾಯ ಅಡಿಗರು ಬರೆದಿದ್ದರು. ತಮ್ಮಲ್ಲಿಯ ಲೇಖನಕ್ಕೂ ಮೊದಲಿನದಕ್ಕೂ ಇರುವ ವ್ಯತ್ಯಾಸವೆಂದರೆ ಬಿ. ಸುಬ್ರಾಯ ಅಡಿಗರು ಸತ್ಯ ಘಟನೆ ಎಂದು ಬರೆದಿದ್ದರು, ಪ್ರಸ್ತುತ ಲೇಖನದಲ್ಲಿ 'ಕೃತಿಚೌರ್ಯ' ಎಂದು ಸೇರಿಸಿಲ್ಲ, ಅಷ್ಟೆ!

ಅಡ್ಯನಡ್ಕ (ದ.ಕ.) — ಕೀರ್ತಿಮಣಿ ಮಲ್ಲಿಗೆಮನೆ

ಜುಲೈ ಸಂಚಿಕೆಯಲ್ಲಿ ಪ್ರಕಟವಾದ ದೊಡ್ಡಬಾಣಗೆರೆ ರಾಮಚಂದ್ರ ಅವರ 'ನಿಜವಾದ ಭವಿಷ್ಯ'ವನ್ನು ಓದಿದೆ. ಅದು 'ಸುಧಾ'ದಲ್ಲಿ (ಅಕ್ಟೋಬರ್ ೨೨, ೧೯೭೪ರ) ನನ್ನ ಹೆಸರಿನಲ್ಲಿ ಪ್ರಕಟವಾಗಿತ್ತು. ನನ್ನ ಈ ಸಣ್ಣದೊಂದು ಬರಹವೂ ಕೃತಿಚೋರರ ಕಣ್ಣಿಗೆ ಬಿದ್ದೀತೆಂದು ನಾನು ಊಹಿಸಿರಲಿಲ್ಲ. ಶ್ರೀ ರಾಮಚಂದ್ರರ ಸಾಹಸವನ್ನು ಮೆಚ್ಚತಕ್ಕದ್ದೇ ಸರಿ.

ಹೊಸದಿಲ್ಲಿ — ಸೇತೂರಾವ್ ಶ್ರೀನಿವಾಸ್

[ಜುಲೈ 'ಕಸ್ತೂರಿ'ಯಲ್ಲಿ ಶ್ರೀ ದೊಡ್ಡಬಾಣಗೆರೆ ರಾಮಚಂದ್ರ ಅವರು ಬರೆದ ಎರಡು ಲೇಖನಗಳು ಪ್ರಕಟವಾದುವಷ್ಟೆ. ಆದರೆ ದುರ್ದೈವದಿಂದ ಈ ಎರಡೂ ಲೇಖನಗಳು ಕೃತಿಚೌರ್ಯವೆಂದು ಓದುಗರಿಬ್ಬರು ಬರೆದಿದ್ದಾರೆ. ಈ ಬಗ್ಗೆ ಲೇಖಕರಿಂದ ವಿವರಣೆ ಕೇಳಿದಾಗ

ಅವರಿಂದ ಯಾವ ಪ್ರತಿಕ್ರಿಯೆಯೂ ಬರಲಿಲ್ಲ. ಸಂಪಾದಕರು ಸರ್ವಜ್ಞರಲ್ಲವಾದ ಕಾರಣ ಲೇಖಕರಲ್ಲಿ ಇಂಥ ಪ್ರವೃತ್ತಿ ಸಲ್ಲದೆಂದು ಮಾತ್ರ ಹೇಳಬಲ್ಲೆವು. ಓದುಗರು ಜಾಗ್ರತರಿರುವವರೆಗೂ ಕೃತಿಚೋರರ ಮೇಲೆ ಅಂಕುಶವಿದ್ದೇ ಇರುತ್ತದೆ. —ಸಂ ]

**ಮನೋರೋಗಗಳು**

ಡಾ. ಕೆ. ಎಂ. ಧ್ರುವಕುಮಾರರ ಲೇಖನಗಳ ನ್ನೋದಿ ಪ್ರಭಾವಿತನಾಗಿದ್ದೇನೆ. ಆಗಸ್ಟ್ ೮೦ರ ಸಂಚಿಕೆಯಲ್ಲಿ ಪ್ರಕಟಣೆಗೊಂಡ ಅವರ ವೈದ್ಯಕೀಯ ಲೇಖನ 'ನಿಮಗೆ ಮಾನಸಿಕ ಅಸ್ವಸ್ಥತೆ ಇದೆಯೇ?' ಎಂಬುದು ನನ್ನ ಮಾನಸಿಕ ಸ್ಥಿತಿಯನ್ನು ಸಂಪೂರ್ಣ ಅರಿಯಲು ಸಹಾಯವಾಯಿತು. ಅವರಿಗೆ ನನ್ನ ಕೃತಜ್ಞತೆಗಳು. ಲೇಖನದಲ್ಲಿ ಅವರು ೩೭ ಚಿನ್ಹೆಗಳನ್ನು ಮಾನಸಿಕ ಅಸ್ವಸ್ಥತೆಗೆ ಕಾರಣವೆಂದು ಪರಿಗಣಿಸಿ ಸೂಕ್ತ ವೈದ್ಯಕೀಯ ಸಲಹೆಗಳನ್ನು ಕೊಟ್ಟಿದ್ದಾರೆ. ಮಾನಸಿಕ ಅಸ್ವಸ್ಥತೆ ಹೇಗೆ ಉಂಟಾಗುತ್ತದೆ, ಉಂಟಾಗದಂತೆ ಹೇಗೆ ಎಚ್ಚರಿಕೆ ವಹಿಸಬೇಕು ಮತ್ತು ಅದನ್ನು ಹೋಗಲಾಡಿಸಲು ವೈದ್ಯಕೀಯ ಮಾರ್ಗಗಳಿಗಿಂತ ಇತರ ನೈಸರ್ಗಿಕ ಮಾರ್ಗಗಳುಂಟೆ ಎಂಬುದನ್ನು ಸೂಚಿಸಿದ್ದರೆ ಲೇಖನಕ್ಕೆ ಇನ್ನೂ ಮಹತ್ವ ಬರುತ್ತಿತ್ತೇನೋ.

ಶಿಕಾರಿಪುರ — ಶೇಖರ್ ಗೌಳೇರ್

**ಮೃಗತೃಷ್ಣಾ**

ಶ್ರೀಮತಿ ಗೀತಾ ಮೋಹನ ಮುರಲಿಯವರು ಸಾಮರ್ ಸೆಟ್ ಮಾಮ್‌ರ 'ದಿ ಮೂನ್ ಆ್ಯಂಡ್ ದಿ ಸಿಕ್ಸ್ ಪೆನ್ಸ್' ಬರೆದ ಅನುವಾದ ಕಥೆಯನ್ನು ಓದಿದಾಗ, ವ್ಯಕ್ತಿಗಳ ಹೆಸರನ್ನುಳಿದು ಇದೊಂದು ಕನ್ನಡದ ಕಥೆಯೇ. ಚಾರ್ಲ್ಸ್‌ನ ಏಳು-ಬೀಳು-ಏಳು ಜೀವನ ಕೊಂಡಿಯು ನಿರೂಪಣೆಯಲ್ಲಿ ಕಳಚಿದಂತೆ ತಾತ್ಸಾರದ ನೈಜಗೂಢತೆಯನ್ನು ರಸವತ್ತಾಗಿ ಅವನ ಜೀವನ ಪ್ರತಿಬಿಂಬಿಸುತ್ತದೆ. ಮಾನವ ನಲವತ್ತರ ಗಡಿದಾಟಿದರೂ ಮನಸ್ಸೊಂದಿದ್ದರೆ ಮಾರ್ಗ ಕಾಣಬಲ್ಲನೆಂಬುದಕ್ಕೆ ಕನ್ನಡಿಯಂತಿದೆ ಈ ಕಥೆ.

ಗುಲಬುರ್ಗಾ — ಶ. ಶಿ. ಕಟ್ಟಿ

**ಇದೂ ಕೃತಿಚೌರ್ಯ ?**

ಆಗಸ್ಟ್ 'ಕಸ್ತೂರಿ'ಯ ಮುಖಪುಟದ ಚಿತ್ರ ಶ್ರೀಮತಿ ಎಸ್. ಕೆ. ಕುಲಕರ್ಣಿಯವರ 'ಪಯಣ' ಕೃತಿಚೌರ್ಯವಲ್ಲವೆ ? ನಿಮ್ಮ ಮೇ ೧೯೭೪ರ ಮುಖಪುಟ 'ಪ್ರೇಮಿಗಳ ಪಲಾಯನ'ವೆಂಬ ರಾಜಸ್ಥಾನಿ ಚಿತ್ರದ ಪ್ರತಿಕೃತಿಯಂತೆಯೇ ಇದೂ ಇದೆ.

ಮೈಸೂರು — ಡಿ. ವಿ. ಮೋಹನ ಪ್ರಕಾಶ

[ಇದು ಶ್ರೀಮತಿ ಕುಲಕರ್ಣಿ ರಚಿಸಿದ ಚಿತ್ರವಲ್ಲ. ರಾಜಸ್ಥಾನದಲ್ಲಿ ಜನಪ್ರಿಯವಾಗಿರುವ ಬಾಟಿಕ್ ಕಲಾಕೃತಿಯನ್ನು ಅವರ ಸಂಗ್ರಹದಲ್ಲಿಂದ ನಾವು ಆಯ್ದುಕೊಂಡೆವಷ್ಟೆ. ರಾಜಸ್ಥಾನಿ ಕಲಾವಿದರಿಗೆ 'ಪಲಾಯನದ' ವಸ್ತು ತುಂಬ ಪ್ರಿಯವಾಗಿರಬೇಕು. ಇದು ಖಂಡಿತ ಕೃತಿಚೌರ್ಯವಲ್ಲ. —ಸಂ.]

**ಗ್ರೀಕನಾಗದೆ**

'ಗ್ರೀಕನಾಗದೆ ಗ್ರೀಸಿನಲ್ಲಿ' ಲೇಖನ ಚೆನ್ನಾಗಿ ಓದಿಸಿಕೊಂಡು ಹೋಗುತ್ತದಾದರೂ ಲೇಖಕರು ಇನ್ನೂ ಹೆಚ್ಚು ಅನುಭವಗಳನ್ನು ನಿರೂಪಿಸಬೇಕಾಗಿತ್ತು ಅನ್ನಿಸುತ್ತದೆ.

ಹೊಸಪೇಟೆ — ಎಂ. ಗೋವಿಂದಾಚಾರ್ಯ

ಗ್ರೀಸ್ ದೇಶದಲ್ಲಿಯೂ ಪಕ್ಕಾ ಫೋರ್-ಟ್ವೆಂಟಿಯಾದ ಪ್ರೊಫೆಸರರಿದ್ದಾರೆ ಎನ್ನುವುದನ್ನು ಪುಂಡಿಕ್ಕಾ ಗಣಪಯ್ಯಭಟ್ಟರ ಲೇಖನದಿಂದ ತಿಳಿದು ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು.

ಸಾಗರ — ಡಿ. ರಾಮರಾವ್

**ಸಂಜಯ**

ಸಂಜಯನ ಬಗೆಗೆ ಖುಶವಂತಸಿಂಗರು ಬರೆದ ಲೇಖನ ಮನೋಹರವಾಗಿದೆ. ವ್ಯಕ್ತಿಗತ ಅನುಭವಗಳಿಂದ ವ್ಯಕ್ತಿಚಿತ್ರವನ್ನು ಮೂಡಿಸುವ ಕಲೆ ನಮ್ಮಲ್ಲಿ ಇನ್ನೂ ಅಷ್ಟು ಉಚ್ಛ್ರಾಯಕ್ಕೆ ಬಾರದಿದ್ದ ಕಾಲದಲ್ಲಿ ಇಂಥ ಲೇಖನಗಳು ಎಷ್ಟು ಬಂದರೂ ಕಡಿಮೆಯೆ.

ಸಿರಗುಪ್ಪಿ — ಬಸಪ್ಪಾ ಅಂಗಡಿ

***************

# ಕಸ್ತೂರಿ

ವರ್ಷ : ೨೫ ಸಂಚಿಕೆ : ೧

ಸಪ್ಟಂಬರ್ ೧೯೮೦



## ನಮ್ಮ - ನಿಮ್ಮೊಳಗೆ

ಈ ಸಂಚಿಕೆಯೊಂದಿಗೆ 'ಕಸ್ತೂರಿ' ತನ್ನ ಜೀವನದಲ್ಲಿ ಒಂದು ಮಹತ್ವದ ಘಟ್ಟವನ್ನು ಪ್ರವೇಶಿಸುತ್ತಿದೆ. ೧೯೫೬ ಸಪ್ಟಂಬರಿನಲ್ಲಿ ಮೊಟ್ಟ ಮೊದಲ ಸಂಚಿಕೆ ಕನ್ನಡಿಗರ ಕೈಸೇರಿದ 'ಕಸ್ತೂರಿ' ಈ ಸಂಚಿಕೆಯೊಂದಿಗೆ ೨೫ ನೆಯ ವರ್ಷದಲ್ಲಿ ಪದಾರ್ಪಣ ಮಾಡುತ್ತಿದೆ. ಈ ಸಂದರ್ಭದಲ್ಲಿ ಮೊದಲು ಸಂಚಿಕೆಯಲ್ಲಿ ಬಂದ ಸಂಪಾದಕೀಯವನ್ನೇ ಪುನಃ ನೆನಪಿಸಿಕೊಂಡು ನಮ್ಮ ಕರ್ತವ್ಯದ ಬಗ್ಗೆ ಜಾಗ್ರತರಾಗೋಣ.

"'ಕಸ್ತೂರಿ'ಯ ಗುರಿ, ಜ್ಞಾನ ಮತ್ತು ಮನೋರಂಜನೆ. ಧಾವಿಸುತ್ತಿರುವ ಇಂದಿನ ಜಗತ್ತಿನಲ್ಲಿ ಜ್ಞಾನ-ವಿಜ್ಞಾನ-ಸಾಹಿತ್ಯಗಳು ಅನಂತ ಧಾರೆ

ಗಳಾಗಿ ಹರಿಯುತ್ತಿವೆ. ಅವುಗಳಲ್ಲಿ ಬಹು ಭಾಗ ಕನ್ನಡ ಓದುಗರಿಗೆ ನಿಲುಕುವುದಿಲ್ಲ; ಏಕೆ ಸಾಧಾರಣ ಇಂಗ್ಲೀಷು ಬಲ್ಲವನಿಗೂ ಅದು ದುರ್ಲಭವೇ ಆಗಿದೆ. ಆದರೆ ಈ ಓಘದ ಸಾಮಾನ್ಯ ಪರಿಚಯವಾದರೂ ನಿರಂತರವಾಗಿ ಇದ್ದ ಹೊರತು ಈ ಶತಮಾನದಲ್ಲಿ ನಾವು ಪ್ರಗತಿ ಹೊಂದಲಾರೆವು. ಹಲವು ತೀರ್ಥಗಳ ಜಲವನ್ನು ತಮ್ಮವರಿಗೆ ಪ್ರಾಶನ ಮಾಡಿಸಲು ಯಾತ್ರಿಕರು 'ಗಿಂಡಿ' ಗಳಲ್ಲಿ ತರುವಂತೆ 'ಕಸ್ತೂರಿ'ಯು ಓದುಗರಿಗೆ ಹಲವು ಜ್ಞಾನತೀರ್ಥಗಳನ್ನು ಒದಗಿಸಲು ಹವಣಿಸುವುದು......

"'ಕಸ್ತೂರಿ' ಇಂದಿನ ಕಾಲದ ಜನತೆಗಾಗಿ ಇರುವುದು. ಅದು ಭಾರತದ ಭವ್ಯ ಪ್ರಾಚೀನ ಸಂಸ್ಕೃತಿ ಮತ್ತು ಸಾಹಿತ್ಯಗಳ ಪರಂಪರೆಯನ್ನು ಪರಿಚಯ ಮಾಡಿಕೊಡಲು ಯತ್ನಿಸುವುದು. ಆದರೆ ಗತವೈಭವವನ್ನು ನೆನೆಯುವಾಗ ಗತಕಾಲಕ್ಕೆ ಮರಳುವ ಹವ್ಯಾಸ ಅದಕ್ಕಿಲ್ಲ. ನಾವು ಇಂದಿನ ಕಾಲದಲ್ಲಿ ಬಾಳಬೇಕಾಗಿದೆ ಮತ್ತು ಇಂದಿನ ಸಮಸ್ಯೆಗಳನ್ನು ಬಿಡಿಸಬೇಕಾಗಿದೆಯೆಂದು ಅದು ಮರೆಯುವಂತಿಲ್ಲ.

"......ಮರಳುಗಾಡಿನಲ್ಲಿಯೂ ಓಯಸಿಸ್ಸುಗಳಿರುವಂತೆ ಅತಿ ಶುಷ್ಕ ಜೀವನದಲ್ಲಿಯೂ ರಸದ ಬುಗ್ಗೆಗಳಿರುತ್ತವೆ. ಆ ಧಾರೆಗಳನ್ನು ಗುರುತಿಸಿ ತೋರಿಸುವ ಅಪೇಕ್ಷೆ 'ಕಸ್ತೂರಿ' ಯದು.

"ಒಂದು ಮಾತಿನಲ್ಲಿ 'ಕಸ್ತೂರಿ' ಜೀವನದ ಕೆಂಪಿನ ಪಕ್ಷಪಾತಿ......"

'ಕಸ್ತೂರಿ' ತಾನಿರಿಸಿಕೊಂಡ ಗುರಿಗಳ ಸಾಧನೆಯತ್ತ ತನ್ನದೇ ಆದ ದಾರಿಯಲ್ಲಿ ಪ್ರಯತ್ನಿಸುತ್ತ ೨೪ ವರ್ಷ ಪ್ರಾಯಕ್ಕೆ ಬಂದಿದೆ. ಇದೀಗ ತನ್ನ ಕರ್ತವ್ಯದ ಅರಿವನ್ನು ಮತ್ತೆ ಜಾಗ್ರತಗೊಳಿಸಿ ಕರ್ತವ್ಯನಿರ್ವಹಣೆಗೆ ತನ್ನನ್ನು ಪುನಃ ಮುಡಿಪಾಗಿಟ್ಟುಕೊಳ್ಳುತ್ತಿದೆ.

ಕಳೆದ ೨೪ ವರ್ಷಗಳಲ್ಲಿ 'ಕಸ್ತೂರಿ'ಗೆ ಬಂದ ಅನುಭವ ಹಲವು ಹತ್ತು ಬಗೆಯದು. ಇದೊಂದು ಡೈಜೆಸ್ಟ್ ಎಂದು ಘೋಷಿಸಿಯೇ ಸಂಸ್ಥಾಪಕರು 'ಕಸ್ತೂರಿ'ಯನ್ನು ಪ್ರಾರಂಭಿಸಿದರು. ಆದರೆ ಕೆಲವೊಮ್ಮೆ ಓದುಗರು ಇದಕ್ಕೆ 'ಡೈಜೆಸ್ಟ್' ಎಂಬ ವಿದೇಶಿ ಶಬ್ದದ ಕಿರೀಟವೇಕೆ, ತತ್ಸಮ ಕನ್ನಡ ಶಬ್ದ ಸಿಗುವುದಿಲ್ಲವೆ ಎಂದೂ ಕೇಳಿದ್ದಾರೆ. ಸಿಗಬಹುದು, ಸಿಗದಿದ್ದರೆ ಅದೇ ಅರ್ಥ ಕೊಡುವಂತಹ ಇನ್ನೊಂದು ಶಬ್ದವನ್ನು ಯಾರಾದರೂ ಸೃಷ್ಟಿಸಲೂಬಹುದು.

---

**'ಕಸ್ತೂರಿ'ಯು ರಜತವರ್ಷದಲ್ಲಿ ಕಳೆದ ಇಪ್ಪತ್ನಾಲ್ಕು ವರ್ಷಗಳಲ್ಲಿ ಪ್ರಕಟವಾದ ಆಯ್ದ ಲೇಖನಗಳನ್ನು ಇಲ್ಲವೆ ಅವತರಣಿಕೆಗಳನ್ನು ಅಕ್ಟೋಬರಿನಿಂದ ಮುಂದಿನ ಅಗಸ್ಟವರೆಗೆ ಪ್ರಕಟಿಸುತ್ತೇವೆ.**

---

ಆದರೆ 'ಡೈಜೆಸ್ಟ್' ಎಂದೊಡನೆ ಬರುವ ಕಲ್ಪನೆ ಬೇರಾವ ಶಬ್ದವನ್ನು ಹೇಳಿದಾಗಲೂ ಬರುವುದಿಲ್ಲ. ಅಂಥ ಸುಯೋಗ್ಯ ಶಬ್ದ ಸಿಗುವವರೆಗೆ 'ಕಸ್ತೂರಿ' ಡೈಜೆಸ್ಟಾಗಿಯೇ ಮುಂದುವರಿಯುತ್ತದೆ.

'ಕಸ್ತೂರಿ'ಯು ತನ್ನ ದೊಡ್ಡ ಸಂಪತ್ತೆಂದು ಭಾವಿಸುವುದು ತನ್ನ ಬರಹಗಾರರ ಬಳಗವನ್ನು. ಹಲವಾರು ಸಮರ್ಥ ಬರಹಗಾರರನ್ನು ಗುರುತಿಸಲು 'ಕಸ್ತೂರಿ'ಗೆ ಸಾಧ್ಯವಾಯಿತು. ಈ ಬಳಗವನ್ನು ಇನ್ನೂ ವಿಸ್ತರಿಸಿಕೊಂಡು ಹೋಗುವುದರಲ್ಲೇ ಭವಿಷತ್ತಿದೆಯೆಂದು ನಾವು ನಂಬುತ್ತೇವೆ.

—ಸಂಪಾದಕ



# ಸಾಕ್ರೆಟಿಸನ ಸಹನೆ

'ಅಚ್ಛಾ ದೋಸ್ತ್ ಔರ ಅಚ್ಛಿ ಪತ್ನಿ ಕಿಸ್ಮತ್‌ವಾಲೋಂಕೊ ಮಿಲತಾ ಹೈ' ಎಂದು ಹಿಂದಿಯಲ್ಲೊಂದು ಲೋಕೋಕ್ತಿ ಇದೆ. ಕಿಸ್ಮತ್ ಎಂದರೆ ಭಾಗ್ಯ ಎಂದು ಅರ್ಥ. ಇದು ಸಾಕ್ರೆಟಿಸನ ವಿಷಯವಾಗಿ ಅಪವಾದ. ಏಕೆಂದರೆ ಜಗತ್ಪ್ರಸಿದ್ಧ ಸತ್ಯಶೋಧಕನೆಂದು ಕರೆಸಿಕೊಳ್ಳುವುದು ಸಣ್ಣ ಭಾಗ್ಯವೇನಲ್ಲ (ಭಾಗ್ಯಕ್ಕೆ ಇಲ್ಲಿ ಐಶ್ವರ್ಯದ ಅರ್ಥ ಹಚ್ಚುವುದು ಬೇಡ.) ಜ್ಞಾನವೊಂದೇ ಮಾನವನಿಗೆ ಶ್ರೀರಕ್ಷೆ. ಅಜ್ಞಾನದಿಂದ ಅಧೋಗತಿ. ಅದನ್ನು ಹೋಗಲಾಡಿಸಬೇಕು. ಜ್ಞಾನ ಆನುವಂಶಿಕವಾಗಿ ಬರುವ ಲಲಿತಕಲೆಯಲ್ಲ; ಸತತ ಸ್ವಪ್ರಯತ್ನದಿಂದ ಲಭಿಸುವ ಮಹಾ ಕಲ್ಪತರು. ದೇವರ ಹೆಸರಿನಲ್ಲಿ ಗೊಡ್ಡು ಸಂಪ್ರದಾಯ ಸಲ್ಲದು; ಜ್ಞಾನವಿದ್ದವರ ಹತ್ತಿರ ದೈವತ್ವವಿರುತ್ತದೆ ಎನ್ನುವ ಪ್ರತಿಪಾದಕ.

ಸಾಕ್ರೆಟಿಸ್ ಪರಮ ತತ್ವಜ್ಞಾನಿ. ವಿಚಾರಶೀಲತೆಗೆ ಅವನೇ ಶ್ರೇಷ್ಠ ಮಾದರಿ. ಇಂಥ ದಾರ್ಶನಿಕನಿಗೆ ತನ್ನ ಊರಾದ ಅಥೆನ್ಸ್‌ನಲ್ಲಿ ಅರ್ಧಕ್ಕೂ ಹೆಚ್ಚು ವಿರೋಧಿಗಳು. ದೇವರನ್ನು ನಂಬಲಾರದ ನಾಸ್ತಿಕ, ತನ್ನ ವಿಚಾರವೊಂದೇ ಸಾಕ್ಷಾತ್ ದೇವರು, ತನ್ನ ಯಕ್ಷಿಣಿ ಮಾತಿನಿಂದ ಯುವಕರನ್ನು ಕೆಡಿಸುತ್ತಾನೆ—ಎಂದೆಲ್ಲಾ ಅಪಾದನೆಯನ್ನು ಹೊರಿಸಿ ಅಪಾದಿತನನ್ನಾಗಿ ಮಾಡಿ ಕಟಕಟೆಯಲ್ಲಿ ನಿಲ್ಲಿಸಿದರು. ವಿಷ ಸೇವಿಸಿ ಅಸುನೀಗಬೇಕೆಂಬ ಕಠೋರ ಶಿಕ್ಷೆ ವಿಧಿಸಿದರು. ಸಾಕ್ರೆಟಿಸ್ ವಿರೋಧಿಗಳ ಸಂತೋಷಕ್ಕೆ ಹಾಗೇ ಮಾಡಿದ.

ಎಂಥ ಪ್ರಾಣಾಪಾಯದ ಪ್ರಸಂಗವೇ ಇರಲಿ, ಆತ್ಮಾಭಿಮಾನದ ಕುಂದಿನ ವಿಷಯವೇ ಆಗಿರಲಿ ಸಾಕ್ರೆಟಿಸ್ ಮಹಾ ಸಹನಾಮೂರ್ತಿ. ಇವನ ಹೆಂಡತಿ ಕಡುಕೋಪದ ಅಹಂಕಾರದ ಹೆಣ್ಣು. ಒಂದು ದಿನವೂ ಗಂಡನ ಜೊತೆ ಸಹಕರಿಸಿದವಳಲ್ಲ.

ಒಮ್ಮೆ ಅಡಿಗೆ ಮನೆಯಲ್ಲಿ ಅವನ ಹೆಂಡತಿ ಪಾತ್ರೆ ತಿಕ್ಕುತ್ತಿದ್ದಳು. ಸಾಕ್ರೆಟಿಸ್ ಅಭ್ಯಾಸ ಮಗ್ನನಾಗಿದ್ದ. ಹೀಗೆ ಅಧ್ಯಯನಕ್ಕೆ ಕುಳಿತಾಗ ಆವನು ತುಸು ಏಕಾಗ್ರಚಿತ್ತನಾಗಿರುತ್ತಿದ್ದ. ಹೆಂಡತಿಗೆ ಇದನ್ನು ನೋಡಲಾಗುತ್ತಿದ್ದಿಲ್ಲ. ಯಾವುದೋ ವಿಷಯವಾಗಿ ಕಾಲು ಕೆದರಿ ಜಗಳ ತೆಗೆದು ಒಳಗಿಂದಲೇ ಗಂಡನನ್ನು ಹೀನಾಯವಾಗಿ ಬೈಯುತ್ತಿದ್ದಳು. ಚೀರುತ್ತಿದ್ದಳು. ಬೇಕಂತಲೇ ಪಾತ್ರೆಪಗಡೆಗಳನ್ನು ಕುಕ್ಕರಿಸುತ್ತಿದ್ದಳು, ಬಿಸಾಡುತ್ತಿದ್ದಳು, ಸಾಕ್ರೆಟಿಸ್ ಇದಾವದಕ್ಕೂ ಗಮನ ಕೊಡುತ್ತಿರಲಿಲ್ಲ. ಹೆಂಡತಿಯ ಸಿಟ್ಟು ನೆತ್ತಿಗೇರಿತು. ಪಾತ್ರೆ ತೊಳೆದ ನೀರನ್ನು ಹೊರಗೆ ಚೆಲ್ಲಲು ತೆಗೆದುಕೊಂಡು ಹೋಗುತ್ತಿದ್ದಾಗ ಗಂಡ ಕುಳಿತ ಕೋಣೆಯ ಕಡೆಗೆ ನೋಡಿದಳು. ಸಾಕ್ರೆಟಿಸ್ ತನ್ನದೇ ಆದ ಲೋಕದಲ್ಲಿದ್ದ. ಹೆಂಡತಿಗೆ ಸಹನೆ ತಪ್ಪಿತು. ಕೈಯಲ್ಲಿದ್ದ ಹೊಲಸು ನೀರನ್ನು ಅವನ ಮೇಲೆ ಸುರುವಿಬಿಟ್ಟಳು.

"ಇದು ವರೆಗೂ ಗುಡುಗು ಸಿಡಿಲುಗಳಾಗಿ ಈಗ ಮಳೆಯಾಯಿತೆಂದು ಕಾಣುತ್ತದೆ!" ಇದು ಸಾಕ್ರೆಟಿಸನ ಪ್ರತಿಕ್ರಿಯೆ.

—ನೋಹನ ಕಳಸದ

# ಅತ್ತೆಯಾಗಲಿಲ್ಲ 'ಅನಸಕ್ತ...'

ಸೌ. ಅರುಂಧತಿ ಗೋ. ಹೊಸಕೇರಿ

ಅರುವತ್ತೊಂದು ವರ್ಷಗಳ ತುಂಬು ಬಾಳನ್ನು ಬಾಳಿ ಕಳೆದ ವರ್ಷದ ಅಗಸ್ಟ ತಿಂಗಳಲ್ಲಿ ನಿಧನರಾದ ಸೌ. ಕಮಲಾಬಾಯಿ ಹೊಸಕೇರಿ (ಶ್ರೀ ನಾ. ಅ. ಹೊಸಕೇರಿಯವರ ಪತ್ನಿ) ಯವರನ್ನು ಅವರ ಸೊಸೆ ಸೌ. ಅರುಂಧತಿ ಗೋ. ಹೊಸಕೇರಿ ಕಂಡ ಬಗೆಯಿದು. ಆತ್ಮೀಯತೆಯ ಸಲಿಗೆಯೊಂದಿಗೆಯೇ ಅನಾಸಕ್ತ ಸಮಾಜ ವಿಜ್ಞಾನಿಯಂತೆ ತುಸು ದೂರ ನಿಂತು ನೋಡುವ ಪ್ರವೃತ್ತಿಯನ್ನೂ ಲೇಖಿಕೆಯಲ್ಲಿ ಕಾಣಬಹುದು.

ಪ್ರಿಯ ಗೆಳತಿ,

ಸುಮಾರು ತಿಂಗಳುಗಳಿಂದ ನಿನಗೆ ಬರೆಯಬೇಕೆಂದುಕೊಳ್ಳುತ್ತಿದ್ದರೂ ಕೈಯಲ್ಲಿ ಪೆನ್ನು ಹಿಡಿಯಲಾಗಲಿಲ್ಲ. ಕ್ಷಮಿಸು ಎಂದರೆ ಔಪಚಾರಿಕವಾದೀತು. ಆದರೆ ಕನಸುಗಾತಿಯೆಂದು ನನ್ನನ್ನು ನೀನು ಛೇಡಿಸುತ್ತಿದ್ದ ಆ ದಿನಗಳ ನೆನಪು ನನಗೆಷ್ಟೂ ಮರೆತಿಲ್ಲ. ನನ್ನ ಅಂದಿನ ಕನಸುಗಳಿಗೆ ಕಲ್ಪನಾವಿಲಾಸವೇ ನೆಲೆಗಟ್ಟಾಗಿತ್ತೆಂದು ನೀನು ಎಚ್ಚರಿಸುತ್ತಿದ್ದಿ; ಜಗತ್ತು ನಾವೆಣಿಸಿದಷ್ಟು ಸುಂದರವೂ ಇರುವುದಿಲ್ಲವೆಂದು ನೀನು ನನ್ನ ಕನಸಿನ ಅರಮನೆಯ ಗೋಡೆಗಳಲ್ಲಿ ತೂತು ಕೊರೆಯುತ್ತಿದ್ದಿ. ಆಗೆಲ್ಲ ನನಗೆ ನಿನ್ನ ಬಗ್ಗೆ ಎಲ್ಲಿಲ್ಲದ ಕೋಪ. ನಾವೆಷ್ಟು ಸುಧಾರಿಸಿದವರೆಂದುಕೊಂಡರೂ ಸುಶಿಕ್ಷಿತೆಯರೆಂದುಕೊಂಡರೂ ಅತ್ತೆಯೆಂಬಾಕೆಗೆ ತೊತ್ತಾಗದೆ ಗತಿಯಿಲ್ಲವೆಂದು ನೀನು ಹೇಳಿದಾಗೆಲ್ಲ, "ಅತ್ತೆ ಮಾವಂದಿರ ಜಂಜಾಟವಿಲ್ಲದ ಗಂಡನನ್ನೇ ಹುಡುಕಿಕೊಳ್ಳುತ್ತೇನೆ ನೋಡ್ತಿರು" ಎಂದು ನಾನು ಉತ್ತರಿಸುತ್ತಿದ್ದುದು ಈಗಲೂ ನಿನ್ನ ನೆನಪಿನಲ್ಲುಳಿದಿರಬಹುದು.

ಆದರೂ ಮದುವೆಯೆಂಬುದು ಒಂದು ದೃಷ್ಟಿಯಿಂದ ಅದೃಷ್ಟದ ಆಟ. ಗಂಡ–ಹೆಂಡಿರಿಬ್ಬರೇ ಪುಟ್ಟದಾದ ಮನೆಯಲ್ಲಿ ಸರ್ವತಂತ್ರಸ್ವತಂತ್ರರಂತೆ ಜೊತೆ–ಬಾಳಿನ ಪ್ರಥಮ ಅಧ್ಯಾಯವನ್ನು ಬರೆಯಬೇಕೆಂದುಕೊಳ್ಳುತ್ತಿದ್ದ ನಾನು ಹಿರಿಕಿರಿಯರಾದಿಯಾಗಿ ಹತ್ತಾರು ಜನರುಳ್ಳ ತುಂಬಿದ ಮನೆಯೊಂದರ ಸೊಸೆಯಾಗಿಬಿಟ್ಟೆ. ಅಲ್ಲಿ ಅತ್ತೆ–ಮಾವ, ಭಾವ–ಮೈದುನರು, ಅತ್ತಿಗೆ–ನಾದಿನಿಯರು ಮುಂತಾಗಿ ನಾವು ಹಳೆಯ ಕಥೆಗಳಲ್ಲಿ ಓದುತ್ತಿದ್ದ ಹಿಂದೂ ಅವಿಭಕ್ತ ಕುಟುಂಬವಿದು. ನನ್ನಂಥ ಪೂರ್ತಿ ಅಪರಿಚಿತೆಯೊಬ್ಬಳು ಇಷ್ಟೊಂದು ದೊಡ್ಡ ಮನೆ ಸೇರಿದಾಗ ನನ್ನ ಅವಸ್ಥೆ ಏನಾಗಿರಬೇಡ! ನಾನಿನ್ನೂ ಹೊಸ ಸೊಸೆಯಾಗಿದ್ದಾಗ ಎಲ್ಲರೂ ಒಳ್ಳೊಳ್ಳೆ ಮಾತಾಡುವವರೇ. ಆದರೂ ನಾನೇನು ಮಾಡಿದರೆ ಯಾರೇನು ತಿಳಿದುಕೊಳ್ಳುವರೋ ಎಂಬ ದುಗುಡ ಮಾತ್ರ ನನ್ನಲ್ಲಿ ಸದಾ ಜಾಗ್ರತವಾಗಿರುತ್ತಿತ್ತು. 'ಅತ್ತೆ' ಅನ್ನುವ ಪದದಲ್ಲೇ ಅಡಗಿರುವ ಅವ್ಯಕ್ತ ಭೀತಿ ನನ್ನನ್ನು ಕಾಡದೇ ಇರಲಿಲ್ಲ. ಮೇಲಾಗಿ, ಇಂಥ ದೊಡ್ಡ ಕುಟುಂಬದಲ್ಲಿ

ನಾನು ಸಮರಸವಾಗಿ ಬೆರೆಯಬಹುದೇ ಎಂಬ ನಿನ್ನಂಥ ಗೆಳತಿಯರ ಕಾತರ; ನಾನು ಇದರಲ್ಲಿ ಪೂರ್ಣ ವಿಲೀನಳಾಗಿ ನನ್ನ ಸ್ವಂತ ಅಸ್ತಿತ್ವವನ್ನೇ ಮರೆತುಬಿಡಬಹುದೇ ಎಂಬ ನನ್ನದೇ ಆದ ಭಯ.

ಆದರೆ ಒಂದೊಂದೇ ದಿನ ಕಳೆದಂತೆ ನನ್ನಲ್ಲಿ ಸುಪ್ತವಾಗಿದ್ದ ಭಯ-ಕಾತರಗಳೆಲ್ಲ ಶಾಖಕ್ಕಿಟ್ಟ ಬೆಣ್ಣೆಯಂತೆ ತಂತಾನೆ ಕರಗತೊಡಗಿತು. ತಾನು ಹೊತ್ತು ಹೆತ್ತ ಮಕ್ಕಳನ್ನು ಪ್ರೀತಿಸಲು ಹೆಣ್ಣಿಗೆ ಯಾರೂ ಹೇಳಿಕೊಡಬೇಕಿಲ್ಲ. ಆದರೆ ಅನ್ಯರ ಮಕ್ಕಳನ್ನು ತನ್ನವೆಂದುಕೊಂಡು ಪ್ರೀತಿಯ ಧಾರೆಯೆರೆಯುವುದು ಸುಲಭದ ಮಾತೇನಲ್ಲ.

ಮಾನಸಿಕವಾಗಿ ನಾನಿನ್ನೂ ಆತಂಕಗಳನ್ನೇ ಅನುಭವಿಸುತ್ತಿದ್ದಾಗ ಒಂದು ದಿನ ನಡೆದ ಘಟನೆ. ಅಂದು ಅತ್ತೆ ನನ್ನನ್ನು ಕರೆದರು. ಯಾಕೆ ಕರೆದಿದ್ದಾರೆಂದು ನನಗೆ ಅರ್ಥವಾಗಲಿಲ್ಲವಾದರೂ ಅವರನ್ನು ನೋಡಿದರೆ ಪ್ರಸನ್ನವದನರಾಗಿರುವಂತೆ ಕಂಡಿತು. ಅವರು ತಮ್ಮ ಎಳೆ ವಯಸ್ಸಿನಿಂದ ವರ್ತಮಾನದ ವರೆಗೆ ತಮ್ಮ ಜೀವನದಲ್ಲಿ ನಡೆದುದನ್ನೆಲ್ಲ ಸಾದ್ಯಂತವಾಗಿ ಹೇಳಿದರು. ಮೊದಮೊದಲು ನನಗೇನೋ ಅಜ್ಜೀ ಕತೆ ಕೇಳುತ್ತಿದ್ದಂತೆ ಅನಿಸಿತಾದರೂ ಮುಂದೆ ಮುಂದೆ ಆಸಕ್ತಿ ಕುದುರತೊಡಗಿತು. ಅವರ ಮಾತು ಮುಗಿದಾಗ ನನ್ನೊಳಗೇ ನನ್ನನ್ನು ತೂಗಿ ನೋಡಿಕೊಂಡೆ. ತಕ್ಕಡಿಯಲ್ಲಿ ನಾನು ಕೂತಿದ್ದ ಪರಡಿ ಗಗನಕ್ಕೆ ಏರಿದಂತನಿಸಿ ಅಧೋಮುಖಿಯಾದೆ. ನನ್ನ ಸುಖದ ಕಲ್ಪನೆಯಲ್ಲಿ ಗಂಡ-ಹೆಂಡಿರಿಬ್ಬರೇ ಸ್ವತಂತ್ರವಾಗಿದ್ದು ಜೀವನನೌಕೆಯಲ್ಲಿ ತೇಲುವುದೇ ಆದರ್ಶವಾಗಿತ್ತು. ಅತ್ತೆಯವರ ಜೀವನದ ಸೂಕ್ಷ್ಮ ದರ್ಶನವಾದಾಗ ನನ್ನ ಅಲ್ಪತನ ನನ್ನನ್ನು ಅಣಕಿಸಿದಂತಾಗಿ ಅರೆಕ್ಷಣ ಬೆಚ್ಚಿದೆ. ಆ ಕ್ಷಣಕ್ಕೆ ನನ್ನಲ್ಲಾದ ಒಂದು ಪರಿವರ್ತನೆಯ ಅರಿವು ಮಾತ್ರ ಎಂದೂ ಮರೆಯಲಾಗದಂಥದು. ಅಂದಿನಿಂದ ಮನೆಯಲ್ಲಿಯ ಎಲ್ಲರಂತೆ ನಾನೂ ಅವರನ್ನು 'ಅನಸಕ್ಕ' ಎಂದೇ ಕರೆಯತೊಡಗಿದೆ. ಯಾರೂ ಆಕ್ಷೇಪಿಸಲಿಲ್ಲ. ಅದು ಅಷ್ಟೊಂದು ಸಹಜ ಕ್ರಿಯೆಯಾಗಿತ್ತು.

ಹದಿನಾರನೆಯ ವಯಸ್ಸಿಗೇ ಮದುವೆಯಾಗಿ ಪತಿಗೃಹ ತುಂಬಿದ ಅನಸಕ್ಕ ಮುಂದಿನ ಮೂರು ವರ್ಷಗಳಲ್ಲೇ ವಯಸ್ಸಿಗೆ ಮೀರಿದ ಭಾರ ಹೊತ್ತುಕೊಳ್ಳಬೇಕಾಯಿತು. ಎರಡು ವರ್ಷದ ಕಿರಿಯ ಮಗನನ್ನೊಳಗೊಂಡು ಆರು ಮಕ್ಕಳನ್ನು ಬಿಟ್ಟು ತಾಯಿ ಕಣ್ಮುಚ್ಚಿದಾಗ ಈ ಗೃಹಿಣಿ ೧೭ ವರ್ಷದ ತಂಗಿಯಿಂದ ಎರಡು ವರ್ಷದ ತಮ್ಮನವರೆಗೆ ಎಲ್ಲರಿಗೂ ತಾಯಿಯಾಗಬೇಕಾಯಿತು. ಗಂಡನ ಮನೆಯೊಂದಿಗೆ ತಂದೆಯ ಮನೆಯ ಯಜಮಾನತಿಯೂ ಅವರಾಗಬೇಕಾಯಿತು. ತಮ್ಮ ಸಂಸಾರದೊಟ್ಟಿಗೇ ತಂಗಿ-ತಮ್ಮಂದಿರನ್ನೂ ಪೋಷಿಸಿ ಬೆಳೆಸಿ ಅವರನ್ನೆಲ್ಲ ಅವರವರ ದಾರಿಗೆ ಹಚ್ಚುವ ಮೂಲಕ ಕರ್ತವ್ಯವನ್ನು ಅವರು ತಾಳ್ಮೆಯಿಂದ ಅಚ್ಚುಕಟ್ಟಾಗಿ ನಿರ್ವಹಿಸಿದರು. ಇಂದು ತಂತಮ್ಮ ಕ್ಷೇತ್ರದಲ್ಲಿ ತಮ್ಮಂದಿರು ಸಾಕಷ್ಟು ದೊಡ್ಡವರೇ ಆಗಿದ್ದರೂ ಅಕ್ಕ ಇರುವ ತನಕ ಆಕೆ ಹಾಕಿದ ಗೆರೆಯನ್ನು ದಾಟುವ ಸಾಹಸವನ್ನೊಬ್ಬರೂ ಮಾಡಲಿಲ್ಲ.

ಅವಿಭಕ್ತ ಹಿಂದೂ ಕುಟುಂಬದ ಗುಣದೋಷಗಳ ಬಗ್ಗೆ ಸಮಾಜಶಾಸ್ತ್ರದಲ್ಲಿ ಬೇಕಷ್ಟು ಓದುತ್ತೇವೆ, ಕ್ಲಾಸುಗಳ ಒಳಗೂ ಹೊರಗೂ ಬೇಕಾದಷ್ಟು ಚರ್ಚಿಸುತ್ತೇವೆ. ಆದರೆ ಅಲ್ಲೆಲ್ಲ ಒಂದು ಮಹತ್ವದ ಅಂಶ ನಮ್ಮಿಂದ ಮರೆಯಾಗಿಬಿಟ್ಟಿರುತ್ತದೆ. ಅದೆಂದರೆ ಇಂಥ ಕುಟುಂಬದ ಕೇಂದ್ರ ವ್ಯಕ್ತಿಗಳಾಗಿರುವ ಯಜಮಾನ ಯಜಮಾನತಿಯರ ಪಾತ್ರ. ನಮ್ಮ ಅತ್ತೆಯವರನ್ನು ನೀನು ನೋಡಿದ್ದರೆ ಇಂಥ ಕೇಂದ್ರ ವ್ಯಕ್ತಿಯು ಇಲ್ಲವೆ ಹತ್ತಾರು ಟಿಸಿಲೊಡೆದ ಭವ್ಯ ಆಲದ ಮರದ ತಾಯಿಬೇರಿನ ಕಲ್ಪನೆ ನಿನಗೆ ಬರಬಹುದಿತ್ತು. ಯಾವುದೇ ದೊಡ್ಡ ಅವಿಭಕ್ತ ಕುಟುಂಬದಲ್ಲಿ ಅಂತಃಕಲಹ, ಮನಸ್ತಾಪಗಳು ಅನಿವಾರ್ಯವೆಂಬಷ್ಟು ಮಟ್ಟಿಗೆ ಸ್ವಾಭಾವಿಕವೆನಿಸಿಬಿಟ್ಟಿರುತ್ತದೆ. ಆದರೆ ಇಂಥ ಸಂಭಾವ್ಯ ಪರಿಸ್ಥಿತಿಯಲ್ಲೂ ಅನಸಕ್ಕ ತಾಳ್ಮೆಯ ಮಡುವಾಗಿ, ಬಿದ್ದ ಪೆಟ್ಟುಗಳನ್ನು ನುಂಗಿಕೊಂಡು, ಇತರರು ತಪ್ಪಿದಾಗ ರೇಗಿದರೂ ಯಾರ ಮನಸ್ಸನ್ನೂ ನೋಯಿಸದಂತೆ ನಯವಾಗಿ ಬುದ್ಧಿ

ಹೇಳಿ ವಾತಾವರಣವನ್ನು ತಿಳಿಗೊಳಿಸುವ ಅವರ ಕಲೆಯನ್ನು ನೀನು ನೋಡಬೇಕಿತ್ತು.

ನಾನು ಈ ಮನೆಗೆ ಬಂದು ಕೆಲವೇ ವರ್ಷಗಳು ಉರುಳಿವೆಯಾದರೂ ಅತ್ತೆಯವರ ಸ್ವಭಾವದ ಹಲವಾರು ಪದರಗಳನ್ನು ಹತ್ತಿರದಿಂದ ಅರಿಯುವ ಸೌಭಾಗ್ಯ ನನ್ನದಾಗಿತ್ತು. ಅವರಲ್ಲಿ ಮನೆ ಮಾಡಿದ್ದ ಧಾರ್ಮಿಕ ಶ್ರದ್ಧೆ ಎಂಥ ನಾಸ್ತಿಕನಲ್ಲೂ ಆಸ್ತಿಕತೆ ಮೂಡಿಸುವಂತಿತ್ತು. ಆದರೆ ಇದೆಲ್ಲಕ್ಕಿಂತ ಹೆಚ್ಚಾಗಿ ತಮ್ಮ ದುಃಖ ಏನೇ ಇದ್ದರೂ ಇನ್ನೊಬ್ಬರು ತಮ್ಮ ಸಂಕಟ ತೋಡಿಕೊಂಡಾಗ ತಕ್ಷಣ ಅವರನ್ನು ಸಂತಯಿಸುವ, ಅವರಿಗೆ ಆಸರೆಯಾಗಿ ನಿಲ್ಲುವ ಗುಣವನ್ನೂ ಕಂಡೇ ಅರಿಯಬೇಕು. ಜೀವನದ ನಾನಾ ಮುಖಗಳನ್ನೂ ಏರುಪೇರುಗಳನ್ನೂ ಕಂಡಿದ್ದ ಅವರಿಗೆ ದುಡ್ಡಿನ ಮಹತ್ವವೂ ಗೊತ್ತಿತ್ತು. ಕೈ ತುಂಬ ಸಂಪಾದನೆ ಮಾಡುವ ಮಕ್ಕಳಿಗೆ ಸಹ ಈ ವಿಷಯದಲ್ಲಿ ತಾಯಿಯ ಹಿತವಾದ ನಿರ್ಬಂಧಗಳು.

ಹೆಚ್ಚು ಓದಿರದಿದ್ದರೂ ಎಲ್ಲವನ್ನೂ ತಿಳಿಯಬೇಕೆಂಬ ಕುತೂಹಲ ಅವರಿಗೆ. ಅವರ ಮಗನೇ ಆಗಲಿ, ನಾನೇ ಆಗಲಿ ನವ್ಯ ಧಾಟಿಯ ಚಿತ್ರಗಳನ್ನೋ ಕವನಗಳನ್ನೋ ಬರೆದಾಗ ಅವರಿಗೆ ಸಮಾಧಾನವಾಗುವ ರೀತಿಯಲ್ಲಿ ನಾವು ವಿವರಿಸಿ ಹೇಳಬೇಕಿತ್ತು. ಇಂಥ ಅನೇಕ ಸಂದರ್ಭಗಳಲ್ಲಿ ನಾವು ಪೇಚಿಗೆ ಸಿಲುಕಿದ್ದೂ ಉಂಟು. ಸಂಗೀತವನ್ನವರು ಶಾಸ್ತ್ರೀಯವಾಗಿ ಅಭ್ಯಸಿಸಿರದಿದ್ದರೂ ಅದರಲ್ಲವರಿಗೆ ಅಪಾರ ಆಸಕ್ತಿ. ಅವರೇ ಮಧುರ ಕಂಠದಿಂದ ದಾಸರ ಪದಗಳನ್ನು ಭಾವಪೂರ್ಣವಾಗಿ ಹಾಡತೊಡಗಿದರೆ ಮನೆಯ ಮುಂದೆ ಹಾಯ್ದು ಹೋಗುವವರೂ ಅರೆನಿಮಿಷ ನಿಂತು ಕೇಳಿ ಹೋದದ್ದೂ ಉಂಟು.

೧೯೪೨ರ ಸ್ವಾತಂತ್ರ್ಯಾಂದೋಲನದ ಸಮಯದಲ್ಲಿ ಪತಿ ಅವರಲ್ಲಿ ಧುಮುಕಿದಾಗ ಎದೆಗುಂದದೇ ಮನಗಿನಂಥ ಸಂಸಾರದ ಭಾರಕ್ಕೆ ಹೆಗಲು ಕೊಟ್ಟುದಲ್ಲದೆ ತಲೆಮರೆಸಿಕೊಂಡು ಇವರ ಮನೆಗೆ ಬರುತ್ತಿದ್ದ ಸ್ವಾತಂತ್ರ್ಯಯೋಧರಿಗೆ ರಕ್ಷಣೆ ನೀಡಿದ ಎದೆಗಾರಿಕೆ ಇವರದು.

ಅನಸಕ್ಕ ಹೋಗಿ ಒಂದು ವರ್ಷ ಸವೆಯಿತಾದರೂ ಮನೆಗೆ ಬರಹೋಗುವವರಿಗೆಲ್ಲ ಅವರಿಲ್ಲದ ಕೊರತೆಯೇ. ಇನ್ನೂ ಎದ್ದು ಕುಡು ಮನೆ ಬಿಕೋ ಅನಿಸುತ್ತದಂತೆ.

■

ಇಷ್ಟೆಲ್ಲ ಬರೆದ ನಂತರ ನಿನಗೇ ಇದನ್ನೆಲ್ಲ ಏಕೆ ಬರೆದೆ ಎಂದು ಅನಿಸಿಬಿಡುತ್ತಿದೆ. ಆದರೆ ಮಾತು ತಿಳಿದಾಗಿನಿಂದಲೂ ನಾವಿಬ್ಬರೂ ಕೂಡಿ ಬೆಳೆದವರು – ಸೋದರಿಯರಂತೆ. ನಿನ್ನೊಡನಲ್ಲದಿದ್ದರೆ ನನ್ನ ಅಂತರ್ಯದಲ್ಲಿಯ ಸುಖ ದುಃಖಗಳನ್ನು ಯಾರೊಡನೆ ಹೇಳಿಕೊಳ್ಳಲಿ?

ನಿನ್ನ,

**ಅರುಂಧತಿ**

## ಒಂದೇ ಮಾದರಿ

ಮೋಟಾರ್ ಕಾರಿನ ಜನಕ ಹೆನ್ರಿ ಫೋರ್ಡ್ ಮತ್ತು ಅವನ ಧರ್ಮಪತ್ನಿ ಕ್ಲೇರಾ ಫೋರ್ಡ್ ತಮ್ಮ ಮದುವೆಯ ೫೦ನೇ ವಾರ್ಷಿಕೋತ್ಸವವನ್ನು ಆಚರಿಸುತ್ತಿದ್ದರು. ಅದರ ನಿಮಿತ್ತವಾಗಿ ಒಂದು ಸಂತೋಷ ಕೂಟವನ್ನು ಏರ್ಪಡಿಸಿದ್ದರು. ಈ ಕಾರ್ಯಕ್ರಮದಲ್ಲಿ ಅವರ ಬಂಧು ಬಳಗ, ಫೋರ್ಡ್ ಕಂಪನಿಯ ಸಿಬ್ಬಂದಿ ವರ್ಗ ಮತ್ತು ಅಸಂಖ್ಯ ಗೆಳೆಯರನ್ನು ಆಮಂತ್ರಿಸಿದ್ದರು. ಈ ಸಂದರ್ಭದಲ್ಲಿ ಅವರ ಮಿತ್ರನೊಬ್ಬ ಹೆನ್ರಿ ಫೋರ್ಡ್‌ರಿಗೆ, "ನಿಮ್ಮ ಈ ಸುದೀರ್ಘ ಸುಖಿ ಸಹಜೀವನದ ಗುಟ್ಟೇನು?" ಎಂದು ಕೇಳಿದ. ಅದಕ್ಕೆ ಫೋರ್ಡರು, "ನಾನು ನನ್ನ ಕಾರ್ ಉತ್ಪಾದನೆಯ ತತ್ವವನ್ನೇ ನನ್ನ ಸ್ವಂತ ಜೀವನದಲ್ಲೂ ಅನ್ವಯಿಸುತ್ತೇನೆ. ಅದೇನೆಂದರೆ ನಾನು ನನ್ನ ಕಾರಿನ ಮಾಡೆಲ್ ಬದಲಿಸುವುದಿಲ್ಲ, ಒಂದೇ ಮಾಡೆಲ್ಲಿಗೆ (ಹೆಂಡತಿ) ಅಂಟಿಕೊಳ್ಳುತ್ತೇನೆ" ಎಂದು ಚಟಕ್ಕನೆ ಉತ್ತರಿಸಿದರು.

– ವಿಜಯ ತೆರಗುಂದಿ

ಬೇಕು?' ಲೇಖನವನ್ನು ಪ್ರಕಟಿಸಿದ ನಂತರ ಸಮಸ್ಯೆಯ ಹಲವಾರು ಮುಖಗಳನ್ನು ವಿಶ್ಲೇಷಿಸಿ, ವಿವಿಧ ಭಾವನೆಗಳಿಗೋ ಭಾವಾತಿರೇಕಗಳಿಗೋ ಶಬ್ದರೂಪ ಕೊಟ್ಟ ಅನೇಕ ಓದುಗರಿಂದ ಪ್ರತಿಕ್ರಿಯೆಗಳು ಬಂದಿವೆ, ಇನ್ನೂ ಬರುತ್ತಲೇ ಇವೆ. ಆಗಸ್ಟ್ ತಿಂಗಳಲ್ಲಿ ಕೆಲವನ್ನು ಮತ್ತು ಈ ತಿಂಗಳು ಇನ್ನೊಂದನ್ನು ಮಾತ್ರ ಪ್ರಕಟಿಸಲು ಸಾಧ್ಯವಾಯಿತು. 'ಕಸ್ತೂರಿ'ಯ ಪುಟಗಳ ಪರಿಮಿತಿಯಿಂದಾಗಿ ಅನೇಕ ಅಭಿಮಾನಿ ಓದುಗರನ್ನು ನಿರಾಶೆಗೊಳಿಸಬೇಕಾಗಿ ಬಂದುದಕ್ಕೆ ವಿಷಾದಿಸುತ್ತೇವೆ. ಅಕ್ಟೋಬರ್ ಸಂಚಿಕೆಯಲ್ಲಿ ಪ್ರಾ. ವೆಂ. ಈ ಚರ್ಚೆಗೆ ಉತ್ತರವಿತ್ತು ಚರ್ಚೆಯನ್ನು ಮುಕ್ತಾಯ ಮಾಡುತ್ತಾರೆ. ಈ ಚರ್ಚೆಯಲ್ಲಿ ಭಾಗವಹಿಸಿದ ಓದುಗರಿಗೆ ಕೃತಜ್ಞತೆಗಳು. –ಸಂ.

# ಬ್ರಾಹ್ಮಣರೇನು ಮಾಡಬಾರದು?

ಹಿಂದೊಮ್ಮೆ ಪ್ರಾ. ವೆಂ. ಆಚಾರ್ಯರು ಹರಿಜನ ಸಮಸ್ಯೆಯನ್ನು ಕುರಿತು ಬರೆದಾಗ ನಾನು ಅದಕ್ಕೆ ವಿವರವಾದ ಉತ್ತರವನ್ನು ಬರೆದದ್ದನ್ನು 'ಕಸ್ತೂರಿ' ಸಂಪಾದಕರಾಗಿದ್ದ ಅವರು ಉದಾರವಾಗಿ ಪ್ರಕಟಿಸಿದರು. ಇಂದು ಬ್ರಾಹ್ಮಣರ ಸಮಸ್ಯೆಗೆ ಅವರು ಬರೆದಿರುವ ಪರಿಹಾರಗಳನ್ನು ನಾನು ಒಪ್ಪುವದಿಲ್ಲ. ಹಿಂದುಗಳಲ್ಲಿ ಬೇಕಾದವರು ತಾವು ಅಲ್ಪಸಂಖ್ಯಾತರೆಂದು ಗುಂಪು ಕಟ್ಟಿಕೊಳ್ಳಲಿ. ಆದರೆ ಬ್ರಾಹ್ಮಣರು ಹಾಗೆ ಗುಂಪು ಕಟ್ಟಿಕೊಳ್ಳುವದು ಆತ್ಮಘಾತ. ದೇಶಘಾತವೂ ಅಹುದು.

ಯಹೂದ್ಯರ ದೃಷ್ಟಾಂತ ತೀರಾ ಅಸಮರ್ಪಕವಾದದ್ದು. ಯಹೂದ್ಯರು ಈಜಿಪ್ತ್, ಬೆಬಿಲೋನಿಯನ ಕಾಲದಿಂದ ಯುರೋಪ್ ಅಮೇರಿಕಗಳ ಕಾಲದವರೆಗೂ ಯಾವ ದೇಶದಲ್ಲಿದ್ದರೂ ಹೊರಗಿನವರಾಗಿಯೇ ಇದ್ದಾರೆ. ಐತಿಹಾಸಿಕವಾಗಿಯೂ ಧಾರ್ಮಿಕವಾಗಿಯೂ ಆಯಾ ದೇಶಗಳ ಬಹುಸಂಖ್ಯಾತ ಸಮಾಜಕ್ಕೆ ವಿರೋಧಿಗಳೆನಿಸಿದ್ದಾರೆ. ಬ್ರಾಹ್ಮಣರ ಸ್ಥಿತಿ ಹಾಗೆ ಎಂದಿಗೂ ಇರಲಿಲ್ಲ. ಇಂದೂ ಇಲ್ಲ. ನಮ್ಮ ಪುರಾಣೇತಿಹಾಸಗಳ ಕಾಲದಿಂದಲೂ ಹೊರಗಿನವರು (ದಾನವರು, ದಸ್ಯುಗಳು) ಭಾರತೀಯರನ್ನು ನಾಶ ಮಾಡಬೇಕಾದರೆ ಮೊದಲು ಬ್ರಾಹ್ಮಣರನ್ನು ನಾಶ ಮಾಡಬೇಕು, ಅಂದರೆ ಭಾರತೀಯರ ದೇವರುಗಳು ನಾಶವಾಗುತ್ತವೆ. ಅದರಿಂದ ಭಾರತೀಯರೂ ನಾಶವಾಗುತ್ತಾರೆ ಎಂದು ಘಂಟಾಘೋಷವಾಗಿ ಹೇಳಿದ್ದಾರೆ. ಹಾಗೆ ಯತ್ನ ಮಾಡಿದವರು ತಾವೇ ನಾಶವಾದರಲ್ಲದೆ ಮುಂದೆ ಭಾರತದಲ್ಲಿ ನೆಲೆಯೂರಿ ನಿಂತವರು ತಮ್ಮ ನಿಲುವನ್ನು ಪೂರ್ತಿಯಾಗಿ ಬದಲಿಸಿದರು. ಮೊಗಲ್ ಬಾದಶಹರ ಆಶ್ರಯದಲ್ಲಿ ವಿದ್ವಾಂಸವಾದ ಬ್ರಾಹ್ಮಣರಿದ್ದರೆಂಬುದಕ್ಕೆ ಐತಿಹಾಸಿಕ ದಾಖಲೆಗಳು ಊರೂರಿಗೆ ಇರುವವಲ್ಲದೆ ಮೊಗಲ್ ಸಾಮ್ರಾಜ್ಯದಲ್ಲಿ ಸಾರ್ವತ್ರಿಕವಾಗಿ ಗೋವಧೆಯನ್ನು ನಿಷೇಧಿಸಲಾಗಿತ್ತು ಎಂದು ಒಬ್ಬ ಮುಸಲ್ಮಾನ ವಿದ್ವಾಂಸರೇ ಇತ್ತೀಚಿನ ತಮ್ಮ ಲೇಖನದಲ್ಲಿ ಹೇಳಿದ್ದಾರೆ. (Illustrated Weekly ೧೬–೫–೮೧). ಸಣ್ಣಪುಟ್ಟ ರಾಜರುಗಳು ಕೂಡ ತಾವು ಯಾವ ಜಾತಿಯವರೇ ಆಗಿದ್ದರೂ ಗೋಬ್ರಾಹ್ಮಣ ಪರಿಪಾಲಕ

ರೆಂದು ಹೇಳಿಕೊಳ್ಳುವದರಲ್ಲಿ ಹೆಮ್ಮೆ ಪಡುತ್ತಿದ್ದರು. ಬ್ರಾಹ್ಮಣರು ಎಂದೆಂದಿಗೂ ಭಾರತದಲ್ಲಿ ಅಷ್ಟೊಂದು ಸಮರಸರಾಗಿ ಬಾಳಿದ್ದಾರೆ. ಈ ಮಾತನ್ನು ಈ. ಬಿ. ಹ್ಯಾವೆಲ್ ಎಂಬ ಕ್ರೈಸ್ತ ವಿದ್ವಾಂಸರು ಮೂರು ತಲೆಮಾರುಗಳ ಹಿಂದೆಯೇ ಹೇಳಿದ್ದಾರೆ. (History of the Aryan role in India). ಇಂದಿಗೂ ರಾಮೇಶ್ವರದಿಂದ ಬದರೀನಾಥದವರೆಗೂ ದ್ವಾರಕೆಯಿಂದ ಪುರೀ ಪುರದವರೆಗೂ ಬ್ರಾಹ್ಮಣರ ದೇವರುಗಳು ಎಂದಿಗಿಂತಲೂ ಹೆಚ್ಚಿನ ವೈಭವದಿಂದ ವಿಜೃಂಭಿಸುತ್ತಿದ್ದಾರೆ. ಆ ದೇವಸ್ಥಾನಗಳಲ್ಲಿ ಹರಿಯುತ್ತಿರುವ ಹೊನ್ನಹೊಳೆಗಳಲ್ಲಿ ಸಾವಿರದಲ್ಲಿ ಒಂದು ಪಾಲೂ ಕೇವಲ ಬ್ರಾಹ್ಮಣರೆಂಬವರಿಂದಲೇ ಬಂದದ್ದಿರಲಾರದು.

ಹಾಗಾದರೆ ಬ್ರಾಹ್ಮಣರ ದ್ವೇಷ ಎಂಬುವದು ಎಂದು, ಹೇಗೆ ಬಂದಿತು?

ಇದು ನಮ್ಮ ತಲೆಮಾರಿನಲ್ಲಿಯೇ ಚುನಾಯಿತ ಅಧಿಕಾರ ಸಂಸ್ಥೆಗಳಿಂದ ಆರಂಭವಾಯಿತು. ನನ್ನ ಚಿಕ್ಕಂದಿನಲ್ಲಿಯೇ ಇದು ವಿಜಾಪುರದಲ್ಲಿ ಹೇಗೆ ಆರಂಭವಾಯಿತೆಂಬುದನ್ನು ಕಣ್ಣಾರೆ ಕಂಡಿದ್ದೇನೆ. ಧಾರವಾಡ ಹುಬ್ಬಳ್ಳಿಗಳಲ್ಲಿಯೂ ಇದನ್ನು ಕಂಡು ಕನಿಕರಿಸಿ ಅಸಹಾಯಕತೆಯಿಂದ ಕೈ ಚೆಲ್ಲಿದವರು ಇಂದಿಗೂ ಇರಬಹುದು. ಇಂದು ಪಂಚಾಯಿತ್ತಿಯಿಂದ ಪಾರ್ಲಿಮೆಂಟಿನವರೆಗೆ ಪ್ರತಿಯೊಂದು ಚುನಾವಣೆಯಲ್ಲಿಯೂ ಈ ದ್ವೇಷ ಹೊತ್ತಿ ಉರಿಯುತ್ತಿದೆ.

೧೯೩೭ರ ಚುನಾವಣೆಗಳ ಹೊತ್ತಿಗೆ ನಾನು ಮತದಾನದ ವಯಸ್ಸಿಗೆ ಬಂದಿದ್ದೆನಲ್ಲದೆ ಚುನಾವಣೆಗಳ ಸಿದ್ಧತೆಗಳನ್ನು ನಡೆಸುವದರಲ್ಲಿಯೂ ಸರಕಾರೀ ನೌಕರನಾಗಿ ನನ್ನ ಪಾತ್ರವಿದ್ದಿತು. ನನ್ನ ಆಪ್ತ ಮಿತ್ರರಾದ ಅನೇಕ ಬ್ರಾಹ್ಮಣ ಉಮೇದುವಾರರಿಗೂ ಅವರ ಬೆಂಬಲಿಗರಿಗೂ ನಾನು ಅನೇಕ ಸಲ ಪ್ರತಿಯೊಂದು ಚುನಾವಣೆಯಲ್ಲಿಯೂ ಅಂಗಲಾಚಿ ಹೇಳಿದ್ದೇನೆ—"ವಿಧಾಯಕ ಕಾರ್ಯಗಳಲ್ಲಿ ನೀವು ಒಳ್ಳೆಯ ಹೆಸರು ಗಳಿಸಿದ್ದೀರಿ. ಹೊಟ್ಟೆ ಬಟ್ಟೆಗಳಿಗೆ ಕೊರತೆಯೇನೂ ಇಲ್ಲ. ಇನ್ನು ಮುಂದೆ ನೀವೇ ಕೈ ಬಿಟ್ಟರೆ ವಿಧಾಯಕ ಕಾರ್ಯಕ್ರಮಗಳು ನಿಂತು ಹೋಗುತ್ತವೆ. ಇಲ್ಲವೆ ರಾಜಕೀಯ ಬಲ ಸಂಪಾದನೆಯ ಸಾಧನಗಳಾಗುತ್ತವೆ. ನೀವು ಪೋಷಿಸುತ್ತ ಬಂದ ವಿದ್ಯಾದಾನ ಔದ್ಯೋಗಿಕ ಕಾರ್ಯಕ್ರಮಗಳಲ್ಲಿಯೇ ಮುಂದುವರಿಯಿರಿ. ಅದಕ್ಕೆ ಬಲವಿಲ್ಲದವರು ಸರಕಾರೀ ಖಾಸಗೀ ನೌಕರಿಗಳಿಂದ ಜೀವನ ನಡೆಸಬಹುದು. ಈ ರಾಜಕೀಯ ಕಾಳಗಕ್ಕೆ ಇಳಿಯುವುದು ಬೇಡ. ಇದರಲ್ಲಿ ನಿಮ್ಮವರ ಮತಗಳು ಎಲ್ಲಿಗೂ ನಿಲುಕುವದಿಲ್ಲ. ಬೇರೆಯವರ ಮತ ಬೇಡಿಕೊಂಡು ನೀವು ಅಲ್ಲೊಬ್ಬರಿಲ್ಲೊಬ್ಬರು ಚುನಾಯಿತರಾದರೂ ಬಹುಮತದವರ ಒಪ್ಪಿಗೆ ಇಲ್ಲದೆ ಏನೂ ಮಾಡಲಾರಿರಿ. ಆದ್ದರಿಂದ ಅವರ ಅಧಿಕಾರವನ್ನು ಅವರ ಕೈಯಲ್ಲೇ ಕೊಟ್ಟು ಒಳ್ಳೆಯವರಾಗಿ ಬಾಳಿರಿ. ನಮ್ಮ ಮೇಲೆ ಇನ್ನೊಬ್ಬರು ಕೈ ಮಾಡದೇ ಇರುವದಕ್ಕೆ ನೀವು ಗಳಿಸಿದ ಸ್ಥಾನಮಾನಗಳೇ ಸಾಕು. ಇಲ್ಲವೆಂದರೆ ಕಾನೂನಿನಲ್ಲೂ ಬೇಕಾದಷ್ಟು ರಕ್ಷಣೆಯಿದೆ. ಅದನ್ನು ಕಾಯ್ದುಕೊಳ್ಳಿರಿ." ಆದರೆ 'ಊರ್ಧ್ವಬಾಹುರ್ವಿರೌಮ್ಯೇಷಃ ನ ಚ ಕಶ್ಚಿತ್ ಶೃಣೋತಿಮಾಮ್' ಎಂದು ವ್ಯಾಸ ಮಹರ್ಷಿಗಳಂಥವರೇ ಕೈಯೆತ್ತಿದಾಗ ನಮ್ಮಂಥ ಅಲ್ಪರ ಮಾತು ಕೇಳಿದವರಾರು? ಆದರೆ ದುರ್ದೈವದಿಂದಲೋ ಸುದೈವದಿಂದಲೋ ಅಂದು ವ್ಯಕ್ತಪಡಿಸಿದ ಪ್ರತಿಯೊಂದು ಭಯವೂ ಸತ್ಯವಾಗಿ ಇಂದು ನಮ್ಮನ್ನು ನಮ್ಮ ದೇಶದಲ್ಲಿಯೇ ಬೇಡವಾದವರೆನ್ನಿಸುವ ಕಾಲ ಬಂದಿದೆ. ಆದರೂ ನಿರಾಶೆಗೆ ಕಾರಣವಿಲ್ಲ.

ಸಾವಿರಾರು ಮನೆಗಳಿರುವ ಗ್ರಾಮಗಳಲ್ಲಿ ಬ್ರಾಹ್ಮಣರೆನಿಸಿದವರು ತಮ್ಮ ಒಂದೋ ಎರಡೋ ಮನೆಗಳನ್ನಿಟ್ಟುಕೊಂಡು ಮರ್ಯಾದೆಯಿಂದ ಹತ್ತಾರು ತಲಾಂತರಗಳಿಂದ ಬಾಳಿದ್ದು ಸಂಖ್ಯಾಬಲದಿಂದಲ್ಲ. ಧನಬಲದಿಂದಲ್ಲ. ರಾಜಾಶ್ರಯದಿಂದಲ್ಲ. ಆ ರಾಜಾಶ್ರಯದ ರಕ್ಷಣೆ ಎಷ್ಟಿಗೆ ತಲುಪಿತೆಂಬುದನ್ನು ಅದನ್ನು ನಂಬಿದ ಹರಿಜನರು ಇಂದು ಕಾಣುತ್ತಿದ್ದಾರೆ. ಬ್ರಾಹ್ಮಣರು ಬಾಳಿದ್ದು ಸಾಮರಸ್ಯದಿಂದ, ಸಾಮಾಜಿಕ ಉಪಯುಕ್ತತೆಯಿಂದ. ಅದಕ್ಕೆ ಕಾಲ ಮೀರಿಲ್ಲವೆನ್ನುವದಕ್ಕೆ ಇತ್ತೀಚಿನ ಸತ್ಯ ಕತೆಗಳನ್ನು ಹೇಳುತ್ತೇನೆ.

ನಲವತ್ತರ ದಶಕದಲ್ಲಿ ಒಂದು ತಾಲೂಕು, ಲಿಂಗಾಯತ ಪ್ರಾಬಲ್ಯಕ್ಕೆ ಹೆಸರಾದದ್ದು, ಅಲ್ಲಿ ಒಮ್ಮೆ ಕಲೆಕ್ಟರರೂ ಕಮಿಶನರರೂ ಭೇಟ್ಟಿ ಕೊಟ್ಟಾಗ ಕೆಲವು ಪ್ರತಿಷ್ಠಿತ ಲಿಂಗಾಯತರೇ ಒಂದು ಅರ್ಜಿಯನ್ನು ಸಲ್ಲಿಸಿದರು–ನಮ್ಮ ತಾಲೂಕಿಗೆ ಲಿಂಗಾಯತ ಅಧಿಕಾರಿಗಳು ಬೇಡ ಎಂದು. ಕಮಿಶನರರಿಗೆ ಆಶ್ಚರ್ಯ! ಕಾರಣ ವೇನು ಎಂದರು. ಅರ್ಜಿದಾರರು ಹೇಳಿದ ಕಾರಣಗಳು ಹೀಗೆ–ಲಿಂಗಾಯತ ಅಧಿಕಾರಿಗಳು ಒಳ್ಳೆಯವರೇ ಆಗಿದ್ದರೂ ನಮ್ಮಲ್ಲಿಯೇ ಕೆಲವರ ಪ್ರಭಾವಕ್ಕೆ ಒಳಗಾಗಿ ಬೇರೆಯವರಿಗೆ ಅನ್ಯಾಯ ಮಾಡುತ್ತಾರೆ. ನಮ್ಮವರೇ ಎಂದು ಅವರು ಹೇಳಿಕೊಳ್ಳುವದಕ್ಕೆ ಅಂಜರಿಯುತ್ತಾರೆ. ಕೆಟ್ಟವರಾಗಿದ್ದರಂತೂ ಕೇಳುವದೇ ಬೇಡ. ಯಾರ ಭಯವೂ ಇಲ್ಲದೆ ಲಂಚ ರುಷುವತ್ತಿನ ದರಬಾರು ನಡೆಯುತ್ತದೆ. ದೂರುವದೆಂದರೆ ನಮ್ಮಲ್ಲಿಯೇ ಮತಭೇದ ಬೆಳೆಯುತ್ತದೆ, ಇದು ನಮಗೆ ಬೇಡ. ಅದಕ್ಕೆ ಕಮಿಶನರರು ಹೇಳಿದರು: ಹಿಂದೆ ಇದ್ದ ಬ್ರಾಹ್ಮಣ ಅಧಿಕಾರಿ ಲಂಚಗುಳಿ ಎಂದು ಹೆಸರಾಗಿದ್ದರಲ್ಲ? ಅರ್ಜಿದಾರರ ಉತ್ತರ, ಇದ್ದಿರಬಹುದು ಆದರೆ ನಮ್ಮ ತಾಲೂಕಿನಲ್ಲಿ ಅವರು ತುಂಬಾ ಎಚ್ಚರದಿಂದಿದ್ದರು. ಅಂತಹ ವ್ಯವಹಾರಗಳಲ್ಲಿ ಹಸ್ತಕರಾಗಿರುತ್ತಿದ್ದವರಿಗೇ ಬುದ್ಧಿ ಹೇಳಿದರು– ಈ ತಾಲೂಕಿನಲ್ಲಿ ಲಿಂಗಾಯತರ ಪ್ರಾಬಲ್ಯ, ಇದು ಪ್ರಜಾಪ್ರಭುತ್ವದ ಕಾಲ, ಮಂತ್ರಿಗಳವರೆಗೆ ದೂರು ಮುಟ್ಟಿಸುವದು ಸುಲಭ, ಇಲ್ಲಿರುವವರೆಗೆ ಅವ್ಯವಹಾರ ಬೇಡ ಎಂದು ಬಿಟ್ಟರು. ಆದ್ದರಿಂದ ನಮ್ಮ ಜಾತಿಯವರಿಗಿಂತ ಅಂತಹ ಅಲ್ಪಸಂಖ್ಯಾತರೇ ನಮಗೆ ಇರಲಿ ಎಂದರು.

ಇನ್ನೊಂದು ಉದಾಹರಣೆ. ನನ್ನ ಸಹಪಾಠಿಗಳೊಬ್ಬರು ದೊಡ್ಡ ಸಾಹುಕಾರರು, ಲಿಂಗಾಯತರು, ಅನೇಕ ತರದ ವ್ಯಾಪಾರ ಉದ್ಯೋಗ ಬೇಸಾಯಗಳನ್ನು ನಡೆಸುತ್ತಿದ್ದವರು. ಸಾರ್ವಜನಿಕ ಸಂಸ್ಥೆಗಳಲ್ಲಿಯೂ ಮುಖಂಡರಾಗಿದ್ದವರು. ಅವರ ಮನೆ ಮತ್ತು ಖಾಸಗೀ ಉದ್ಯೋಗ ವ್ಯವಹಾರಗಳಲ್ಲೆಲ್ಲ ಕೆಲಸಕ್ಕಿದ್ದವರು ಬ್ರಾಹ್ಮಣರು ತರು ಇದು ಅನುಚಿತವೆಂದು ದೂರಿದರು. ಅದಕ್ಕೆ ಅವರ ಉತ್ತರ ಹೀಗಿತ್ತು. ಮನೆ ವ್ಯವಹಾರ ಎಂದರೆ ಎಲ್ಲರ ಮನೆ ದೋಸೆಯೂ ತೂತಿರುವದೇ, ನಮ್ಮ ಜಾತಿಯವರೇ ಅದರಲ್ಲಿ ಸೇರಿದರೆ ಅವನ್ನೆಲ್ಲ ನಮ್ಮ ಇತರ ಜಾತಿ ಬಾಂಧವರ ಹತ್ತಿರ ಆಡಿಕೊಳ್ಳುವ ಮೋಹ ಸಹಜವಾದದ್ದು. ಇನ್ನು ಹಣಕಾಸಿನ ವ್ಯವಹಾರಗಳಲ್ಲಿ ಅವರು ತಪ್ಪಿ ನಡೆದು ನಾನು ಅವರನ್ನು ದಂಡಿಸಿದರೆ ನಮ್ಮವರೇ ಹತ್ತು ಜನ ಅವರ ಪರವಾಗಿ ಒತ್ತಾಯ ತರುತ್ತಾರೆ. ಒಪ್ಪದಿದ್ದರೆ ವೈಮನಸ್ಯ. ಅದೇ ನೋಕರ ಬ್ರಾಹ್ಮಣನಾಗಿದ್ದರೆ ಅವನ ಮೇಲೆ ನನ್ನ ಅಧಿಕಾರಕ್ಕೆ ತೊಂದರೆಯಿಲ್ಲ. ಅವನಿಗೆ ಸರಕಾರದಲ್ಲಿ ನೌಕರೀ ಸುಲಭವಲ್ಲ. ನಾನು ಅವನನ್ನು ನೋಕರಿಯಿಂದ ತೆಗೆದು ಹಾಕಿದರೆ ಅವನ ಪರವಾಗಿ ಯಾರೂ ವಾದಿಸಲಿಕ್ಕೆ ಬರುವದಿಲ್ಲ. ಇದನ್ನು ತಿಳಿದು ಅವನು ಮೈತುಂಬ ಕಣ್ಣಾಗಿ ದಕ್ಷತೆಯಿಂದ ನಾನು ವಹಿಸಿದ ಕೆಲಸಗಳನ್ನು ನಿರ್ವಹಿಸುತ್ತಾನೆ. ನಮ್ಮ ಜಾತಿಯ ಹುಡುಗರಿಗೆ ಬೇಕಾದರೆ ಸರಕಾರದಲ್ಲಿ ಸಾರ್ವಜನಿಕ ಸಂಸ್ಥೆಗಳಲ್ಲಿ ಕೆಲಸ ಕೊಡಿಸಬಲ್ಲೆ. ನಮ್ಮ ಮನೆ ವ್ಯವಹಾರದಲ್ಲಿ ಬೇಡ–ಎಂದರು.

ಇವಾವವೂ ಪ್ರಾಚೀನ ದಂತಕಥೆಗಳಲ್ಲ, ಇಂದಿನ ಸತ್ಯಕಥೆಗಳು. ಇನ್ನೊಂದು ಗ್ರಾಮ. ಅಲ್ಲಿ ಒಂದೇ ಬ್ರಾಹ್ಮಣರ ಮನೆ. ಮೂರು ತಲೆಮಾರುಗಳಿಂದ ಸುಖವಾಗಿ ಭೂಮಿ ಕಾಣಿ ಪ್ರತಿಷ್ಠೆಗಳನ್ನು ಗಳಿಸಿಕೊಂಡಿದ್ದರು. ಮೂರನೆಯ ತಲೆಮಾರಿನ ಬ್ರಾಹ್ಮಣನು ಬುದ್ಧಿಗೆಟ್ಟು ಲಿಂಗಾಯತರ ಸೊಕ್ಕು ಮುರಿಯುತ್ತೇನೆಂದು ಹಿಂದುಳಿದವರೊಡನೆ ಗುಂಪುಗೂಡಿಕೊಂಡು ಬಹುಸಂಖ್ಯಾತರಿಗೆ ಬೇಡವಾದನು. ಮುಂದಿನ ರಾಜಕಾರಣದಲ್ಲಿ ಹಿಂದುಳಿದವರ ಕೈ ಮೇಲಾಗುವ ಕಾಲವೊಂದು ಬಂದಿತು. ಬ್ರಾಹ್ಮಣ 'ಅತೋ ಭ್ರಷ್ಟ ಸ್ತತೋಭ್ರಷ್ಟಃ.' ಹಿಂದುಳಿದವರೇ ಅವನ ಮೇಲೆ ಸವಾರಿ ಆರಂಭಿಸಿದರು. ಲಿಂಗಾಯತರ ನೆರವು ಬೇಡಲಿಕ್ಕೆ ಅವನಿಗೆ ಬಾಯಿರಲಿಲ್ಲ. ಗತಿ?

ಹೀಗೆ ಗ್ರಾಮದ ಮಟ್ಟದಲ್ಲಿ, ಖಾಸಗೀ ವ್ಯವಹಾರದಲ್ಲಿ, ತಾಲೂಕಿನ ಮಟ್ಟದಲ್ಲಿ ನಡೆ

ವದು ಸುಲಭವಾಗಿ ತಿಳಿಯುವಂತಿದೆ. ನಮ್ಮ ಕಣ್ಣೆದುರಿನಲ್ಲಿಯೇ ಲಿಂಗಾಯತರ, ರೆಡ್ಡಿಗಳ, ಮರಾಠರ ಕೊಬ್ಬು ಇಳಿಸುತ್ತೇವೆಂದು ಬಡ, ಅಲ್ಪ, ಸಂಖ್ಯಾತರನ್ನು ಕಟ್ಟಿ ಕುಣಿಸಿದವರೇ ಇಂದು ಮತ್ತೆ ಅದೇ ಲಿಂಗಾಯತರ ರೆಡ್ಡಿಗಳ ಮರಾಠರ ಬೆಂಬಲಕ್ಕೆ ಕೈಯೊಡ್ಡಿದ್ದಾರೆ. ದುರ್ಬಲರ ಕಾಳಜಿ ಇಂದಿನ ರಾಜಕಾರಣಿಗಳಿಂದ ಆರಂಭವಾದದ್ದಲ್ಲ. ಅಷ್ಟಾವಕ್ರನ ಕತೆ ಮಹಾಭಾರತಕ್ಕಿಂತಲೂ ಮುಂಚಿನದು. ಅಷ್ಟಾವಕ್ರನೆಂಬ ಬ್ರಾಹ್ಮಣರ ಹುಡುಗನು ರಾಜ ಸಭೆಯಲ್ಲಿ ವಾದ ಮಾಡುತ್ತಾನೆ. ಇಕ್ಕಟ್ಟಾದ ದಾರಿಯಲ್ಲಿ ರಾಜ ಮತ್ತು ಬ್ರಾಹ್ಮಣ ಬಂದರೆ ಯಾರು ಯಾರಿಗೆ ದಾರಿ ಬಿಡಬೇಕು ಎಂಬ ಮಾತು ಬಂದಾಗ ಆ ಹುಡುಗ ಹೇಳುತ್ತಾನೆ– ಬ್ರಾಹ್ಮಣನಿಗೂ ಅಲ್ಲ ರಾಜನಿಗೂ ಅಲ್ಲ, ಕಣ್ಣಿದ್ದವನು ಕುರುಡನಿಗೆ ದಾರಿ ಬಿಡಬೇಕು. ಕಿವಿಯಿದ್ದವನು ಕಿವುಡನಿಗೆ ದಾರಿ ಬಿಡಬೇಕು. ಗಂಡಸು ಹೆಂಗಸಿಗೆ ದಾರಿ ಬಿಡಬೇಕು, ಕೈಬೀಸಿಕೊಂಡು ನಡೆದವನು ಭಾರ ಹೊತ್ತಿರುವವನಿಗೆ ದಾರಿ ಬಿಡಬೇಕು. ಆಮೇಲೆ ಬ್ರಾಹ್ಮಣನಿಲ್ಲದಾಗ ರಾಜನಿಗೆ ದಾರಿ. ಬ್ರಾಹ್ಮಣನಿದ್ದರೆ ಬ್ರಾಹ್ಮಣನಿಗೇ ದಾರಿ. ಕಾರಣವನ್ನು ಅಲ್ಲಿ ಹೇಳದಿದ್ದರೂ ಸಂದರ್ಭದಿಂದ ಸ್ಪಷ್ಟವಿದೆ: ರಾಜನ ಬಲಕ್ಕೆ ಬ್ರಾಹ್ಮಣನು ಈಡಲ್ಲ.

ಅಲ್ಪಸಂಖ್ಯಾತರ ರಕ್ಷಣೆ ಅವರವರ ಜಾತಿಯ ಮುಂದಾಳುಗಳಿಂದಲೇ ಆಗಬೇಕು ಎನ್ನುವದು ಆ ಮುಂದಾಳುಗಳು ತಮ್ಮ ಜಾತಿಯವರಿಗೆ ಮಾಡಿದ ಬಹು ದೊಡ್ಡ ಮೋಸ. ಬುದ್ಧಿ, ನೀತಿಮತ್ತೆಗಳನ್ನು ಹಂಚುವಲ್ಲಿ ದೇವರು ಯಾವ ಜಾತಿಯವರ ಬಗ್ಗೆಯೂ



ಹೆಚ್ಚಿನ ಪಕ್ಷಪಾತವನ್ನು ತೋರಿಸಿದ್ದಾನೆನ್ನುವದು ಮೂರ್ಖತನವಾದರೆ, ಈ ಗುಣಗಳುಳ್ಳವರು ಎಲ್ಲ ಜಾತಿಗಳಲ್ಲಿಯೂ ಒಂದೇ ಪ್ರಮಾಣದಲ್ಲಿರಬೇಕು. ಅಂದ ಮೇಲೆ ಬಹುಸಂಖ್ಯ ಜಾತಿಗಳಲ್ಲಿ ಅಂಥವರು ಹೆಚ್ಚಾಗಿರುವರೆಂದು ನಂಬುವದರಲ್ಲಿ ತಪ್ಪೇನಿದೆ? ಹಾಗಿದ್ದರೆ ಅಲ್ಪಸಂಖ್ಯಾತರ ಉದ್ಧಾರ ಅವರ ಜಾತಿಯವರಿಂದಲೇ ಆಗಬೇಕು ಎನ್ನುವ ಭ್ರಾಂತಿ ಏಕೆ? ಆ ಉದ್ಧಾರ ಹೇಗೆ ನಡೆದಿದೆ ಎನ್ನುವದನ್ನು ಕುರಿತ ಸತ್ಯ ಕತೆಗಳನ್ನು ಹೇಳುವದಕ್ಕೆ ಇಲ್ಲಿ ಸ್ಥಳ ಸಾಲದು.

ಅಲ್ಪಸಂಖ್ಯಾತರು ತಮ್ಮ ಹಿತರಕ್ಷಣೆಯನ್ನು ಬಹುಸಂಖ್ಯಾತರಿಗೆ ಒಪ್ಪಿಸಿದರೆ ಬಹುಸಂಖ್ಯಾತರಿಂದ ದಬ್ಬಾಳಿಕೆ ನಡೆಯುವದಿಲ್ಲವೆ? ನಡೆದಿಲ್ಲವೆ? ಎಂದು ಕೇಳಿದರೆ ನಡೆದದ್ದುಂಟು, ಅದಕ್ಕೆ ಅಪವಾದಾತ್ಮಕ ಕಾರಣಗಳಿದ್ದವು ಎಂಬುದನ್ನು ವಿವರಿಸಬಹುದು. ನಡೆಯುವದಿಲ್ಲವೆ? ಎಂದರೆ ನಡೆಯುವದಿಲ್ಲ ಎಂದು ಧೈರ್ಯವಾಗಿ ಹೇಳಬಹುದು. ಇತಿಹಾಸ, ಸಮಾಜವಿಜ್ಞಾನ, ಮಾನವ ಜೀವವಿಜ್ಞಾನಗಳ ಪುರಾವೆಗಳನ್ನು ನೋಡಿದರೆ, ಶ್ರದ್ಧೆ ಜನಜೀವನ ಶಾಂತಿಗಳು, ಮಾನವ ಮಾತ್ರರಿಗಲ್ಲ ಎಲ್ಲ ಪ್ರಾಣಿಗಳಿಗೂ ಸ್ವಾಭಾವಿಕವಾದುವು. ಅಶ್ರದ್ಧೆ, ದ್ವೇಷ, ವಿತುಷ್ಟಿ, ಬಂಡಾಯ ಇವು ಅಪವಾದಗಳು. ಇಂತಹ ಅಪವಾದಾತ್ಮಕ ಸಂದರ್ಭಗಳ ಕಾರಣಗಳನ್ನು ನಿವಾರಿಸಿ ಸ್ವಾಭಾವಿಕ ಸ್ಥಿತಿಯನ್ನು ಪ್ರಸ್ಥಾಪಿಸುವ ಸಾಮರ್ಥ್ಯದಿಂದ ಮನುಷ್ಯರು ಬೇರೆ ಪ್ರಾಣಿಗಳಿಗಿಂತ ಹೆಚ್ಚಿ ಅಭಿವೃದ್ಧಿಯನ್ನು ಪಡೆದಿದ್ದಾರೆ.

ಅಪವಾದಾತ್ಮಕ ಸಂದರ್ಭಗಳು ಹುಟ್ಟುವದು ಭಯದಿಂದ. ಬಹು ಸಂಖ್ಯಾತರಿಗೆ ಭಯ ಸ್ವಾಭಾವಿಕವಲ್ಲ. ಅವರು ಭಯಗ್ರಸ್ತರಾದ ಅಲ್ಪಸಂಖ್ಯಾತರಂತೆ ಒಟ್ಟಾಗಿ ಯಾರನ್ನೂ ವಿರೋಧಿಸುವದಿಲ್ಲ. ತಮ್ಮೊಳಗಿನ ಮತಭೇದಗಳನ್ನು ತಾವೇ ಸರಿಪಡಿಸಬಲ್ಲೆವೆಂಬ ಭರವಸೆಯನ್ನು ಹೊಂದಿರುತ್ತಾರೆ. ಆದರೆ ಹೊರಗಿನವರೂ ಒಳಗಿನ ವಿತುಷ್ಟರೂ ಸೇರಿ ಸ್ವಾರ್ಥಸಾಧನೆಗಾಗಿ ಮತಭೇದದ ದುರ್ಲಾಭ ಪಡೆಯಲಿಕ್ಕೆ ಯತ್ನಿಸಿದಾಗ ಭಯ ತಲೆದೋರುತ್ತದೆ. ದ್ವೇಷ ಹುಟ್ಟುತ್ತದೆ. ಹೀಗೆ ಭಯ ದ್ವೇಷಗಳನ್ನು ಪ್ರಚೋದಿಸುವವರನ್ನು ಹತ್ತಿಕ್ಕುವ ಯತ್ನ ನಡೆದಾಗ ಈ ಕಿಡಿಗೇಡಿಗಳು 'ಹಯ್ಯೋ ದಬ್ಬಾಳಿಕೆ' ಎಂದು ಹುಯಿಲೆಬ್ಬಿಸುತ್ತಾರೆ. ಜಾತಿದ್ವೇಷ ಆರಂಭವಾಗುತ್ತದೆ. ಮೈನಾರಿಟಿ ರಾಜಕಾರಣದಲ್ಲಿ ತಮ್ಮ ತಮ್ಮ ಗುಂಪುಗಳ ಹಿತವನ್ನು ಬಯಸುವವರಿಗಿಂತ ಸ್ವಾರ್ಥಸಾಧಕರಿಗೇ ಪ್ರೋತ್ಸಾಹ ಅನಿವಾರ್ಯವಾಗುತ್ತದೆ. ಏಕೆಂದರೆ ಬಹುಸಂಖ್ಯಾತರಲ್ಲಿ ಬಹು ಜನರಿಗೆ ಇವರ ಬೆಂಬಲದ ಅಗತ್ಯವಿರುವದಿಲ್ಲ. ಇವರ ಬೆಂಬಲ ಅಗತ್ಯವಿರುವದು ವಿತುಷ್ಟರಿಗೆ, ಬಂಡಾಯಗಾರರಿಗೆ, ಸ್ವಾರ್ಥಿಗಳಿಗೆ. ಅವರಿಗೆ ತಮ್ಮ ಹುಳುಕುಗಳನ್ನು ಮುಚ್ಚಲಿಕ್ಕೆ ತಾವು ಜಾತಿವಾದಿಗಳಲ್ಲವೆಂದು ತೋರಿಸುವ ಹವ್ಯಾಸವೇ ನ್ಯಾಯಕ್ಕಿಂತ ದೊಡ್ಡದಾಗಿರುತ್ತದೆ. ಇವರಿಗೆ ಅಲ್ಪಸಂಖ್ಯಾತರಲ್ಲಿ ಬೇಕಾದವರು ಜನೋಪಕಾರಿಗಳಲ್ಲ, ತಮ್ಮ ಉದ್ದೇಶ ಸಾಧನೆಗೆ ನೆರವಾಗುವವರು ಮಾತ್ರ. ಇಂತಹ ಸಮಯ ಸಾಧಕರು, ವಿತುಷ್ಟರು, ಸ್ವಾರ್ಥಿಗಳು ಗುಂಪುಗೂಡಿದ ಬಹುಮತದಲ್ಲಿ ಸ್ಥಿರತೆಯೂ ಇಲ್ಲ, ನ್ಯಾಯವೂ ಇಲ್ಲ, ಅಭಿವೃದ್ಧಿಯೂ ಇಲ್ಲ.

ಬ್ರಾಹ್ಮಣರು ಮೈನಾರಿಟಿ ಎಂಬುದು ಅವರ ಉಪಜೀವನಕ್ಕೆ ಎಂದೂ ತೊಡಕಾಗಿಲ್ಲ. ನೌಕರಿಗಳಲ್ಲಿ ಸರಕಾರ ಯಾರದಿದ್ದರೂ ಅವರ ಸೇವೆಯು ಪ್ರಯೋಜನವೇನಿತ್ತೆಂಬುದನ್ನು ಮೇಲೆ ಎರಡು ಉದಾಹರಣೆಗಳಲ್ಲಿ ತೋರಿಸಿದ್ದೇನೆ. ವ್ಯಾಪಾರ ಉದ್ಯೋಗಗಳಲ್ಲಿ ಒಳ್ಳೆಯ ಸರಕನ್ನು ಯೋಗ್ಯ ಬೆಲೆಗೆ ಸಕಾಲಕ್ಕೆ ಒದಗಿಸಿದರೆ ಗಿರಾಕಿಗಳು ಜಾತಿಯನ್ನು ನೋಡುವದಿಲ್ಲ. ವಿತ್ತಜೀವಿತಗಳನ್ನು ಉಳಿಸಿಕೊಳ್ಳುವ ಸಂದರ್ಭಗಳಲ್ಲಿ ಡಾಕ್ಟರರ, ವಕೀಲರ ಜಾತಿಯನ್ನು ಯಾರೂ ವಿಚಾರಿಸುವದಿಲ್ಲ. ಆದ್ದರಿಂದ ಜಾತಿ ವ್ಯವಸ್ಥೆಯು ಚುನಾವಣೆಯ ವ್ಯವಹಾರ ವಿನಾ ಇನ್ನಾವ ವ್ಯವಹಾರದಲ್ಲೂ ತೊಡಕಾಗಿಲ್ಲ. ಆ ಚುನಾವಣೆಯ ವ್ಯವಹಾರವನ್ನು ಬಿಟ್ಟರೂ ಯಾರಿಗೂ ನಷ್ಟವಿಲ್ಲ. ಅದರಲ್ಲಿಯ ಜಾತೀಯತೆಯ ವಿಷ ತಾನಾಗಿಯೇ ಕಡಮೆಯಾಗುವದರಿಂದ ಲಾಭವೇ ಉಂಟು.

ಆದ ಕಾರಣ ಬ್ರಾಹ್ಮಣರು ಅಲ್ಪಸಂಖ್ಯಾ-

ತರೆಂದು ಗುಂಪು ಕಟ್ಟಿಕೊಳ್ಳಬಾರದು. ಚುನಾವಣೆಗಳಲ್ಲಿ ಉಮೇದುವಾರರಾಗಕೂಡದು. ಚುನಾವಣೆಗಳ ಪ್ರಚಾರದಲ್ಲೂ ಮತದಾನದಲ್ಲೂ ನಾಗರಿಕರಾಗಿ ಭಾಗವಹಿಸುವಾಗ ಮೈನಾರಿಟಿಗೆ ಸೇರಿದವರು, ಶ್ರದ್ಧೆಯಿಲ್ಲದವರು, ವಿತುಷ್ಟರು, ಬಂಡುಗಾರರು ಮುಂತಾದವರಿಗೆ ಬೆಂಬಲ ಕೊಡಬಾರದು. ತಮ್ಮ ಬೆಂಬಲ ಯಾವಾಗಲೂ ಬಹುಮತದವರಿಗೆ ಎಂದು ಬಹಿರಂಗವಾಗಿ ಸಾರಬೇಕು. ಈ ಹೊಸ ನಿಲುವಿನಲ್ಲಿ ಒಮ್ಮೆಲೆ ಬಹುಸಂಖ್ಯಾತರಿಗೆ ವಿಶ್ವಾಸ ಹುಟ್ಟಲಿಕ್ಕಿಲ್ಲ. ಮೂರು ತಲೆಮಾರುಗಳಿಂದ ಕಳೆದುಕೊಂಡಿದ್ದ ವಿಶ್ವಾಸ ಒಮ್ಮೆಲೇ ಪತ್ತೆ ಮೂಡೀತೆಂದು ಅಪೇಕ್ಷಿಸುವದು ಮಗ್ನತನ. ಆದರೆ ಜಾತೀಯ ರಾಜಕಾರಣವನ್ನು ಕೊನೆಗಾಣಿಸುವದಕ್ಕೆ ಇದೊಂದೇ ಉಪಾಯವಾದ್ದರಿಂದ ಅದನ್ನು ಶ್ರದ್ಧೆಯಿಂದಲೂ ಧೈರ್ಯದಿಂದಲೂ ಅನುಸರಿಸುವದು ಬುದ್ಧಿವಂತಿಕೆ. ಅದು ಫಲಕಾರಿಯಾಗುವದಕ್ಕೆ ಹೆಚ್ಚೆಂದರೆ ಮೂರು ನಾಲ್ಕು ಚುನಾವಣೆಗಳು ಸಾಕು.

ರಾಜಕೀಯದಲ್ಲಿ ತೊಡಗಿದ್ದ ಅನೇಕ ಮಿತ್ರರು ನನ್ನನ್ನು ಕೇಳಿದ್ದಾರೆ—ನೀವು ಹೇಳಿದಂತೆ ಮಾಡಿದರೆ ರಾಜಕೀಯವಾಗಿ ಬ್ರಾಹ್ಮಣರು ಆತ್ಮಹತ್ಯೆ ಮಾಡಿಕೊಂಡಂತಲ್ಲವೆ? ಅಲ್ಲ. ಏಕೆಂದರೆ ಬ್ರಾಹ್ಮಣರು ತಮ್ಮ ಮತದಾನದ ಹಕ್ಕನ್ನೂ ಪ್ರಚಾರದ ಹಕ್ಕನ್ನೂ ಬಿಟ್ಟು ಕೊಡಬೇಕಾಗಿಲ್ಲ. ಆ ಹಕ್ಕುಗಳ ಉಪಯೋಗದಿಂದ ದೃಢವಾದ ನಿರ್ಭಯವಾದ, ಆದ್ದರಿಂದ ದ್ವೇಷವಿಲ್ಲದ, ಸರಕಾರವನ್ನು ನಿರ್ಮಿಸಬೇಕು. ಬೇರೆ ವೃತ್ತಿಗಳಲ್ಲಿ ಜೀವನೋಪಾಯವನ್ನಾಗಲಿ ಪ್ರತಿಷ್ಠೆಯನ್ನಾಗಲೀ ಗಳಿಸುವ ವಿಶಿಷ್ಟ ಯೋಗ್ಯತೆಗಳಿಲ್ಲದ ಹತ್ತಾರು ಜನ ಬ್ರಾಹ್ಮಣರಿಗೆ ರಾಜಕೀಯದಲ್ಲಿ ಪ್ರತಿಷ್ಠೆಯನ್ನೂ ಲಾಭಾವಕಾಶವನ್ನೂ ದೊರಕಿಸುವದಕ್ಕೆ ಪ್ರಾಮಾಣಿಕವಾಗಿ ತಮ್ಮ ತಮ್ಮ ವೃತ್ತಿಗಳಲ್ಲಿ ತೊಡಗಿದ ಲಕ್ಷಾವಧಿ ಸಾಮಾನ್ಯ ಬ್ರಾಹ್ಮಣರನ್ನು ಅಪನಂಬಿಕೆ ದ್ವೇಷಗಳಿಗೆ ಗುರಿಪಡಿಸುವದು ಬುದ್ಧಿವಂತಿಕೆಯಲ್ಲ. ಆ ಹತ್ತಾರು ಜನ ರಾಜಕೀಯ ಮೋಹಗಳನ್ನು ಬಿಟ್ಟರೆ ಬ್ರಾಹ್ಮಣರು ಎಂದಿನಂತೆ ಅಜಾತಶತ್ರುಗಳಾಗಿ ಬಾಳಬಹುದು.

ಇಂದು ಬ್ರಾಹ್ಮಣರಲ್ಲಿಯೇ ಶಾಸ್ತ್ರವಿಹಿತ ಪುರೋಹಿತ ವೃತ್ತಿಯಲ್ಲಿರುವವರು ಬಹು ಸ್ವಲ್ಪ ಜನ. ಅವರಿಗೆ ಇನ್ನೊಬ್ಬರ ಮೇಲೆ ಯಾವ ಅಧಿಕಾರವೂ ಇಲ್ಲ. ಆದರೂ ಅನೇಕರು ಪುರೋಹಿತರನ್ನು ಕರೆಯುತ್ತಾರೆ, ಬಹುಜನರು ಅವರಲ್ಲಿ ಅನಾಸಕ್ತಿಯುಳ್ಳವರಾಗಿದ್ದಾರೆ ಇನ್ನೂ ಕೆಲವರು ಅವರನ್ನು ನಿಷ್ಕಾರಣವಾಗಿ ಹಳಿಯುವದರಲ್ಲಿ ತೊಡಗಿರುತ್ತಾರೆ. ಪ್ರಪಂಚದಲ್ಲಿ ಎಲ್ಲರಿಗೂ ಸ್ಥಾನವಿದೆ. ಪುರೋಹಿತರು ತಾವು ಅತ್ಯಲ್ಪಸಂಖ್ಯಾತರೆಂದು ಹೇಳಿಕೊಳ್ಳುವದಿಲ್ಲ. ಹೀಗೆ ಬ್ರಾಹ್ಮಣರಲ್ಲಿ ಪುರೋಹಿತರಿದ್ದಂತೆ ಒಟ್ಟು ಭಾರತೀಯರಲ್ಲಿ ಬ್ರಾಹ್ಮಣರು ತಾವು ಅಲ್ಪಸಂಖ್ಯಾತರೆಂದು ಹೇಳಿ ಹಾಕಿಕೊಳ್ಳಬೇಕಿಲ್ಲ. ಹಾಗೆಂದೇ ಭಾರತೀಯರಲ್ಲಿ ಎಷ್ಟು ವಿಧದ ಜೀವನ ಕ್ರಮಗಳಿವೆಯೊ ಅಷ್ಟೆಲ್ಲಾ ಬ್ರಾಹ್ಮಣರಲ್ಲೂ ಇವೆ- ಶುದ್ಧ ಶಾಕಾಹಾರಿಗಳಿದ್ದಾರೆ, ಮತ್ಸ್ಯಾಹಾರಿಗಳಿದ್ದಾರೆ, ಮಾಂಸಾಹಾರಿಗಳೂ ಇದ್ದಾರೆ. ನಿರ್ಗುಣ ಬ್ರಹ್ಮನನ್ನು ಪೂಜಿಸುವವರಿದ್ದಾರೆ. ಶ್ರೀನಿವಾಸಭಕ್ತರಿದ್ದಾರೆ. ಕಲ್ಲು ಮರಗಳನ್ನೂ ಪಶು ಪಕ್ಷಿಗಳನ್ನೂ, ಸರ್ಪಗಳನ್ನೂ ಭೂತಗಳನ್ನೂ ಪೂಜಿಸುವವರು ಇದ್ದಾರೆ. ಇವರಲ್ಲಿ ಬ್ರಾಹ್ಮಣರೆಂದರೆ ಯಾರು ? ಅವರು ನೀರಿದ್ದಂತೆ ಯಾವ ನೆಲದಲ್ಲಿರುವರೋ ಆ ನೆಲದ ಬಣ್ಣ ರುಚಿ ಆ ನೀರಿಗೆ ಬರುತ್ತದೆ. ಅವರು ತಮ್ಮ ಜೀವನೋಪಾಯಕ್ಕೆ ಯಾವ ಪ್ರದೇಶದಲ್ಲಿ ನೆಲಸಿದರೂ "ಯಸ್ಮಾನ್ನೋದ್ವಿಜತೇ ಲೋಕಃ ಲೋಕಾನ್ನೋದ್ವಿಜತೇಚ ಯಃ." ಅವರು ಬೇರೆಯವರಿಗೆ ಭಯ ತೋರುವದಿಲ್ಲ ತಾವು ಭಯ ಪಡುವದೂ ಇಲ್ಲ. ಹೀಗೆ ಅನಾದಿಕಾಲದಿಂದ ಭಾರತದ ಅದ್ಯಂತವೂ ಬಾಳಿದ್ದಾರೆ. ಮುಂದೂ ಬಾಳಬಹುದು. ಅಲ್ಪಸಂಖ್ಯಾತರೆಂದು ಗುಂಪು ರಾಜಕೀಯ ಬೇಡ.

ಬೆಂಗಳೂರು ಹಿ. ವಿ. ಜೋ[illegible]

## ನ್ಯೂಟ್ರಾನ್ನ ಕಥೆ

—ಪಿ. ಎಸ್. ಸುನಂದನ

'ಯುರೇನಿಯಂ ಪೈಲಿ'ನಲಿ ರಭಸದಿಂ ಓಡುತಿಹ
ನ್ಯೂಟ್ರಾನೊಂದು ಒಮ್ಮೆಲೇ ನಿಂತು ಯೋಚಿಸಿತು-

'ಈ ಇಂಧನದ ಕಂಬಿಗಳ ಜಾಲದಲಿ ಸಿಲುಕಿ
ತೊಳಲುತಿಹೆ ನಾನೀಗ ದಾರಿ ಕಾಣದಲೆ
ಗೊತ್ತುಗುರಿಯಿಲ್ಲದಿಹ ನೆಲೆ-ತಾಣವಿಲ್ಲದಿಹ
ಬಾಳಿನ ಸಾರ್ಥಕವೆ? ನಾನೀಗ ಮೃತ್ಯುವಿನ
ದವಡೆಯಲಿರುವ ನಿರಪರಾಧಿ
ಈ ಕ್ಷಣವೋ-ಆ ಕ್ಷಣವೋ ನಾನೊಂದು
ಯುರೇನಿಯಂ ಪರಮಾಣುವನು ವಿದಾರಿಸಲೇಬೇಕು!
ಕ್ಷಣಿಕ ಜೀವನದಿ ನಾಂ ಸುಖ ಕಂಡನೇ?
ಅಲ್ಪಾಯುವಾದರೂ ಬಲಶಾಲಿಯೆಂಬೊಂದೆ ಹೆಮ್ಮೆ ನನಗೆ
ಕಿರಿಯನಾದರು ಹಿರಿಯನೆಂಬ ಭಾವನೆ ನನಗೆ!!
ನನ್ನ ಕಾರ್ಯದ ಹಿರಿಮೆ, ನನ್ನ ವ್ಯಕ್ತಿತ್ವ
ನನ್ನ ಶಕ್ತಿಯ ಮಹಿಮೆ, ನನ್ನಯ ಮಹತ್ವ
ವ್ಯಕ್ತವಾಗದು ನಾನು ಮೌನಿಯಾಗಿರಲು.

ಯುರೇನಿಯಂ ಪರಮಾಣು ನನ್ನ ನುಂಗುವುದು
ಇಲ್ಲವೇ ನನ್ನಿಂದ ವಿಭಜಿಸಲ್ಪಡುವುದು-
ಈ ಬೀಜ ವಿಘಟನದಿಂ ಶಕ್ತಿಯುದ್ಭವಿಸಿ
ಮನೆಮನೆಯ ಬೆಳಗುವುದು-ಕೈಗಾರಿಕಾ
ಚಕ್ರವನು ಉರುಳಿಪುದು.
ಆದರೇಂ ನಾನೆಲ್ಲಕೂ ಮೂಲಭೂತ-
ವಿಲ್ಲಿ ಅರಿತಿಹರೆನ್ನ ಮರೆತಿಹರು ಏಕೆ?

'ನನ್ನ ಬಲ್ಲವನೊಬ್ಬ — ಭೌತವಿಜ್ಞಾನಿ
ಸತ್ಯಶೋಧಕನವನು — ಮೋಕ್ಷಸಾಧಕನವನು
ಜೀವನದಿ ಶಾಂತಿ—ಸುಖ—ಸೌಂದರ್ಯಗಳ
ಅರಸುತಿಹ ತಪಸ್ವಿಯವನು.
ಅವನ ಶ್ರಮ—ಅವನ ಗುರಿ
ಸಂಯಮದಿ ಕಾರ್ಯವನು ಸಾಧಿಸುವ ಅವನ ಪರಿ
ವಿಶ್ವಸೃಷ್ಟಿಯ ಚಿದಂಬರ ರಹಸ್ಯವನು ಭೇದಿಸಲು
ಪ್ರಕೃತಿ ನಿರ್ಮಾಣದೀ ವಿಚಿತ್ರ ಘಟನೆಯನು ಪರಿಕಿಸಲು
ಪ್ರಕೃತಿಯೇ ಸೃಷ್ಟಿಸಿದ ಮುಗ್ಧ ಬಾಲಕನವನು!'

# ಯುದ್ಧಸಿದ್ಧ ಗಣಪತಿ

[illegible]ದ ಈ ನೃತ್ಯಗಣಪತಿ ಅಪರೂಪದ ಶಿಲ್ಪಗಳಲ್ಲೊಂದು. ಇಲಿಯ ಬೆನ್ನ ಮೇಲೆ ಬಲಗಾಲನ್ನೂರಿ, ಎಡಗಾಲನ್ನೆತ್ತಿ ರುದ್ರನೃತ್ಯದಲ್ಲಿ [illegible] ಈ ಗಣಪತಿಯ ಮುಖದಲ್ಲೂ ರೌದ್ರ[illegible]ಯಿದೆ.

ಬಲಭಾಗದ ನಾಲ್ಕು ಕೈಗಳ ಪೈಕಿ ಮೂರರಲ್ಲಿ [illegible] ಮತ್ತು [illegible] ಹಸ್ತಗಳಿದ್ದು ನಾಲ್ಕನೆಯ [illegible] ನೃತ್ಯ ಮುದ್ರೆಯ ಭಂಗಿಯಲ್ಲಿದೆ.

ಎಡಭಾಗದ ನಾಲ್ಕು ಕೈಗಳಲ್ಲಿ ಮೊದಲನೆಯದು [illegible]ದ್ದು ಇನ್ನುಳಿದ ಮೂರು ಕೈಗಳಲ್ಲಿ [illegible]ಲ, ಢಾಲು, ಮೋದಕಗಳಿವೆ.

ದೇಹವೆಲ್ಲ ಉತ್ತರಾಭಿಮುಖವಾಗಿಯೂ ಮುಖ ಮಾತ್ರ ಪೂರ್ವಕ್ಕೆ ತಿರುಗಿಕೊಂಡಿ[illegible] ಈ ಶಿಲ್ಪ ಕೆಲ ಮಟ್ಟಿಗೆ ಭಿನ್ನಗೊಂಡಿದೆ.

[illegible] ಉತ್ತರಕ್ಕೆ ಮೂರು ಮೈಲು [illegible]ವ ಉಣಕಲ್ಲ ಗ್ರಾಮದ ಪ್ರಾಚೀನ [illegible]ಶ್ವರ ದೇವಾಲಯದ ಗೋಡೆಗಳ [illegible] ಗಣಪತಿ ಮೂರ್ತಿಗಳ ಪೈಕಿ [illegible] ಒಂದು. ಪೂರ್ವಾಭಿಮುಖವಾಗಿರುವ [illegible] ಗೋಡೆಗೆ ಉತ್ತರಾಭಿಮುಖ[illegible] ಕೆತ್ತಲ್ಪಟ್ಟಿದೆ ಈ ಮೂರ್ತಿ.

ಕಪ್ಪು–ಕೆಂಪು ಮಿಶ್ರಿತ ಕಲ್ಲಿನಲ್ಲಿ ಕೆತ್ತಲ್ಪಟ್ಟಿರುವ [illegible] ಚಾಲುಕ್ಯ ಶಿಲ್ಪದ ಒಂದು [illegible] ಮೊದಲು ಬ್ರಹ್ಮದೇವನ ಗುಡಿ [illegible] (ಗರ್ಭಗುಡಿಯಲ್ಲಿ ಚತುರ್ಮುಖದ ಒಂದು ಲಿಂಗವಿದೆ). ೧೨ನೆಯ ಶತಮಾನದ ಎರಡು ಶಿಲಾಶಾಸನಗಳು ಇಲ್ಲಿವೆ.

ಈಗಲೂ ಸುಂದರವಾಗಿರುವ ಈ ದೇವಾಲಯ ಭಗ್ನಗೊಳ್ಳುವ ಮುನ್ನ ಎಷ್ಟು ಸುಂದರವಾಗಿತ್ತೋ ಊಹಿಸುವುದು ಕಷ್ಟ. ನಾಲ್ಕು ದಿಕ್ಕಿಗೂ ಅನೇಕ ದೇವತಾ ವಿಗ್ರಹಗಳು, ದೃಷ್ಟಿ ಬೊಂಬೆಗಳ ಸಾಲು ಇದ್ದು ಒಂದಂಗುಲವೂ ಕೆತ್ತನೆಯಿಲ್ಲದ ಜಾಗವಿಲ್ಲ. ದೇವಾಲಯದ ಸುತ್ತ–ಮುತ್ತ ಎಷ್ಟೋ ಪ್ರದೇಶವೀಗ ಪರರ ಸೊತ್ತು. ಪ್ರಾಚ್ಯವಸ್ತು ಇಲಾಖೆಯವರು ತಮ್ಮದೆಂದು ಒಂದು ಫಲಕವನ್ನು ನೆಟ್ಟು ಸಂರಕ್ಷಣೆಯ ಕೆಲಸವನ್ನು ಮುಗಿಸಿಬಿಟ್ಟಿದ್ದಾರೆ.

ಪೂರ್ವಾಭಿಮುಖವಾಗಿರುವ ಮೂರು ಗಣಪತಿಗಳಲ್ಲಿ ಪ್ರವೇಶದ್ವಾರದ ಬಲಬದಿಯ ಗೋಡೆಯಲ್ಲಿ ಮೇಲೆ ಮೂಡಿಬಂದಿರುವ ಮತ್ತೊಂದು ನೃತ್ಯಗಣಪತಿಗೆ ನಾಲ್ಕು ಕೈಗಳಿವೆ. ಎಷ್ಟೂ ಮುಕ್ಕಾಗದ ಕರಿ ಕಲ್ಲಿನ ಈ ಶಿಲ್ಪದ ವೈಶಿಷ್ಟ್ಯವೆಂದರೆ ಶಿಲ್ಪದ ಮಾಟ. ಇನ್ನೆರಡು ಅಷ್ಟು ವಿಶೇಷ ವಿಗ್ರಹಗಳಲ್ಲ.

ಪಶ್ಚಿಮಾಭಿಮುಖವಾಗಿರುವ ಗಣಪತಿಗೆ ಆರು ಕೈಗಳಿವೆ. ಕುಳಿತಿರುವ ಈತನಿಗೆ ಆಶೀರ್ವಾದದ ಭಂಗಿಯೇ ಇಲ್ಲದಿರುವುದೂ ಕಾಲು–ಹೊಟ್ಟೆಯನ್ನು ಹಾವು ಬಿಗಿಯಾಗಿ ಸುತ್ತಿಕೊಂಡಿರುವುದೂ ಒಂದು ವಿಶೇಷ.

ರಕ್ಷಕರಿಲ್ಲದೇ ಹಾಳು ಬೀಳುತ್ತಿರುವ ಈ ದೇವಾಲಯಕ್ಕೆ [illegible] ಈಗ [illegible] ಇನ್ನುಳಿದ ಮೂರ್ತಿಗಳನ್ನೂ 'ಭಕ್ತರು' ಕೆತ್ತೊಯ್ಯಬಹುದು. ✡

# ಪಂಡಿತ ಕವಲಿಯವರು

ಮಾಧವ ನಾ. ಮಹಿಷಿ

ವಯಸ್ಸು ಅವರಿಗೆ ೮೦ ತುಂಬಿದೆ. ಹಿಂದೆ ಬಾಚಿದ ತಲೆಗೂದಲು, ಸುಕ್ಕುಗಟ್ಟಿದ ತ್ವಚೆ ಈ ಶರೀರಕ್ಕಾದ ವಯಸ್ಸನ್ನು ಎತ್ತಿತೋರಿಸುತ್ತದಾದರೂ ನರೆಗೂದಲ ತಲೆಯಲ್ಲಡಗಿದ ಮಿದುಳಿಗೆ ಮಾತ್ರ ವಯಸ್ಸಿನ ಲೆಕ್ಕವೇ ಇದ್ದಂತಿಲ್ಲ. ಐದಡಿಗಿಂತ ಬಹಳ ಹೆಚ್ಚು ಎತ್ತರವಿರದ ಈ ವ್ಯಕ್ತಿ ನಾನು ಚಿಕ್ಕಂದಿನಿಂದಲೂ ಕೇಳುತ್ತಿದ್ದ ಪಂಡಿತ ಚೆ. ಯ. ಕವಲಿಯವರು. ಈ ವಯಸ್ಸಿನಲ್ಲೂ ತಾಸು ತಾಸುಗಟ್ಟಲೆ ನಿರರ್ಗಳವಾಗಿ ಮಾತಾಡುತ್ತಾರೆ. ಕನ್ನಡ ಸಂಸ್ಕೃತ, ಇಂಗ್ಲೀಷುಗಳಿಂದ ಧಾರಾಳವಾಗಿ ಅವತರಣಿಕೆಗಳನ್ನು ಉದ್ಧರಿಸುತ್ತ ಮಾತಾಡಬಲ್ಲ ಇವರೆದುರು ಕೂಡುವರು ತಲೆದೂಗಲೇಬೇಕು.

ಬ್ಯಾಡಗಿ ಎಂಬುದು ಮೆಣಸಿನಕಾಯಿಗೆ ಅನ್ವರ್ಥಕ ಹೆಸರಾಗಿರುವಂತೆ ಅದು ಪಂಡಿತ ಕವಲಿಯವರ ಹುಟ್ಟೂರು ಎಂಬ ಕಾರಣಕ್ಕಾಗಿಯೂ ಹೆಸರಾಗಿರಬೇಕಾದುದು ನ್ಯಾಯವಾದುದು. ಬ್ಯಾಡಗಿ ಮೆಣಸಿನಕಾಯಿಯ ಖಾಟ ಆಗೀಗ ಅವರ ಮಾತಿನಲ್ಲಿ ಕಂಡುಬರುವುದುಂಟು. ಆದರೆ ಅವರ ಮಾತಿನಲ್ಲಿಯ ಖಾಟ ಅವರ ಸ್ವಭಾವ-ಸಹಜ ಗುಣವಲ್ಲವೆಂಬುದು ಗಮನಕ್ಕೆ ಬರಲು ಕೂಡ ಬಹಳ ಹೊತ್ತು ಬೇಕಾಗುತ್ತಿಲ್ಲ. ಕೆಲವೊಮ್ಮೆ ಅವರಿಗೆ ಹಳೆಯದೇನೇನೋ ನೆನಪಾದಾಗ ಆ ನೆನಪೇ ಅವರ ಬಾಯಿಂದ ಅಂಥ ಮಾತುಗಳನ್ನು ಆಡಿಸಿಬಿಡುತ್ತದೆ. ಅವರು ಬಡ ಕುಟುಂಬದಲ್ಲಿ ಹುಟ್ಟಿದರು. ಒಂದು ನೇಕಾರ ಕುಟುಂಬದಲ್ಲಿ. ಹುಟ್ಟಿನಿಂದಲೇ ವ್ಯಕ್ತಿಯ ಕುಲವನ್ನೆಣಿಸುವ ಈ ದೇಶದಲ್ಲಿ ಹೆಜ್ಜೆ ಹೆಜ್ಜೆಗೆ ಆತಂಕಗಳನ್ನು ಅವರು ಎದುರಿಸಬೇಕಾಯಿತು. ಅದರಿಂದಾಗಿ. ಅವರ ಪಾಂಡಿತ್ಯಕ್ಕೆ ಸಾಧನೆಗೆ ಸಿಗಬೇಕಿದ್ದ ಮನ್ನಣೆಯನ್ನು ಗೌರವವನ್ನು ಕನ್ನಡ ನಾಡು ಅವರಿಗಿನ್ನೂ ಕೊಟ್ಟಿಲ್ಲವೇನೋ ಅನಿಸಿ ಮನಸ್ಸು ಮರಗುತ್ತದೆ.

*

ಕವಲಿಯವರು ೧೯೦೦ ಸಪ್ಟೆಂಬರ್ ೭ ರಂದು ಬ್ಯಾಡಗಿಯಲ್ಲಿ ಜನಿಸಿದರು. ಇವರಿನ್ನೂ ಚಿಕ್ಕವರಿದ್ದಾಗಲೇ ತಂದೆ ತೀರಿಕೊಂಡಿದ್ದರಿಂದ ಅಣ್ಣ ಮಲ್ಲಪ್ಪನವರೇ ಇವರ ಪ್ರಥಮ ವಿದ್ಯಾಗುರುವಾಗಿ ಪರಿಣಮಿಸಿದರು. ಕನ್ನಡ ನಾಡು ನುಡಿ ಸೇವೆಯ ಹಂಬಲದ ಬೀಜಾರೋಪಣ ಇವರಲ್ಲಾದದ್ದು ಅಣ್ಣನಿಂದಲೇ. ೧೯೧೪ರಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿ ಮುಲ್ಕಿ ಪರೀಕ್ಷೆಯನ್ನು ಬ್ಯಾಡಗಿಯಲ್ಲೇ ಮುಗಿಸಿದರು. ನಂತರ ಒಂದು ವರ್ಷದಲ್ಲಿ ಇಂಗ್ಲೀಷ್ ಮೂರು ವರ್ಗಗಳ ಅಭ್ಯಾಸವನ್ನು ಮಾಡಿದರು. ಹೈಸ್ಕೂಲು ಸೇರಿ ಹೆಚ್ಚಿನ ವಿದ್ಯಾಭ್ಯಾಸ ಮಾಡಬೇಕೆಂಬ ಅವರ ಇಚ್ಛೆ ಕೈಗೂಡಲಿಲ್ಲ. ಧಾರವಾಡಕ್ಕೆ ಬಂದು ಪ್ರಾಥಮಿಕ ಶಿಕ್ಷಕನಾಗ [illegible] ಸರಕಾರಿ ಗಂಡು ಮಕ್ಕಳ ಟ್ರೇನಿಂಗ್ ಕಾಲೇಜು ಸೇರಿದರು. ಹಾಗೆ ಸೇರುವುದಕ್ಕೆ ಅವರು [illegible] ಅಂದಿನ ದಕ್ಷಿಣ ಭಾಗದ (ಆಗಿನ ಮುಂಬಯಿ ಇಲಾಖೆಯ ದಕ್ಷಿಣ ಭಾಗದಲ್ಲಿ ಧಾರ

ಪಾಡ, ಬೆಳಗಾವಿ, ವಿಜಾಪುರ, ಉತ್ತರ ಕನ್ನಡ ಈ ನಾಲ್ಕು ಕರ್ನಾಟಕದ ಜಿಲ್ಲೆಗಳಲ್ಲದೆ ಮಹಾರಾಷ್ಟ್ರದ ಕೊಂಕಣಪಟ್ಟಿಯಲ್ಲಿಯ ರತ್ನಾಗಿರಿ, ಕುಲಾಬಾ ಜಿಲ್ಲೆಗಳೂ ಇರುತ್ತಿದ್ದುವು) ಆರೂ ಜಿಲ್ಲೆಗಳಿಗೆ ಕೂಡಿ ಪ್ರವೇಶ ಪರೀಕ್ಷೆ ನಡೆಯುತ್ತಿತ್ತು. ಕವಲಿಯವರು ಆರೂ ಜಿಲ್ಲೆಗಳಿಗೆ ಪ್ರಥಮರಾಗಿ ಉತ್ತೀರ್ಣರಾದರು. ಮುಂದಿನ ಮೂರು ವರ್ಷಗಳನ್ನು ಅವರು ಸರಾಗವಾಗಿ ಪೂರೈಸಿಬಿಟ್ಟರು (೧೯೨೦ ರಲ್ಲಿ). ಇಲ್ಲಿ ಕನ್ನಡವನ್ನೂ ಇತರ ಹಲವು ವಿಷಯಗಳನ್ನೂ ಅಚ್ಚುಕಟ್ಟಾಗಿ ಅಧ್ಯಯನ ಮಾಡಲು ಅವಕಾಶ ದೊರೆಯಿತು. ಆದರೆ ಆ ಮುನ್ನವೇ ಮುಂದೆ ತಮ್ಮ ಜೀವನದಲ್ಲಿ ತಾವೇನು ಮಾಡಬೇಕೆಂಬ ಬಗ್ಗೆ ಕವಲಿಯವರಲ್ಲಿ ಕಲ್ಪನಾಬೀಜವಾಗಲೇ ಮೊಳೆತಿತ್ತು. ಕನ್ನಡ ಐದನೆಯ ವರ್ಗದ ಪುಸ್ತಕದಲ್ಲಿ ಗಳಗನಾಥರು ಬರೆದಿದ್ದ 'ಏವಸ್ಟ್ರೆ ಜನ್ನಪ ಪಸ್ರು' ವನ್ನೋದಿದಾಗಲೇ ತಾವು ಪಠ್ಯ ಪುಸ್ತಕಗಳನ್ನು ಬರೆಯಬೇಕೆಂದು ಅವರಿಗನಿಸಿಬಿಟ್ಟಿತು. ಮುಂದೆ ಅವರ ಅಣ್ಣ ಕೊಟ್ಟಿದ್ದ ತುರಮರಿಯವರ 'ಶಬ್ದ ಮಂಜರಿ'ಯನ್ನು ನೋಡಿದಾಗ ತಾವೂ ಒಂದು ಶಬ್ದಕೋಶ ಬರೆಯಬಾರದೇಕೆ ಎಂಬ ಯೋಚನೆಯೂ ಬಂದುಹೋಯಿತು. ಮನುಷ್ಯ ಹಗಲುಗನಸುಗಳನ್ನು ಕಾಣುವುದು ತೀರ ಸ್ವಾಭಾವಿಕ. ಆದರೆ ಆ ಕನಸಿನ ಬೆಂಬತ್ತಿ ಅವನ್ನು ನನಸಾಗಿಸುವ ಛಲಗಾರಿಕೆ ಮಾತ್ರ ಅಪರೂಪಕ್ಕೆ ಕಂಡುಬರುವ ಗುಣ. ಅಂಥ ಗುಣವಿಶೇಷವನ್ನು ಕವಲಿಯವರಲ್ಲಿ ಕಾಣುತ್ತೇವೆ. ಅವರು ಹಲವಾರು ಪಠ್ಯ ಪುಸ್ತಕಗಳ ಕರ್ತೃವೂ ಆದರು, 'ಕಸ್ತೂರಿಕೋಶ'ದಂತಹ ರತ್ನಪ್ರಾಯವಾದ ಶಬ್ದಕೋಶವನ್ನೂ ಕನ್ನಡಕ್ಕಿತ್ತರು. ಆದರೆ ಅವರು ನಡೆದ ದಾರಿ ಮಾತ್ರ ಸುಲಭ ಮಾರ್ಗವಾಗಿರಲಿಲ್ಲ.

ಟ್ರೇನಿಂಗ್ ಕಾಲೇಜಿನಲ್ಲಿ ಕಟ್ಟಿ ಮೂರ್ತಾಚಾರ್ಯರಂತಹ ಆದರ್ಶ ಗುರುಗಳು ಅವರಿಗೆ ಸಿಕ್ಕರು. ಪ್ರಿನ್ಸಿಪಾಲರಾಗಿದ್ದ ಮಹಿಷಿ ರಾಮರಾಯರು ಇವರ ಬೆನ್ನು ತಟ್ಟಿ ಶಿಕ್ಷಣವನ್ನು ಟ್ರೇನಿಂಗ್ ಕಾಲೇಜಿನಲ್ಲಿ ದೊರೆವ ತರಬೇತಿಗೇ ಮುಗಿಸದೇ ಮೈಸೂರಿಗೆ ಹೋಗಿ ಪಂಡಿತ ಪರೀಕ್ಷೆಗಾಗಿ ಅಧ್ಯಯನ ಮಾಡಬೇಕೆಂದು ಪ್ರೋತ್ಸಾಹಿಸಿದರು. ಪಂಡಿತ ಪರೀಕ್ಷೆಗೆ ಸಂಸ್ಕೃತವು ಆಗ ಮುಖ್ಯ



ಮೈಯ ಕಣ ಕಣದಲ್ಲೂ ಕನ್ನಡವೇ ತುಂಬಿರುವ ಘನ ವ್ಯಕ್ತಿ ಪಂಡಿತ ಜೆ. ಯ. ಕವಲಿ. ಕನ್ನಡದ ಪ್ರಶ್ನೆ ಬಂದಾಗ ಕರ್ನಾಟಕಾಂತರ್ಗತ ಭಾರತಮಾತೆಗೆ ನಮಿಸಿದ ಆಲೂರು ವೆಂಕಟರಾಯರನ್ನವರು ಮೊದಲು ನೆನೆಯುತ್ತಾರೆ. ಕವಲಿಯವರು ನುಡಿಸೇವೆಗೆಯೇ ತಮ್ಮನ್ನು ಅರ್ಪಿಸಿಕೊಂಡಿದ್ದರೂ ಕನ್ನಡ ನಾಡು ಅವರನ್ನಷ್ಟಾಗಿ ಗಮನಿಸಿದಂತಿಲ್ಲ.

ವಿಷಯವಾಗಿರುತ್ತಿದ್ದುದರಿಂದ ಈ ಪರೀಕ್ಷೆಗಾಗಿ ಹೋಗುವ ವಿದ್ಯಾರ್ಥಿಗಳೆಲ್ಲ ಹೆಚ್ಚಾಗಿ ಬ್ರಾಹ್ಮಣರೇ ಆಗಿರುತ್ತಿದ್ದರು. ಆಗ ಮೈಸೂರು ಸಂಸ್ಥಾನದ ಡಿ. ಪಿ. ಐ. ಆಗಿದ್ದ ಸಿ. ಆರ್. ರೆಡ್ಡಿಯವರಿಗೇ ನೇರವಾಗಿ ಇವರು ಬರೆದುಕೊಂಡುದರ ಪರಿಣಾಮವಾಗಿಯೋ ಏನೊ ಇವರಿಗೆ ಅಲ್ಲಿ ಯಾವ ಪೂರ್ವ ಪರೀಕ್ಷೆಯಿಲ್ಲದೇ ಪ್ರವೇಶ ದೊರಕಿಬಿಟ್ಟಿತು. ಅಲ್ಲಿರುವಾಗ ನಾಟಕ ಶಿರೋಮಣಿ ಎ. ವಿ. ವರದಾಚಾರ್ಯರು ಮತ್ತು ಕರ್ನಲ್ ಗೋಪಾಲರಾಜೇ

ಅರಸು ಅವರು ಕವಲಿಯವರ ನೆರವಿಗೆ ಬಂದರಲ್ಲದೆ ವೀರಶೈವ ಹಾಸ್ಟೆಲಿನಲ್ಲಿ ಇರಲು ವ್ಯವಸ್ಥೆಯಾಯಿತು. ಮೈಸೂರಿನಲ್ಲಿಯ ತಮ್ಮ ಗುರುಗಳಲ್ಲಿ ಕವಲಿಯವರು ವಿಶೇಷವಾಗಿ ಮೆಚ್ಚಿರುವುದು ಟಿ. ಎಸ್. ರಾಘವಾಚಾರ್ಯರನ್ನು. ವಿದಜ್ಜಗತ್ತಿನಲ್ಲಿ ತಮಗೇನಾದರೂ ಸ್ಥಾನ ದೊರೆಯುವುದಾದರೆ ಅದಕ್ಕೆಲ್ಲ ರಾಘವಾಚಾರ್ಯರ ಆಶೀರ್ವಾದ ಬಲವೇ ಕಾರಣವೆಂದು ಅವರು ಮುಕ್ತ ಮನಸ್ಸಿನಿಂದ ಹೇಳುತ್ತಾರೆ. ಮೈಸೂರಿನಲ್ಲಿರುವಾಗಲೇ ಅಲ್ಲೊಂದು ಕನ್ನಡ ನಿಬಂಧ ಸ್ಪರ್ಧೆಯಲ್ಲಿ ಭಾಗವಹಿಸಬೇಕಾಗಿ ಬಂತು. ಸ್ಥಳೀಯ ಕಾಲೇಜು ವಿದ್ಯಾರ್ಥಿಗಳೊಂದಿಗೆ ಸ್ಪರ್ಧೆಗಿಳಿದದ್ದಾಯಿತು. ಆಗ ಎಂ.ಎ. ಓದುತ್ತಿದ್ದ ದೇವುಡು ನರಸಿಂಹ ಶಾಸ್ತ್ರಿ ಅವರು ಬರೆದ ನಿಬಂಧಕ್ಕೂ ಕವಲಿಯವರು ಬರೆದಿದ್ದ ನಿಬಂಧಕ್ಕೂ ಅಷ್ಟೇ ಗುಣಗಳು ದೊರೆತುದರಿಂದ ನಿರ್ಣಾಯಕರಲ್ಲಿ ಪ್ರಥಮ ಬಹುಮಾನವನ್ನು ಯಾರಿಗೆ ಕೊಡಬೇಕೆಂಬ ಬಗ್ಗೆ ತೀವ್ರ ಭಿನ್ನಾಭಿಪ್ರಾಯವುಂಟಾಯಿತಾದರೂ ಕೊನೆಗೂ ಅದು ದೊರೆತುದು ಇವರಿಗೇ. ೧೯೨೪ರಲ್ಲಿ ಪಂಡಿತ ಪದವಿ ಪಡೆದು ಹೊರಬಿದ್ದರು.

ಕವಲಿಯವರ ವಿದ್ಯಾರ್ಥಿ ಜೀವನ ಯಶಸ್ವಿಯಾಗಿ ಅತ್ಯಂತ ಗೌರವಪೂರ್ಣವಾಗಿಯೇ ಮುಕ್ತಾಯವಾಯಿತು. ಆದರೆ ಅನಂತರ ವೃತ್ತಿ ಜೀವನವನ್ನು ಪ್ರಾರಂಭಿಸಿದಾಗಲೇ ಅವರ ಬಾಳಿನ ಹೋರಾಟ ಆರಂಭವಾಯಿತು. ಅಂದಿನ ಪ್ರಾಥಮಿಕ ಶಿಕ್ಷಕರಿಗೆ ಅಗತ್ಯವಿದ್ದುದಕ್ಕಿಂತ ಹೆಚ್ಚಿನ ಅರ್ಹತೆ ಅವರಿಗಿದ್ದಾಗಲೂ ಅವರಿಗೆ ಪ್ರಾಥಮಿಕ ಶಿಕ್ಷಕನ ಸ್ಥಾನಕ್ಕಿಂತ ಹೆಚ್ಚಿನದೇನೂ ದೊರೆಯಲಿಲ್ಲವಷ್ಟೇ ಅಲ್ಲ, ಅಲ್ಲಿರುವಾಗಲೂ ಸದಾ ಕಾಲ ಮುಳ್ಳಿನ ಹಾಸಿಗೆಯ ಮೇಲಿದ್ದಂತೆಯೇ ಇರಬೇಕಾಗುತ್ತಿತ್ತು. ಹೀಗಾಗುವುದಕ್ಕೆ ಕಾರಣ ಕವಲಿಯವರ ನಿರ್ಭೀತ ಪ್ರವೃತ್ತಿ, ನಿರ್ದಾಕ್ಷಿಣ್ಯ ಸ್ವಭಾವವೇ ಇರಬೇಕು. ನೌಕರಿಯಲ್ಲಿ ಇವರಿಗೆ ಹೆಜ್ಜೆ ಹೆಜ್ಜೆಗೆ ಆತಂಕಗಳು, ಅಡೆತಡೆಗಳು ಬರತೊಡಗಿದಾಗ ಕವಲಿಯವರಲ್ಲಿಯ ಶಿಕ್ಷಕ ಇನ್ನೊಂದು ರೂಪ ತಳೆದ. ಶಾಲೆಯ ಮಕ್ಕಳ ಪ್ರಪಂಚವನ್ನು ಮೀರಿ ಅವರು ಸಮಾಜಕ್ಕೇ ಶಿಕ್ಷಣ ನೀಡಬಲ್ಲಂತಹ ಮಾಧ್ಯಮದೆಡೆ ಹೊರಳಿದರು. ಚಿಕ್ಕಂದಿನಿಂದಲೂ ಅವರಿಗೆ ನಾಟಕದ ಗೀಳು. ನಾಟಕ ಬರೆಯುವ, ಆಡುವ, ಆಡಿಸುವ ಸಾಮರ್ಥ್ಯ ಅವರಲ್ಲಿದ್ದುದು ಇಲ್ಲಿ ಉಪಯೋಗಕ್ಕೆ ಬಂತು. ಕೆಲಸಕ್ಕೆ ರಜೆ ಹಾಕಿ ಮೊದಲು ಶಿರಹಟ್ಟಿ ವೆಂಕೋಬರಾಯರ ಕಂಪನಿ ಸೇರಿದರು. ನಂತರ ಹಲಗೇರಿ ಜಟ್ಟೆಪ್ಪನವರ ಕಂಪನಿ, ಕೊನೆಗೆ ೧೯೩೨ರಲ್ಲಿ ಕಲಾಪ್ರಕಾಶ ನಾಟಕ ಮಂಡಳಿ ಎಂಬ ಸ್ವಂತ ಕಂಪನಿಯನ್ನು ಸ್ಥಾಪಿಸಿ ಕೆಲ ವರ್ಷ ನಡೆಸಿ ಅಳಿಯನಿಗೆ ಬಿಟ್ಟುಕೊಟ್ಟರು. ನಾಟಕ ಪ್ರಪಂಚದಿಂದ ಆ ಕಾಲದಲ್ಲೂ ಅವರಿಗೆ ಸಂಸಾರ ನಿರ್ವಹಿಸಬಲ್ಲಷ್ಟು ಆದಾಯ ಬರುತ್ತಿತ್ತು. ಮುಂದೆ ೧೯೪೭ರಲ್ಲಿ ಕೆಲಸಕ್ಕೆ ರಾಜೀನಾಮೆ ಕೊಟ್ಟು ಧಾರವಾಡಕ್ಕೆ ಬಂದು ನೆಲೆಸಿದರು. ಅದಕ್ಕೆ ಮುಖ್ಯ ಕಾರಣ ಮಕ್ಕಳ ಶಿಕ್ಷಣ. ಇಲ್ಲೀಗ ಅವರ ಗಮನ ಪಠ್ಯಪುಸ್ತಕಗಳ ತಯಾರಿಕೆಯತ್ತಲೂ ಸ್ವಂತ ಲೇಖನ ಕಾರ್ಯದತ್ತಲೂ ಹೊರಳಿತು. ಆ ಮುಂಚೆಯೇ ೧೯೪೦-೪೧ ರಲ್ಲಿ ಅವರು ಏಕಾಕಿಯಾಗಿ ತಯಾರಿಸಿದ್ದ ಗೌರೀಶ ವಾಚನಮಾಲೆ ಆಗಲೆ ಸಾಕಷ್ಟು ಹೆಸರುವಾಸಿಯಾಗಿತ್ತು. ಧಾರವಾಡಕ್ಕೆ ಬಂದ ನಂತರ ೫೦-೬೦ ಮಕ್ಕಳ ಪುಸ್ತಕಗಳನ್ನು ರಚಿಸಿದರು. ಕೆಲವು ದೀರ್ಘ ನಾಟಕಗಳನ್ನು ಬರೆದರು. ಏಕಾಂಕ ನಾಟಕಗಳಿಗೂ ರೇಡಿಯೋ ನಾಟಕಗಳಿಗೂ ಲೆಕ್ಕವೇ ಇಲ್ಲ. ಆದರೆ ಇವರ ಪಾಂಡಿತ್ಯಕ್ಕೆ ಕಲಶಪ್ರಾಯವಾಗಿರುವಂತಹ ಕೃತಿಯೆಂದರೆ ಕನ್ನಡ ಶಬ್ದಕೋಶ– 'ಕಸ್ತೂರಿಕೋಶ' ತನ್ನಲ್ಲಿ ಅರಗಿಸಿಕೊಂಡ ಪಾಂಡಿತ್ಯ, ಜಗತ್ತಿನ ವಿಸ್ತೃತ ಅನುಭವದಿಂದ ಹೀರಿಕೊಂಡ ರಸ, ಗುರುಗಳ ಆಶೀರ್ವಾದ ಮತ್ತು ಕನ್ನಡದ ಬಗೆಗೆ ಅನನ್ಯ ಅಭಿಮಾನ ಇದಿಷ್ಟನ್ನೂ ಬಂಡವಾಳವಾಗಿಟ್ಟುಕೊಂಡು ಏಕನಿಷ್ಠೆಯಿಂದ ದುಡಿದು ಏಕಾಕಿಯಾಗಿಯೇ ಒಂಬತ್ತೇ ತಿಂಗಳಲ್ಲಿ 'ಕಸ್ತೂರಿ ಕೋಶ'ವನ್ನು ಕವಲಿಯವರು ತಯಾರಿಸಿದರು. ಇಂಥ ಕೋಶವನ್ನು ರಚಿಸಲು ಕನ್ನಡ ಸಾಹಿತ್ಯ ಪರಿಷತ್ತಿನಂಥ ಸಂಸ್ಥೆ ಹಲವು ಪಂಡಿತರುಗಳ ನೆರವಿನಿಂದ ಕಳೆದ ಹಲವಾರು ವರ್ಷಗಳಿಂದ ಪ್ರಯತ್ನಿಸುತ್ತಿದ್ದಾಗಲೂ ಇನ್ನೂ ಆ ಕೆಲಸ

ನಡೆದೇ ಇದೆ. ಈಗ ಹೊರಬಂದಿರುವಷ್ಟನ್ನು ನೋಡಿದ ಕೆಲವರು 'ಕಸ್ತೂರಿಕೋಶ'ದ ಮಟ್ಟಕ್ಕೆ ನಿಲ್ಲಲಾರದೆಂದು ಶಂಕಿಸಿಯೂ ಇದ್ದಾರೆ.

*

ಕನ್ನಡದ, ಕರ್ನಾಟಕದ ಮಾತು ಬಂದಾಗ ಪಂ. ಕವಲಿಯವರು ಒಮ್ಮೆಲೆ ಪುಳಕಿತರಾಗಿ ಬಿಡುತ್ತಾರೆ. ಅವರಾಡುವ ಭಾಷೆಗೆ ಪಾಂಡಿತ್ಯದ ಕವಚವಿದ್ದರೂ ಜಾನಪದದ ಸತ್ವದಿಂದ ಅದು ಶ್ರೀಮಂತವಾಗಿದೆಯೆಂಬುದು ತಟ್ಟನೆ ಮನ ಮುಟ್ಟುತ್ತದೆ. ಕನ್ನಡದ ಪುರಾತನತೆ; ಅದರ ಪರಿಪೂರ್ಣತೆ; ಅದರ ಸೌಂದರ್ಯದ ಬಗ್ಗೆ ಎಷ್ಟು ಮಾತಾಡಿದರೂ ಅವರು ದಣಿಯುವುದಿಲ್ಲ.

"ಕನ್ನಡ ಲಿಪಿಯಲ್ಲಿ ಅಚ್ಚು ಮಾಡಿದರೆ ಕನ್ನಡವಾಯಿತೆ?" ಎಂದು ಕೇಳುತ್ತಾರೆ, ಪಂ. ಕವಲಿ. ಕನ್ನಡ ಹೋಮಿಯೋಪಥಿ ಪುಸ್ತಕವೊಂದರಲ್ಲಿ ಅಪೆಂಡಿಸೈಟಿಸ್ ರೋಗವನ್ನು 'ಉಂಡುಕ ಪುಚ್ಛ ವಿದ್ರಧಿ' ಎಂದು ಕರೆದುದುನ್ನು ನೋಡಿದಾಗಲೇ ಅವರಿಗೆ ಆ ಲೇಖನದ ಕನ್ನಡತನದ ಬಗ್ಗೆ ಮರುಕ ಹುಟ್ಟಿತಂತೆ. ಇಂದು ಸರಕಾರದ ಆಜ್ಞೆಯೊಂದರ ಮೂಲಕ ರಾಜ್ಯಭಾಷೆ ಕನ್ನಡವೆಂದಾಗಿದೆಯೇನೋ ನಿಜ. ಆದರೆ ಸರಕಾರಿ ವ್ಯವಹಾರದಲ್ಲಿ ಬಳಸಲಾಗುತ್ತಿರುವ ಪದಗಳನ್ನು ನೋಡಿದರೆ ಅಯ್ಯೋ ಕನ್ನಡವೆ ಎನಿಸುತ್ತದೆ.

ಕನ್ನಡ ಅತ್ಯಂತ ಸಮರ್ಥ ಭಾಷೆ, ಅದರ ಸಾಧ್ಯತೆಯೂ ಅಪರಿಮಿತವೆಂಬುದು ಕವಲಿಯವರಿಗೆ ಮನವರಿಕೆಯಾದುದು ವಚನಶಾಸ್ತ್ರವನ್ನೋದಿದ ಮೇಲೆ. ಭಾಷೆಯ ಬಗ್ಗೆ ಆತ್ಮೀಯತೆ, ಉತ್ಸಾಹ ಇದ್ದರೆ ಅದರಲ್ಲಿ ಏನೇನು ಮಾಡಬಹುದೆಂಬುದನ್ನೆಲ್ಲ ವಚನಕಾರರು ತೋರಿದ್ದಾರೆನ್ನುತ್ತಾರೆ ಕವಲಿ. ತಿಳಿಗನ್ನಡದಲ್ಲೇ ಸಮರ್ಥ ಶಬ್ದಗಳಿವೆ. ಸುಮ್ಮನೆ ಸಂಸ್ಕೃತ ಶಬ್ದಗಳನ್ನು ತುರುಕಿ ಜನಕ್ಕೆ ಅರ್ಥವಾಗದ ಭಾಷೆಯಲ್ಲಿ ಅನುವಾದ ಮಾಡುವುದು ಶುದ್ಧ ತಪ್ಪು ಎನ್ನುತ್ತಾರವರು. ಹಾಗೆ ನೋಡಿದರೆ ತದ್ಭವಗಳನ್ನು ಬಳಸುವುದು ಕೂಡ ಶುದ್ಧ ಕನ್ನಡಕ್ಕೆ ಅನಿವಾರ್ಯವೇನಲ್ಲ.

ಆರ್ಯರು ಈ ನಾಡಿಗೆ ಕಾಲಿರಿಸುವದಕ್ಕಿಂತ ಇತಿಹಾಸವನ್ನು ನೋಡಿದರೆ ಕನ್ನಡ, ತಮಿಳಿನಂತಹ ಭಾಷೆಗಳು ಕೆಲವು ಸಾವಿರ ವರ್ಷಗಳ ಹಿಂದೆ ವಿಂಧ್ಯೆಯ ಉತ್ತರದಲ್ಲೂ ಇದ್ದಿರಲು ಸಾಕು. ನೃಪತುಂಗನೇ ಕನ್ನಡದ ಉತ್ತರ ಗಡುವು ಗೋದಾವರಿಯೆಂದು ಹೇಳಿಕೊಂಡಿರುವಾಗ ಇದು ಅಸಾಧ್ಯವಾದ ಮಾತೇನಲ್ಲ. ನೃಪತುಂಗನ ಮಾತನ್ನೇ ಸ್ವಲ್ಪ ಬದಲಿಸಿ "ಕಾವೇರಿಯಿಂದಮಾ ಕಶ್ಮೀರಾವೃತಮಾ ನಾಡದಾ ಕನ್ನಡದೊಳ್" ಎಂದು ಬದಲಿಸಬಹುದಲ್ಲ. 'ಕಶ್ಮೀರ್' ಶಬ್ದವನ್ನು ಕಸದುಂ + ಇರ್ = ಕಶ್ಮೀರ್ (ಕಶ್ಯಪ + ಇರ್ = ಕಶ್ಮೀರ್) ಈ ರೀತಿ ಹೇಳಬಹುದಲ್ಲವೆ? ಹೀಗೆಂದು ಕವಲಿಯವರ ಮಿತ್ರ ಬುದ್ದಯ್ಯನವರು ಕೇಳುತ್ತಿದ್ದರಂತೆ. ಅದು ಖಂಡಿತ ಮನವರಿಕೆಯಾಗುವ ಮಾತು ಅನ್ನುತ್ತಾರೆ ಕವಲಿ. ಕಶ್ಯಪ ಮಹರ್ಷಿಯು ಇದ್ದ ನಾಡು ಕಶ್ಮೀರವಾದರೆ 'ಇರ್' ಶಬ್ದ ಖಂಡಿತ ಕನ್ನಡ. ಒಂದು ಕಾಲಕ್ಕೆ ಕನ್ನಡ ಅಲ್ಲಿಯವರೆಗೂ ಇತ್ತೆನ್ನಬೇಕು. ಕನ್ನಡ ಭಾಷೆಯ ಮೂಲ ಪದಾರ್ಥ ಕಶ್ಯಪನೇಕಾಗಿರಬಾರದು? ತಮಿಳು ಭಾಷೆಗೆ ಅಗಸ್ತ್ಯನ, ತೆಲುಗಿಗೆ ಕಣ್ವನ ಹೆಸರು ಹೇಳುವುದಾದರೆ ಕನ್ನಡ ಮಾತ್ರ ಸ್ವಯಂಭೂ ಎನ್ನಬೇಕೆ? ಹಾಗೆ ಹೇಳಬಾರದಿದ್ದರೆ ಕಸದುನಿಂದ ಅಥವಾ ಕಶ್ಯಪನಿಂದಲೇ ಈ ಭಾಷೆ ಉದ್ಭವಿಸಿರಬಹುದಲ್ಲವೆ? ಇದಕ್ಕೆ ಭಾಷೆಯ ಸಾಧ್ಯತೆಯೊಂದನ್ನುಳಿದು ಬೇರೆ ಆಧಾರಗಳು ನಮಗೀಗ ಸಿಕ್ಕಲಿಕ್ಕಿಲ್ಲ. ಆದರೆ ಹಾಗೆಂದ ಮಾತ್ರಕ್ಕೆ 'ಸಾಧ್ಯತೆಯನ್ನು ಲಘುವಾಗಿ ತಳ್ಳಿಹಾಕಲು ಬರುವುದಿಲ್ಲ.

ಕವಲಿಯವರ ಪ್ರಕಾರ ಕನ್ನಡ ಸಂಸ್ಕೃತಿ ಎಂದರೆ ಆರ್ಯ–ದ್ರಾವಿಡ ಸಂಸ್ಕೃತಿ. ಅದು ಹೇಗೆಂದು ನೋಡಲು ಒಂದು ಶಬ್ದದ ಜಾಡು ಹಿಡಿದು ಹೇಳಬಹುದು. ಕನ್ನಡದಲ್ಲಿ ಅಂಬಿಗನಿಗಿರುವ ಇನ್ನೊಂದು ಹೆಸರು ಬೆಸ್ತ ಎಂಬುದು. ಇದರ ಮೂಲವನ್ನು ವೇತ್ರಹಸ್ತ→ವೆತ್ತಹಸ್ತ→ಬೆಸ್ತ ಎಂದು ಹೇಳಬಹುದಲ್ಲ ಎನ್ನುತ್ತಾರೆ ಕವಲಿ. ಅವರೊಂದಿಗೆ ಮಾತಾಡುತ್ತ ಕುಳಿತರೆ ಇಂಥ ನೂರಾರು ಉದಾಹರಣೆಗಳನ್ನು ಕೊಡುತ್ತಾರೆ.

ಗುರುವಾಜ್ಞೆಯ ಮೇರೆಗೆ ಶ್ರೀಹರ್ಷನ 'ರತ್ನಾವಲೀ' ನಾಟಕವನ್ನು ೧೨ನೆಯ ಶತಮಾನದ ಹಳಗನ್ನಡದಲ್ಲಿ ಕವಲಿಯವರು ಅನುವಾದಿಸಿ ಮೆಚ್ಚುಗೆ

ಹೇಳಿದ್ದಾರೆ.

'ಕನ್ನಡ' ಶಬ್ದ ಒಂದು ಭಾಷೆಯ ಹೆಸರನ್ನು ಹೇಳುತ್ತದೋ ಅಥವಾ ಒಂದು ನಾಡನ್ನು ಸೂಚಿಸುತ್ತದೋ ಎಂಬ ಪ್ರಶ್ನೆಗೆ ಅವರು ಹೇಳುವುದು ನಾಡನ್ನು ಎಂದು. ಕರ್ನಾಟಕಕ್ಕಿಂತ ಕನ್ನಡ ನಾಡು ಎಂಬುದು ಬಹಳ ಸೂಕ್ತ ಮತ್ತು ಪ್ರಶಸ್ತ ಹೆಸರೆಂದು ಅವರು ಬಗೆಯುತ್ತಾರೆ. (ಆಂಡಯ್ಯ 'ಕನ್ನಡವೆಂಬುದು ನಾಡು ಜಿಲ್ಲೆಯನ್ನು' ಎಂದು ಹೇಳಿದ್ದಾನೆ.)

ಕನ್ನಡ ಶಬ್ದ ದೇಶವಾಚಕವಾಗಿರುವುದಾದರೆ ಭಾಷೆಯ ಹೆಸರು ಸ್ವಲ್ಪ ವ್ಯತ್ಯಾಸವಾಗಿ 'ಕನ್ನಡಿ' ಎಂದಿರಬೇಕಿತ್ತು. ಹಾಗೆ ಹೇಳುವುದಕ್ಕೆ ಕಾರಣ ಕನ್ನಡಿಯಲ್ಲಿರುವ ಪ್ರತಿಬಿಂಬಿಸುವ ಶಕ್ತಿ; ಮನಸ್ಸಿನ ಮಾತನ್ನು ನಿಚ್ಚಳವಾಗಿ ಪ್ರತಿಬಿಂಬಿಸುವ ಸಮರ್ಥ ಭಾಷೆ ಕೆಚ್ಚು ನುಡಿ.

•

ಕಾವ್ಯದ ಉದ್ದೇಶ 'ಲೋಕೋತ್ತರ ಆಹ್ಲಾದ ಜ್ಞಾನ ಜನಕ ಗೋಚರತಾ' ಎಂದು ಪಂಡಿತರಾಜ ಜಗನ್ನಾಥ ಹೇಳಿದ್ದಾನೆ. ಅದನ್ನು ಅಕ್ಷರಶಃ ಒಪ್ಪುತ್ತಾರೆ ಕವಲಿಯವರು. ಅಂತೆಯೇ ಅವರು ರಚಿಸಿದ ನಾಟಕಾದಿಗಳೆಲ್ಲ ಈ ಲಕ್ಷಣಗಳನ್ನು ಖಂಡಿತ ಹೊಂದಿವೆ.

ಪಂ. ಕವಲಿಯವರು ಇತ್ತೀಚೆಗೆ ಬರೆದು ಮುಗಿಸಿರುವ ಮತ್ತು ಕನ್ನಡ ಜನಕ್ಕೆ ನೀಡ ಬಯಸಿರುವ ಹೊತ್ತಿಗೆಯೆಂದರೆ "ಕ್ಷ ಕಿರಣದಲ್ಲಿ ಕಾಳಿದಾಸ ದರ್ಶನ" ಎಂಬುದು. ಕಾಳಿದಾಸ ಎಂಬ ಹೆಸರಿನ ಕವಿ ಬರೆದ ೩೨ ಕೃತಿಗಳು ಲಭ್ಯವಿವೆ. ಆದರೆ ಒಂದೇ ಹೆಸರಿನವರು ಅನೇಕರು ಇರಬಹುದಲ್ಲವೆ, ಮತ್ತೆ ಕೆಲವರು ತಮ್ಮ ಕೃತಿಗಳು ಪ್ರಸಿದ್ಧ ಕವಿಯ ಹೆಸರಿನಲ್ಲಿ ಬಂದರೆ ಅವುಗಳಿಗೆ ಬೆಲೆ ಬಂದೀತೆಂದು ತಮಗೆ ಆ ಕವಿಯ ಹೆಸರನ್ನು ಆರೋಪಿಸಿಕೊಳ್ಳುವುದುಂಟು. ಎಲ್ಲ ೩೨ ಕೃತಿಗಳು ಮೂಲ ಕಾಳಿದಾಸನವಾಗಿರಲಾರವೆಂಬುದು ಎಲ್ಲರೂ ಒಪ್ಪುವ ವಿಷಯ; ಆದರೆ ಏಳು ಕೃತಿಗಳು ಮಾತ್ರ ಖಂಡಿತ ಅವನವೇ. ಏಳೆನ್ನುವುದು ಅನೇಕ ವಿದ್ವಾಂಸರ ಅಭಿಪ್ರಾಯ. ಆದರೆ ಕಾಳಿದಾಸನನ್ನು ಗಾಢವಾಗಿ ಅಭ್ಯಸಿಸಿರುವ ಹಲವು ವರ್ಷ ಅವನ ಕೃತಿಗಳ ರಸಾಸ್ವಾದ ಮಾಡಿರುವ ಕವಲಿಯವರು 'ಮೇಘದೂತ' 'ರಘುವಂಶ' 'ಮಾಲವಿಕಾಗ್ನಿಮಿತ್ರ' 'ಶಾಕುಂತಲ' ಈ ನಾಲ್ಕು ಮಾತ್ರ ಅವನ ಕೃತಿಗಳೆಂದು ಹೇಳುತ್ತಾರೆ. ಅವರ ಹೊಸ ಪುಸ್ತಕದಲ್ಲಿ ಈ ಬಗ್ಗೆ ಸಾಕಷ್ಟು ವಿವೇಚನೆ ಮಾಡಿದ್ದಾರಲ್ಲದೆ ಅವನು ಮೂಲತಃ ಕುರುಬ. ಅವನು ಕಾಳೀ(ದೇವಿ)ದಾಸ ಎಂಬುದನ್ನು ಸಪ್ರಮಾಣವಾಗಿ ನಿರಾಕರಿಸುತ್ತಾರೆ. ಕಾಳಿದಾಸ ಕುರುಬನಹುದೋ ಅಲ್ಲವೋ ಎಂಬುದನ್ನು ಬದಿಗಿಟ್ಟು ಅವನು ಕಾಳೀದಾಸನಲ್ಲ ಕಾಳಿದಾಸ ಎಂದು ಅವರು ಹೇಳುವ ರೀತಿಯನ್ನು ಕಂಡೇ ಬೆರಳು ಕಚ್ಚಬೇಕು.

ಕಾಳಿದಾಸನು ಪರಮ ಶಿವಭಕ್ತ, ಶಿವನ ದಾಸ. ಶಿವನಿಗೆ ಕಾಲಃ ಎಂಬ ಹೆಸರಿರುವಂತೆಯೇ ಅವನನ್ನು ಕಾಲಿನ್ ಎಂದೂ ಕರೆಯಬಹುದು. ಯಾಕೆಂದರೆ ಶಿವನ ಎರಡು ಕಣ್ಣುಗಳೆಂದರೆ ಸೂರ್ಯ ಚಂದ್ರರು. ಇವು ಕಾಲದರ್ಶಕ ಅವಯವಗಳು. ಕಾಲದರ್ಶಕ ಅವಯವಗಳುಳ್ಳವನು ಕಾಲಿನ್ ಆಗುತ್ತಾನೆ "ಕಾಲೌ ಅನೇನ ಪ್ರವೃತ್ತೌ ಕಾಲಿನ್."

ಕಾಳಿದಾಸನ ಕುರಿತು ಪಂ. ಕವಲಿಯವರು ಮಂಡಿಸಿದ ವಿಚಾರಗಳನ್ನು ಪಂಡಿತರೆಲ್ಲರೂ ಒಮ್ಮೆಲೆ ಒಪ್ಪಿ ಬಿಡುತ್ತಾರೆ, ಮೆಚ್ಚಿ ಹೊಗಳುತ್ತಾರೆಂದು ಯಾರೂ ನಿರೀಕ್ಷಿಸುವುದಿಲ್ಲ. ಆದರೆ ಖಂಡಿತವಾಗಿಯೂ ಅವು ಹುಡುಗಾಟಿಕೆಯೆಂದು ತಳ್ಳಿಬಿಡುವಂಥ ವಿಚಾರಗಳಲ್ಲ. ಮನ್ನಣೆ ಮುದ್ರೆಯೆಂಬುದು ಕವಲಿಯವರಿಂದ ಎಂದಿಂದಲೂ ದೂರ ಸಿಡಿದು ನಿಂತ ಮಾತೇ. ಅದು ಈಗಲೂ ಸಿಗದಿದ್ದರೆ ಅವರಿಗೇನೂ ದುಃಖವಿಲ್ಲ. ✡

★★★★★★★★★★★★★★★

**ಧನ-ಧಾನ್ಯ-ಜ್ಞಾನಗಳು ಒಂದೇ ರೀತಿ : ಹರಡದಿದ್ದರೆ, ಹಂಚದಿದ್ದರೆ ಹಳಸುತ್ತವೆ, ಕೊಳೆಯುತ್ತವೆ.**

# ಕವಿಯಾಗ ಬಯಸಿದ ಕಡುಗಲಿ

ಗೌರೀಶ ಕಾಯ್ಕಿಣಿ

ದಿ. ಗಳಗನಾಥರ 'ಕಮಲಕುಮಾರಿ' ಕಾದಂಬರಿಯನ್ನು ಓದದ ಕನ್ನಡ ವಿದ್ಯಾರ್ಥಿಗಳೂ ಜನಸಾಮಾನ್ಯರೂ ಬಹುಶಃ ಇರಲಿಕ್ಕಿಲ್ಲ ಅಥವಾ ನಮ್ಮ ತಲೆನೆರೆತವರಲ್ಲಿ ಅಂಥ ಪುಣ್ಯಾತ್ಮರು ಯಾರೂ ಇದ್ದಿಲ್ಲ. ಅದು ಮರಾಠಿಗರ ಶಿವಾಜಿಯ ಚರಿತ್ರೆಯೊಳಗಿನ ಒಂದು ಅತ್ಯಂತ ರೋಮಾಂಚಕಾರಿಯಾದ ಕಥೆ. ಶಿವಾಜಿಯ ಬಲಗೈಯಂತಿದ್ದ ಎಂಟೆದೆಯ ಬಂಟ ತಾನಾಜೀ ಬಾಲಸುರೆ ತನ್ನ ಶಿವಪ್ರಭುವಿಗಾಗಿ ಪುಣೆಯ ಹತ್ತಿರದ ಕೊಂಡಾಣಾ ಕೋಟೆಯನ್ನು ಗೆದ್ದನಂತೆ. ಆ ಕೋಟೆಗೆ ಶಿವಾಜಿಯು ಮುಂದೆ 'ಸಿಂಹಗಡ' ಎಂಬ ಹೆಸರನ್ನಿಟ್ಟ. ತಾನಾಜಿಯ ನೆನಪಿಗಾಗಿ ಕೋಟೆಯು ಕೈವಶವಾಗುತ್ತಿದ್ದಂತೆಯೇ ತಾನಾಜಿಯು ಕಾಳಗದಲ್ಲಿ ದೇಹವಿಟ್ಟ. ಅದನ್ನು ಕೇಳಿ, ಕಂಡು ಶಿವಾಜಿ ಉದ್ಗರಿಸಿದ. "ಗಡ ಆಲಾಫಣ್ ಸಿಂಹ ಗೇಲಾ!" (ಕೋಟೆ ಬಂತು ಆದರೆ ಸಿಂಹ ಹೋಯಿತು) ಅಂದಾಗ ಶಿವಾಜಿಯು ಹೆಸರಿಡುವ ಮುಂಚೆಯೇ ಕೊಂಡಾಣಾ 'ಸಿಂಹಗಡ' ಎಂದು ಹೆಸರಾಗಿದ್ದಿರಬೇಕು.

ಮಹಾರಾಷ್ಟ್ರದ ಐತಿಹಾಸಿಕ ಕಾದಂಬರಿ ಪಿತಾಮಹರೂ ಮರಾಠಿಯ "ವಾಲ್ಟರ್ ಸ್ಕಾಟ್" ಎನಿಸಿಕೊಂಡ ದಿ. ಶ್ರೀ ಹರಿ ನಾರಾಯಣ ಆಪಟೆಯವರ 'ಗಡ ಆಲಾ ಪಣ ಸಿಂಹ ಗೇಲಾ!' ಎಂಬ ಪ್ರಸಿದ್ಧ ಕಾದಂಬರಿಯ ಕನ್ನಡ ಅನುವಾದವೇ ಗಳಗನಾಥರ 'ಕಮಲಕುಮಾರಿ,' ಅವರ 'ಮಾಧವ ಕರುಣಾವಿಲಾಸ'ವನ್ನು ಬಿಟ್ಟರೆ ಉಳಿದೆಲ್ಲ ಕೃತಿಗಳೂ ಹರಿ ನಾರಾಯಣ ಆಪಟೆಯವರ ಕಾದಂಬರಿಗಳ ಅನುವಾದಗಳೇ ಆಗಿವೆ. ಇರಲಿ.

ಈ ಕಾದಂಬರಿಯ ಹೆಸರು ನೆನಪಾದುದೇಕೆ ? ೧೮ನೆಯ ಶತಮಾನದಲ್ಲಿ ಇದೇ ರೀತಿಯ ಇನ್ನೊಂದು 'ಸಿಂಹಗಡ' ಅಟ್ಲಾಂಟಿಕದ ಆಚೆಗೆ ಕೆನಡಾ ದೇಶದಲ್ಲಿ ಹುಟ್ಟಿಕೊಂಡಿತು. ಅಲ್ಲಿಯೂ ಒಂದು ಪ್ರಚಂಡವಾದ, ಅಭೇದ್ಯವಾದ ಕೋಟೆಯನ್ನು ಹಗೆಗಳಿಂದ ಕಿತ್ತುಕೊಳ್ಳಲಿಕ್ಕೆ ಒಬ್ಬ ಪರಾಕ್ರಮಿಯಾದ ಸೇನಾಪತಿ ದಾಳಿ ಮಾಡಿ ಹೋರಾಡಿ ಸತ್ತ. ಅವನ ಸಾವು ಸಾರ್ಥಕವಾಯಿತು. ಆ ಕೋಟೆ ಆತ ಸತ್ತ ಮೇಲೆ ಅವನ ಪಕ್ಷದ ವಶವಾಯಿತು.

ಈ ಸೇನಾಪತಿಯೇ ಬ್ರಿಟಿಶ್ ಜನರಲ್ ವೂಲ್ಫ್. ಆ ಕೋಟೆಯೇ ಕೆನಡಾದ ರಾಜಧಾನಿ ಆಗಿರುವ ಕ್ವಿಬೆಕ್ ಕೋಟೆ– ಸೇಂಟ್ ಲಾರೆನ್ಸ್ ನದಿಯ ದಂಡೆಗೆ ನಿಂತ ಹಳೆಯ ದೈತ್ಯ ದುರ್ಗ. ಬ್ರಿಟಿಶರು ಅಂದು ಈ ರಾಜಧಾನಿಯ ಕೋಟೆಯನ್ನೂ ಅದು ಆಳುತ್ತಿರುವ ಸಮಗ್ರ ಕೆನಡಾದ ಫ್ರೆಂಚ್ ವಸಾಹತುಗಳ ಪ್ರದೇಶವನ್ನು ವಶಪಡಿಸಿಕೊಳ್ಳಲು ಹೋರಾಟ ನಡೆಸಿದ್ದರು. ೧೮ನೇ ಶತಮಾನದ ಯುರೋಪಿನ ಇತಿಹಾಸ ಈ ಸೆಣಸಾಟದ ವೀರಗಾಥೆಯೇ ಆಗಿದೆ. ಯೂರೋಪಿನ ಯಾವ ರಾಷ್ಟ್ರದ (ರಾಜ್ಯದ) ವ್ಯಾಜ್ಯವೇ ಇರಲಿ, ಅದರಲ್ಲಿ ಬ್ರಿಟಿಶರೂ ಫ್ರೆಂಚರೂ ಇತ್ತಂಡಗಳ ಪಕ್ಷ ವಹಿಸಿ ಪರಸ್ಪರ ಹೋರಾಡುತ್ತಿದ್ದರು. ಈ ಹೋರಾಟ ಸಾಮ್ರಾಜ್ಯ ವಿಸ್ತರಣೆಗಾಗಿ, ಸಾಗರೋತ್ತರ ವಸಾಹತು ವ್ಯಾಪಾರಗಳ ವಲಯ ವರ್ಚಸ್ಸು ಸ್ಥಾಪಿಸಿಕೊಳ್ಳುವದಕ್ಕಾಗಿ ಮತ್ತೆ ಮತ್ತೆ ನಡೆಯುತ್ತಿತ್ತು. ಯೂರೋಪಿನಲ್ಲಿ, ಭಾರತದಲ್ಲಿ ಕೆನಡಾದಲ್ಲಿ ಎಲ್ಲೇ ಇರಲಿ, ಇಂಗ್ಲಂಡ್–ಫ್ರಾನ್ಸ

ಗಳ ವ್ಯಾಪಾರಿ ಕಂಪನಿಗಳೂ ಅವುಗಳ ಬೆನ್ನಿಗೆ ನಿಂತ ಸೇನಾಬಲ ನೌಕಾಬಲಗಳೂ ಮುಖಾ ಮುಖಿಯಾಗಿ ಯುದ್ಧರಂಗದಲ್ಲಿ ನುಗ್ಗುತ್ತಿದ್ದವು. ಕೆಲ ಸಲ ಯುರೋಪಿಯನ್ ಮೂಲದ ವ್ಯಾಜ್ಯ ಮುಗಿದರೂ ಈ ದೂರದಲ್ಲಿ ಹಬ್ಬಿದ ಈ ಉಭಯ ರಾಷ್ಟ್ರಗಳ ದ್ವೇಷದ ದಳ್ಳುರಿ ನಂದದೆ ಮುಂದಿನ ಒಂದು ವ್ಯಾಜ್ಯ ತಲೆ ಎತ್ತುವ ತನಕವೂ ಇವರ ಹೋರಾಟಗಳು ಮುಂದರಿಯುತ್ತಲೇ ಇರುತ್ತಿದ್ದವು. ಆಗಾಗ ಇವರು ಎತ್ತಿ ಹಿಡಿದ ಪಕ್ಷಗಳು ಅದಲು ಬದಲಾಗುತ್ತಿದ್ದವು. ಆದರೆ ಇವರ ಹೋರಾಟ ಕೊನೆಗೂ ಇವರದೇ. ಅದರಲ್ಲಿ ಕೊನೆಗೂ ಫ್ರೆಂಚರು ಸೋತು ಬ್ರಿಟಿಶ್ ಸಾಮ್ರಾಜ್ಯವೇ ಭೂಮಂಡಲ ವೆಲ್ಲ ವ್ಯಾಪಿಸಿ ನೆಲೆಸುವಂತಾಯಿತು.

೧೮ನೆಯ ಶತಮಾನದ ನಡುಗಾಲ. (ಈ ಕಥೆಗೆ ಇಸವಿ ಸನ್ ಮುಖ್ಯವಲ್ಲ.) ಕೆನಡಾದ ಫ್ರೆಂಚ್ ವಸಾಹತುಗಳೂ ಅಲ್ಲಿಯ ವ್ಯಾಪಾರಿ ಕೇಂದ್ರಗಳೂ ಸೇಂಟ್ ಲಾರೆನ್ಸ್ ಹೊಳೆಯ ದಂಡೆ ಗುಂಟ ಚಾಚಿದ್ದವು. ಒಳನಾಡಿಗೆ ಆ ಹೊಳೆಯೇ ಹೆದ್ದಾರಿ. ಅದರ ಮೇಲೆ ಕ್ವಿಬೆಕ್ ಕೋಟೆಯಿಂದ ಫ್ರೆಂಚರ ಸರ್ಪಗಾವಲು. ಅಂದಾಗ ಕೆನಡಾದ ದಂಡಯಾತ್ರೆಗೆ ಈ ಕೋಟೆಯನ್ನು ಮೊದಲು ವಶ ಪಡಿಸಿಕೊಳ್ಳುವುದು ಜೀವಾಳದ ಅಗತ್ಯ. 'ಸಪ್ತ ವಾರ್ಷಿಕ ಯುದ್ಧ'ವೆಂದು ಇತಿಹಾಸದಲ್ಲಿ ಹೆಸರಾದ ಈ ಸಮರ–ಸರಣಿಯಲ್ಲಿ ಕ್ವಿಬೆಕ್ ವಿಜ–ಯದ ರಣ ಪ್ರಸಂಗ ನಡೆಯಿತು.

ಅದೊಂದು ಪ್ರಚಂಡ ಅಭೇದ್ಯ ಕೋಟೆ ಕ್ವಿಬೆಕ್. ಅದರ ಗೋಡೆಯ ಒಳಗೆಲ್ಲ ಭದ್ರವಾದ ಫ್ರೆಂಚ್ ಪಡೆಗಳ ಕಾವಲು. ಆದರೆ ಲಾರೆನ್ಸ್ ಹೊಳೆಯ ಬದಿಗೆ ಅದಕ್ಕೆ ಕಡಿದಾದ



ಮುಗಿಲೆತ್ತರದ ಗುಡ್ಡದ ಮಗ್ಗುಲೇ ಹೆಗ್ಗೋಡೆ. ಅದನ್ನು ಏರಿ ಹೋಗಲು ಸಾಧ್ಯವೇ ಇಲ್ಲ. ಅಂತೆಯೇ ಈ ದಿಕ್ಕಿನಲ್ಲಿ ದಂಡಿನ ಕಾವಲು ಅಷ್ಟೊಂದು ಬಿರುಸಾಗಿ ಇದ್ದಿಲ್ಲ. ಇದರ ಸುಳಿವು ಬ್ರಿಟಿಶ್ ಶಿಬಿರಕ್ಕೆ ಅವರ ಬೇಹುಗಾರರಿಂದ ಮುಟ್ಟಿತು. ಆಗ ಅದೇ ದುರ್ಗಮ ಏಕಾಂತ ಮಗ್ಗುಲಿನಿಂ-ದಲೇ ಕ್ವಿಬೆಕ್ ಕೋಟೆಗೆ, ಲಗ್ಗೆ ಹತ್ತಬೇಕೆಂದು ಬ್ರಿಟಿಶ್ ಸೇನಾಪತಿ ಜನರಲ್ ವೂಲ್ಫ್ ನಿರ್ಧಾರ ಮಾಡಿದ.

ಸರಿ. ಒಂದು ನಡುರಾತ್ರಿಯಲ್ಲಿ ದೊಡ್ಡ ದೋಣಿಗಳಲ್ಲಿ ತುಂಬಿ ಬ್ರಿಟಿಶ್ ಪಡೆಗಳು ಶಸ್ತ್ರಸಜ್ಜಿಕೆಯಿಂದ ಲಾರೆನ್ಸ್ ಹೊಳೆಯಲ್ಲಿ ಹೊರಟವು. ನದಿಯನ್ನು ಬಾನನ್ನು ಹಿಟ್ಟು ಚೆಲ್ಲಿದಂತೆ ಹುಚ್ಚು ಬೆಳದಿಂಗಳು ತುಂಬಿ ತಬ್ಬಿ ಹಬ್ಬಿತ್ತು. ಆ ಬೆಳ್ಳಿಯ ಹೊಳೆಯಲ್ಲಿ ಕಪ್ಪು ಚುಕ್ಕೆಗಳಂತೆ ಬ್ರಿಟಿಶ್ ನೌಕೆಗಳು ಸದ್ದಿಲ್ಲದೆ ತೇಲಿ ಮುಂದೆ ಸಾಗಿದ್ದವು. ದೂರದಲ್ಲಿ ದೆವ್ವದಂತೆ ಕ್ವಿಬೆಕ್ ಕೋಟೆ ಹೊಳೆಗೆ ಬೆನ್ನು ಹಾಕಿ ನಿಂತಿತ್ತು. ಆ ಬೆಳ-ದಿಂಗಳ ನೀರವ ರಾತ್ರಿಯಲ್ಲಿ ಕೋಟೆಯ ಗೋಡೆಯನ್ನು ನಿಧಾನವಾಗಿ ಸಮೀಪಿಸುತ್ತಿದ್ದಂತೆ ಜನರಲ್ ವೂಲ್ಫನಿಗೆ ಅದೇನು ಸ್ಫೂರ್ತಿ ಬಂದಿತೋ, ಆಂಗ್ಲ ಕವಿ ಥಾಮಸ್ ಗ್ರೇ ರಚಿಸಿದ ಅದಾಗಲೇ ಇಂಗ್ಲಂಡದಲ್ಲಿ ಜನಪ್ರಿಯವಾದ ಸುದೀರ್ಘ ಶೋಕಕಾವ್ಯ (elegy) "ಹಳ್ಳಿಯ ಚರ್ಚ್ ಆವಾರದ ಮೇಲೆ ಬರೆದ ಪಙ್ಕ್ತಿ"ಗಳು ನೆನಪಾಯಿತು. ಆದರೊಳಗಿನ ಒಂದು ಪ್ರಸಿದ್ಧ ಚರಣವನ್ನು ಆತ ದನಿಯೆತ್ತಿ ಹಾಡಿದ:

"ವಂದಿಮಾಗಧವಲ್ಲಿನ ಸತ್ತೆಸೊತ್ತಿನ ಸಡಗರ
ಬಾಳಬಿಂಕದ ಕುಲದ ಪೆಂಪಿನ ಒಂದಿನೆಲ್ಲ ಧನಸ್ಥಿಕೆ.
ಒಂದೆ ತೆರ ಕಾಯುವವು ಅನಿವಾರ್ಯ ಕಾಲದ
ಪ್ರಹರ.
ವೈಭವದ ಹಾದಿಗಳದೆಲ್ಲವು ಒಯ್ಯುವವು
ಆ ಮಸಣಕೇ!"

ಸೇನಾಪತಿಯ ಸೊಲ್ಲು ಮುಗಿಯಿತು. ಆತ ನಿಡಿದಾಗಿ ಉಸಿರು ಬಿಟ್ಟ. ಸುತ್ತಲೂ ಕೂಡಿ ನಿಂತು ಕುತೂಹಲದಿಂದ ಕೇಳುತ್ತಿದ್ದ ತನ್ನ ಕಟ್ಟಾಳುಗಳ ಮೊಗಗಳನ್ನೆಲ್ಲ ಒಮ್ಮೆ ದಿಟ್ಟಿಸಿ ನೋಡಿ, ಆತ ನಕ್ಕು ಉದ್ಗಾರ ತೆಗೆದ:"ಓ! ಎಂಥ ಕವನ! ಆ ಕ್ವಿಬೆಕ್ ಕೋಟೆ ಗೆಲ್ಲುವುದಕ್ಕಿಂತ ನಾನು ಈ ಕವನ ಬರೆದ ಕವಿಯಾಗುತ್ತಿದ್ದೆ!"

ಇದಕ್ಕೂ ಮಿಗಿಲಾದ ಗೌರವ ಪ್ರಶಂಸೆ ಯಾವ ನರನಾಯಕ ಯಾವ ಕವಿಗೆ ಸಲ್ಲಿಸಿದ್ದುಂಟು?

ಜನರಲ್ ವೂಲ್ಫ್ ಕೋಟೆಯ ಗೋಡೆಯನ್ನು ಮುಟ್ಟಿದ. ದಂಡಿನೊಡನೆ ಕೈಯಲ್ಲಿ ಪ್ರಾಣ ಬಾಯಲ್ಲಿ ಖಡ್ಗ ಹಿಡಿದು ಆ ಕಡಿದಾದ ಕಗ್ಗಲ್ಲ ಬಂಡೆಯೇರಿ ಹೋಗಿ ಅಲ್ಲಿ ಫ್ರೆಂಚ್ ಪಡೆಗಳ ಮೇಲೆ ಆಕಸ್ಮಿಕ ದಾಳಿ ಮಾಡಿದ. ಕೈಗೆ ಕೈ ಹತ್ತಿ ರುದ್ರರಭಸದ ಭಯಂಕರ ಕದನ ಬೆಳತನಕವೂ ನಡೆಯಿತು. ಹೊತ್ತು ಮೂಡಿ ಬಂದಾಗ, ಕ್ವಿಬೆಕ್ ಬ್ರಿಟಿಶ್ ಸೇನೆಯ ಕೈವಶವಾಗಿತ್ತು; ಆದರೆ ಸೇನಾಪತಿ ವೂಲ್ಫ್ ರಣರಂಗದಲ್ಲಿ ದೇಹವಿಟ್ಟಿದ್ದ. ಅವನ ವೈಭವದ ಹಾದಿಯೂ ಮಸಣಕ್ಕೇ ಒಯ್ಯಿತು!

ಬಹುಶಃ ಈ ನಿಯತಿ ಆ ವೀರ ಯೋಧನಿಗೆ ಆ ಕವನ ಹಾಡುತ್ತಿರುವಾಗಲೇ ಹೊಳೆದಿರಬೇಕು. ತಾನಾಜಿ ತನ್ನ ಮಗನ ಮದುವೆಯ ಆಮಂತ್ರಣವನ್ನು ಶಿವಪ್ರಭುವಿಗೆ ಕೊಡಲು ಬಂದಿದ್ದ. ಅವನನ್ನು ಅವನ ದೈವ ಕಣಕ್ಕೆ ಎಳೆದೊಯ್ಯಿತು. ಸೇನಾಪತಿ ವೂಲ್ಫ್ ಕೋಟೆ ಗೆಲ್ಲಲು ಹೊರಟಾಗಲೂ ಅದರ ಬದಲು ಕವಿಯಾಗುವುದೇ ಶ್ರೇಷ್ಠವೆಂದು ಹಾರೈಸಿದ. ಆದರೆ ಅವನ ದೈವ ಆ ಕೋಟೆ ಗೆದ್ದು ಪ್ರಾಣ ಬಿಡುವುದರಲ್ಲೇ ಇತ್ತು.

ಆದರೂ ಹೀಗೆ ಯುದ್ಧಮುಖದಲ್ಲಿ ಕಾವ್ಯವನ್ನು ಮೆಚ್ಚಿ ಕವಿಯಾಗಬಯಸುವ ವೀರಾಗ್ರಣಿ ಲೋಕದ ಚರಿತ್ರೆಯಲ್ಲಿಯೇ ಬೇರೊಬ್ಬ ಸಿಕ್ಕುವುದಿಲ್ಲ. ✡

---

## ಆದರ್ಶ ಪತಿ ಯಾರು?

**ಹೆಂಡತಿಯ ಬಾಯಿಂದ ಮಾತು ಹೊರಬೀಳುವ ಮುನ್ನವೇ ಅದನ್ನು ಊಹಿಸಿ ನಡೆಸಿಕೊಡಲು, ಶಿರಸಾವಹಿಸಲು ತಕ್ಕ ಸಿದ್ಧತೆ ಮಾಡಿಟ್ಟುಕೊಳ್ಳುವವನು.**

# ಈತ ಓರ್ವ
# ಎಲ್ ವಿ ಟಿ ಗ್ಲೂಕೋಸ್ ಬಿಸ್ಕತ್ ಪ್ರೇಮಿ

ಕಳೆದು ಹೋದ ಶಕ್ತಿಯನ್ನು ಮತ್ತೆ ಗಳಿಸಲು ಒಂದು ಚೂರು
ಎಲ್ ವಿಟಿ ಬಿಸ್ಕತ್ತು ಸಾಕು. ಅದು ಅತ್ಯಂತ ರುಚಿಕರ.






ಅದು ತನಗೆ ಅಗಾಧ
ಶಕ್ತಿ ಕೊಡುತ್ತದೆಂದು ಆತ ಹೇಳುತ್ತಾನೆ.




ಎಲ್ ವಿ ಟಿ ಪ್ರಾಡಕ್ಟ್ಸ್

ಪಿ. ಬಿ. ನಂ. 26 ಹುಬ್ಬಳ್ಳಿ-580021

LVT. 3-79 K.A

# ಇದುವೆ ಜೀವ ಇದು ಜೀವನ

ನಾನು ಹತ್ತನೇ ತರಗತಿಯಲ್ಲಿ ಓದುತ್ತಿದ್ದಾಗ ಒಮ್ಮೆ ತಾಲೂಕು ಮಟ್ಟದ ಚರ್ಚಾ ಸ್ಪರ್ಧೆಗಾಗಿ ವಿದ್ಯಾರ್ಥಿಗಳನ್ನು ಆರಿಸಲು ಪ್ರಾಯೋಗಿಕ ಚರ್ಚಾಕೂಟವೊಂದನ್ನು ಏರ್ಪಡಿಸಿದ್ದರು. "ಪ್ರಜಾಪ್ರಭುತ್ವದಿಂದ ಭಾರತಕ್ಕೆ ಹಾನಿಯೇ ಹೊರತು ಲಾಭವಿಲ್ಲ" ಎಂಬುದು ಅಂದಿನ ವಿಷಯ. ಐದು ಜನ ವಿದ್ಯಾರ್ಥಿಗಳನ್ನು ವಿಷಯದ 'ಪರ' ಮಾತನಾಡುವಂತೆಯೂ ಮತ್ತೆ ಐದು ಜನರನ್ನು ವಿಷಯದ 'ವಿರೋಧ'ವಾಗಿ ಮಾತನಾಡುವಂತೆಯೂ ಹೇಳಲಾಗಿತ್ತು. ವಿಷಯದ ಪರ ಮಾತನಾಡುವವರಲ್ಲಿ ನಾನೂ ಒಬ್ಬನಾಗಿದ್ದೆ. ಮೊದಲು ಅಧ್ಯಾಪಕರೊಬ್ಬರು ಮಾತನಾಡಿ ವಿಷಯದ ಪರ ಹಾಗೂ ವಿರೋಧ 'ಮುಖ'ಗಳನ್ನು ಪರಿಚಯಿಸಿದರು. ನಂತರ ಮೊದಲನೆಯವನಾಗಿ ನಾನು ಎದ್ದು ನಿಂತು 'ಪರ'ವಾಗಿ ಆವೇಶದಿಂದ ಮಾತನಾಡಿದೆ. ಆಮೇಲೆ 'ವಿರೋಧ'ವಾಗಿ ಮಾತನಾಡಲು ಮಿತ್ರನೊಬ್ಬ ಎದ್ದು ನಿಂತ. ಒಮ್ಮೆ ಗಾಂಭೀರ್ಯದಿಂದ ಸುತ್ತಲೂ ನೋಡಿದ. ಕೆಮ್ಮಿದ, ಕ್ಯಾಕರಿಸಿದ. ಪ್ರಾರಂಭಿಕ ಸಂಬೋಧನೆಗಳನ್ನೆಲ್ಲಾ ಹೇಳಿ, "ಈಗಾಗಲೇ ನನ್ನ ಮಿತ್ರರಾದ ಶ್ರೀ...ರವರು ವಿಷಯದ 'ಪರ'ವಾಗಿ ಮಾತನಾಡಿದ್ದಾರೆ. ನಾನು 'ವಿರೋಧ'ವಾಗಿ ಮಾತನಾಡಬೇಕಿದೆ. ಆದರೆ ಶ್ರೀ...ರವರು ಹೇಳಿರುವುದೆಲ್ಲವೂ ಪೂರ್ತಿ ನಿಜವಾಗಿದ್ದರಿಂದ ನಾನು 'ವಿರೋಧ' ಮಾಡುವುದಿಲ್ಲ" ಎಂದವ ತಟಕ್ಕನೆ ಕುಳಿತುಬಿಟ್ಟ.

—ಕೆ. ಲಕ್ಷ್ಮೀಕೇಶವ

ನಮ್ಮ ತರಬೇತಿ ಅವಧಿಯಲ್ಲಿ ಪ್ರವಾಸ ಹೋಗಿದ್ದಾಗ ನಡೆದ ಘಟನೆ. ರಾಮೇಶ್ವರವನ್ನು ನೋಡಿಕೊಂಡು ಅಲ್ಲಿಂದ ಮಧುರೆಗೆ ರೈಲಿನಲ್ಲಿ ಹೊರಟಿದ್ದೆವು. ಆಗ ರಾತ್ರಿ ೧೦-೩೦ ಘಂಟೆ ಆಗಿತ್ತು. ನಾನು ಮತ್ತು ನನ್ನ ಸ್ನೇಹಿತರಿಬ್ಬರೂ ರೈಲಿನ ಡಬ್ಬಿಯನ್ನು ಪ್ರವೇಶಿಸುವ ಕಡೆ ಕಾಲು ನೀಡಿ ಕುಳಿತಿದ್ದೆವು. ನನಗೆ ಸ್ವಲ್ಪ ಜೊಂಪು ಹತ್ತಿದಂತಾಗಿ ಹಾಗೆಯೇ ಒರಗಿಕೊಂಡು ಕುಳಿತೆ. ನನ್ನ ಸ್ನೇಹಿತನೂ ಹಾಗೆಯೇ ಕುಳಿತಿದ್ದ. ಸ್ವಲ್ಪ ಹೊತ್ತಾದ ನಂತರ "ಧಡ್" ಎಂಬ ಶಬ್ದ ಕೇಳಿಸಿತು. ಕಣ್ಣು ತೆರೆದಾಗ ಸ್ನೇಹಿತ ಪಕ್ಕದಲ್ಲಿರಲಿಲ್ಲ. ಆ ಕ್ಷಣವೇ ನಾನು ನಡೆದಿರಬಹುದಾದ ಘಟನೆಯನ್ನು ಊಹಿಸಿ ಆಕಸ್ಮಿಕ ಸಂದರ್ಭಗಳಲ್ಲಿ ರೈಲನ್ನು ನಿಲ್ಲಿಸಲು ಇಟ್ಟಿರುವ ಚೈನನ್ನು ಎಳೆದೆ. ರೈಲು ನಿಂತಿತು, ಅಧಿಕಾರಿಗಳು ಬಂದರು. ಅವರಿಗೆ ನನ್ನ ಸ್ನೇಹಿತ ಬಿದ್ದುಹೋದ ವಿಷಯ ಹೇಳಿದೆ. ಎಲ್ಲರೂ ಅವನನ್ನು ಹುಡುಕಲು ಹೊರಟೆವು. ಅದೃಷ್ಟದ ಸಂಗತಿಯೆಂದರೆ ರೈಲು ದೊಡ್ಡ ಸೇತುವೆಯನ್ನು ೫ ನಿಮಿಷಗಳ ಕೆಳಗಷ್ಟೇ ದಾಟಿತ್ತು! ಅವನು ರೈಲು ಬಂದ ದಿಕ್ಕಿನಲ್ಲಿ ನಡೆದುಕೊಂಡು ಏನನ್ನೋ ಹುಡುಕುತ್ತ ಬರುತ್ತಿದ್ದ. ಅವನನ್ನು ನೋಡಿ ನನಗೆ ಸಂತೋಷವಾಯಿತು. ಅವನಿಗೆ ವಿಶೇಷ ಪೆಟ್ಟೇನೂ ಬಿದ್ದಂತೆ ತೋರಲಿಲ್ಲ. ಆದರೆ ಅವನು ರೈಲನ್ನು ಮತ್ತೆ ಹತ್ತಲು ನಿರಾಕರಿಸಿದ್ದನ್ನು ಕಂಡು ಆಶ್ಚರ್ಯವಾಯಿತು. ಕಾರಣ, ಅವನು ಬಿದ್ದ ರಭಸದಲ್ಲಿ ಅವನ ವಾಚ್ ಸಹ

ಎಲ್ಲೋ ಬಿದ್ದು ಹೋಗಿದ್ದು ಅದನ್ನು ಆ ಸರಿ ರಾತ್ರಿಯಲ್ಲೂ ಹುಡುಕಿ ಸಿಕ್ಕ ನಂತರವೇ ಬರುವುದಾಗಿ ಅವನು ಹಟ ಹಿಡಿದ. ಎಷ್ಟು ಹೇಳಿದರೂ ನಮ್ಮ ಜೊತೆ ಬರಲೊಪ್ಪಲಿಲ್ಲ. ನಾವೆಲ್ಲ ರೈಲು ಹತ್ತಿ ಹೊರಡಬೇಕಾಯಿತು. ಅದೃಷ್ಟವಶಾತ್ ಮುಂದಿನ ನಿಲ್ದಾಣ ಹತ್ತಿರವೇ ಇದ್ದು ಅಲ್ಲಿ ರೈಲು ಹೆಚ್ಚು ಹೊತ್ತು ನಿಂತಿದ್ದರಿಂದ, ಆ ಭೂಪ ವಾಚನ್ನು ಹುಡುಕಿಕೊಂಡು ಅರ್ಧ ಘಂಟೆಯ ನಂತರ ಬಂದ!

— ಜಿ. ಸುರೇಶ್

ಪ್ರೈವೇಟ್ ಬಸ್ಸಿನಲ್ಲಿ ಹುಬ್ಬಳ್ಳಿಯಿಂದ ಬೆಂಗಳೂರಿಗೆ ಹೊರಟದ್ದೆ. ಪಕ್ಕದ ಸೀಟನಲ್ಲೊಬ್ಬ ಹಿರಿಯರು - ಗಂಭೀರ ಮುಖಮುದ್ರೆಯ ಕಾಯದೆ ಕಾನೂನು ಮಾತಿನವರು-ಕುಳಿತಿದ್ದರು. ಪರಿಚಯದ ವಕೀಲರಿಬ್ಬರು ನನ್ನ ಹಿಂದಿನ ಸೀಟನಲ್ಲಿದ್ದರು. ರಾತ್ರಿ ಒಂಬತ್ತಕ್ಕೆ ಬೆಂಗಳೂರು ಸೇರುವ ಆ ಬಸ್ಸು ಹೊರಟದ್ದು ತಡವಾಗಿಯೇ ಆದರೂ ಬಲು ಚುರುಕಾಗಿ ಓಡುತ್ತಿತ್ತು. ನನ್ನ ಸುತ್ತಲಿನವರ ಹರಟೆಯಲ್ಲಿ ನನಗೆ ಆಸಕ್ತಿ ಇಲ್ಲದ್ದರಿಂದ ಎಂದಿನಂತೆ ಕಿಟಕಿಯಲ್ಲಿ ಮುಖವಿಟ್ಟು ಹಿಂದೋಡುತ್ತಿದ್ದ ಗಿಡ ಮರ ಹೊಲಮನೆಗಳನ್ನು ನೋಡುತ್ತ ಕುಳಿತೆ.

ಬಸ್ಸು ಹಾವೇರಿ ತಲುಪಲು ಹದಿನೈದು ನಿಮಿಷವಿರುವಾಗಲೇ ಬಸ್ಸಿನ ಕೊನೆಯ ಸೀಟನಲ್ಲಿ ಕುಳಿತ ೨೫-೩೦ರ ತರುಣನೊಬ್ಬ ದೊಪ್ಪನೆ ಬೋರಲು ಬಿದ್ದು ಮೈ ನಡುಗಿಸತೊಡಗಿದ. ಎಲ್ಲರೂ ಏನಾಯಿತು ಏನಾಯಿತು ಎಂದರೆ ಕೆಲವರು ಮಾತ್ರ ಆತನ ಬಳಿ ಹೋದರು. ನಾನು ನಡುಗುತ್ತಿದ್ದ ಆತನ ಮೈಯನ್ನು ಗಟ್ಟಿಯಾಗಿ ಹಿಡಿದೆ. ಕೆಳಗಾಗಿದ್ದ ಮುಖವನ್ನೆತ್ತಿ ನೋಡಿದೆ. ಬಾಯಿ ಎಡಕ್ಕೆ ಸೊಟ್ಟಗಾಗಿತ್ತು. ಎಡಗೈ-ಎಡಗಾಲು ನಿರ್ಜೀವವಾದವರಂತಿದ್ದವು. ಆತನಿಗೆ ಅರೆ ಎಚ್ಚರ ಸ್ಥಿತಿ. ಈ ಗಲಾಟೆಯಿಂದಾಗಿ ಬಸ್ ನಿಲ್ಲಿಸಿದ ಡ್ರೈವರನೂ ಅಲ್ಲಿ ಬಂದ. ಕಟ್ಟುಮಸ್ತಾದ ಸಾಬಿ ಆತ.

ಪಾಪ, ಲಕ್ವ ಹೊಡೆಸಿಕೊಂಡವನ ಮುಖ ನೋಡಿದರೆ ಏನೋ ಒಂದು ಬಗೆಯ ಸಂಕಟವಾಯಿತು. ಆತ ಯಾರು, ಏನು ಎಂದು ತಿಳಿಯಲು ಆತನ ಚೀಲದ ಫೈಲ್ ನೋಡಿದೆ. ಬೆಂಗಳೂರಿಗೆ ತೆಗೆಸಿದ್ದ ಟಿಕೆಟ್ ಮತ್ತು ಒಂದು ಕಾರಖಾನೆಯ ನೌಕರಿಗಾಗಿ ಬಂದಿದ್ದ ಸಂದರ್ಶನದ ಕರೆ, ಸರ್ಟಿಫಿಕೆಟ್ ಇತ್ಯಾದಿ ಸಿಕ್ಕವು.

ಏನು ಮಾಡೋಣ ಎಂದು ಒಂದಿಬ್ಬರೊಡನೆ ವಿಚಾರಿಸಿದೆ. ಪ್ರಯೋಜನವಾಗಲಿಲ್ಲ. ಆಸ್ಪತ್ರೆಗೆ ಬಸ್ ತೆಗೆದುಕೊಂಡೊಯ್ಯಲು ಡ್ರೈವರನಿಗೆ ಹೇಳಿದೆ. ಆತ ಕೇಳಲಿಲ್ಲ. ಇನ್ನೂ ಎಷ್ಟೊತ್ತು ಹೀಗೇ ಬಸ್ ನಿಲ್ಲಬೇಕು ಎಂದು ಜನ ಕೂಗಾಡತೊಡಗಿದಾಗ ಡ್ರೈವರ್, "ಛಿ, ಎಂತೆಂಥಾ ರ್‍ಯಾಗಡವ್ರು ಬಸ್ಸಿನೊಳಗೆ ಬರ್ತಾರೋ. ಏ ಸ್ವಾಮಿ, ಇಳಿಸ್ಬಿಡ್ತೇನಿ ಇಲ್ಲೇ ಹಾವೇರಿಲಿ. ಆಸ್ಪತ್ರೆ ಸೇರ್ಸ್ಕೋ" ಅಂದ. ನಾನು, ಹಾಗೆ ಇಳಿಸ್ಬೇಡ. ಏನಾದ್ರೂ ಆದ್ರೆ ಹೇಗೆ ಅಂದೆ. ಅದಕ್ಕೆ ಡ್ರೈವರ್, "ನೀವ್ರೂ ಅವನ್ಜತೇನೇ ಇಳ್ಕಳ್ಳಿ ಹಾಗಾದ್ರೆ" ಅಂದವನೇ ಹಾವೇರಿಗೋಡಿಸಿ ಊರ ಹೊರಬದಿಯಲ್ಲೇ ಬಸ್ ನಿಲ್ಲಿಸಿ ಪಾಪ ಆ ಲಕ್ವದವನನ್ನು ರಸ್ತೆಗೆ ಹೊತ್ತು ಇಳಿಸಿ ಸಾಮಾನು ಇಟ್ಟಿದ್ದನ್ನು, ಮತ್ತೆ ಬಸ್ ಓಡಿಸಿದ್ದನ್ನು ನಾನು ಸುಮ್ಮನೇ ನೋಡುತ್ತ ಇರಬೇಕಾಯಿತು....

-ವೃಷಭೇಂದ್ರಯ್ಯ



# ಮಂಕಿ ಬ್ರಿಜ್

ಮೂಲ : **ಥ್ಯೂ ಅನ್ ಹ್ವಾಂಗ್ ಡಾನ್**
ಅನು : **ಗೋವಾ**

ಗುಂಡುಗಳ ಸದ್ದು ಹತ್ತಿರವೇ ಕೇಳಿಸತೊಡಗಿ ಎದೆಯ ನಗಾರಿ ಮತ್ತಷ್ಟು ಜೋರಾಯಿತು. ಈ ಎದೆ ನಡಗಿಸುವ ಸದ್ದು ಎಲ್ಲಿಂದ ಬರುತ್ತಿತ್ತೋ ದೇವರಿಗೇ ಗೊತ್ತು. ಕಿವಿಯ ಪರದೆಗಳು ತೂತುಬಿದ್ದು ಹೋಗುವಂಥ ಸದ್ದು. ಓಹ್ !

ನಗೂಯೆನ್ನಿನ ಅಳಿದುಳಿದ ಮಂದಿಗೆ ಈಗ ತಿಕ ತುರುಸಿಕೊಳ್ಳುವುದಕ್ಕೂ ವ್ಯವಧಾನವಿರಲಿಲ್ಲ. ನಾಲ್ಕು ನಿಟ್ಟಿನಿಂದ ಅದೇ ಅದೇ ಅದೇ ಸದ್ದು. ಅದೇ ಅದೇ ಅದೇ ಗದ್ದಲ. ಓಡಿ ತಪ್ಪಿಸಿಕೊಳ್ಳುವವರ ಗದ್ದಲ. ಗಾಬರಿ ಮತ್ತು ಯಾತನೆಗಳ ಹೃದಯ ಕಲಕುವ ಗದ್ದಲ. ತಪ್ಪಿಸಿಕೊಂಡವರ, ಸಿಕ್ಕಿ ಹಾಕಿಕೊಂಡವರ ಆಕ್ರಂದನದ ಗದ್ದಲ. "ಓ ದೇವರೆ. ಯುದ್ಧಕ್ಷೇತ್ರದಲ್ಲಿ ಕ್ರಮೇಣ ನಮ್ಮ ಹಳ್ಳಿಯೂ ಸೇರಿ ಹೋಗುತ್ತಿದೆ." ಎನ್ನುವುದನ್ನು ಕೇಳಿದೊಡನೆಯೇ ಜನ ತಮ್ಮ ಗೂಡುಗಳಿಂದ ಇದ್ದ ಬಿದ್ದ ಸಾಮಾನುಗಳನ್ನೆತ್ತಿ ಓಡತೊಡಗಿದರು. ಕೆಲವರು ಮುದುಕರನ್ನು, ಅಶಕ್ತರನ್ನು, ಮಕ್ಕಳನ್ನು ಕರೆದೊಯ್ಯಲೆಂದು ಹಿಂದೆ ಉಳಿದರು. ಹೆಂಗಸರು ಬೆಲೆ ಬಾಳುವುದೆಂದು ಕಂಡ ವಸ್ತುಗಳನ್ನೆಲ್ಲ ಹೊತ್ತೊಯ್ಯತೊಡಗಿದರು. ರೈತರು ನೇಗಿಲು, ಕೃಷಿ ಸಾಧನಗಳನ್ನು ಹೆಗಲಿಗೇರಿಸಿದರು. ಇರುವೆಗಳು ಹೊರಬೀಳುವಂತೆ ಗಡಿಬಿಡಿಯಿಂದ ಒಬ್ಬರನ್ನೊಬ್ಬರು ದಿಕ್ಕು ಹೊಡೆಯುತ್ತ ಏಳುತ್ತ ಬೀಳುತ್ತ, ಬೀಳಿಸುತ್ತ, ಬಯ್ಯುತ್ತ, ಬಯ್ಯಿಸಿಕೊಳ್ಳುತ್ತ ಬದುಕುವುದಕ್ಕಾಗಿ ಅಲ್ಲಿಂದ ಓಡತೊಡಗಿದರು. ಆದರೆ ಹೋಗುವುದೆಲ್ಲಿಗೆ? ಯಾರಿಗೂ ಗೊತ್ತಿಲ್ಲ. ಆ ಬಗ್ಗೆ ಯೋಚಿಸಲು ಅವಕಾಶವಿದ್ದರೆ ತಾನೆ ಗೊತ್ತಾಗುವುದು ? ಒಟ್ಟು ಸಾಗುವುದು ಮಾತ್ರ ಅವರಿಗೆ ಗೊತ್ತು. ಯುದ್ಧ ಎಲ್ಲಾಗುತ್ತಿದೆ, ಅದೂ ಗೊತ್ತಿಲ್ಲ. ಪಾಪ, ಬದುಕಲೆಂದು ಪ್ರಾಣಭಯದಿಂದ ನಡುಗುತ್ತ ಸಾಮಾನು ಸರಂಜಾಮುಗಳನ್ನು, ಹೆಂಡಿರು ಮಕ್ಕಳನ್ನು ಹೊತ್ತು ಬದುಕಲೆಂದು ಬವಣೆ ಪಡುತ್ತಿದ್ದಾರೆ......

ಈಗ, ಸಮೀಪಿಸುತ್ತಿರುವ ಗುಂಡುಗಳ ಸದ್ದಿನ ಜೊತೆಗೆ ಟ್ಯಾಂಕುಗಳು ಚಲಿಸುವುದರ ಸದ್ದೂ ಕೇಳುತ್ತಿದೆ. ಭೂಕಂಪವೇ ಅನ್ನುವಷ್ಟು ಭೂಮಿಯನ್ನು ನಡುಗಿಸುತ್ತ ಟ್ಯಾಂಕುಗಳು ಸಾಗುತ್ತಿವೆ. ಆ ಗದ್ದಲ, ಆ ಸದ್ದಿನಲ್ಲಿ ದಿಕ್ಕು ತಪ್ಪಿ ಹೋದವನ



ರೆಷ್ಟೋ ಆ ಜನಸಾಗರದಲ್ಲಿ ಕರಗಿಹೋದ ತನ್ನ ಹೆಂಡತಿಯನ್ನೊ, ಮಗ-ಮಗಳನ್ನೋ, ಅಪ್ಪ-ಅವ್ವನನ್ನೊ ಹುಡುಕುವಷ್ಟು ಪುರುಸೊತ್ತು-ಅಲ್ಲಲ್ಲ-ಜ್ಞಾನ-ಇಲ್ಲದಂತೆ ಗಾಬರಿಯನ್ನೇ ಉಸಿರಾಡುತ್ತ ಓಡಿದರು ಜನ.

"ಅವರು ಥಾನ್ ಎಕ್ಸ್ಯಾಯನ್ ಕಡೆಯಿಂದ ಬರುತ್ತಿದ್ದಾರೆ..."

"ಈಗ ಗಡಿಯನ್ನೂ ದಾಟಿ ಒಳ ಬಂದಿದ್ದಾರೆ."

"ಅಯ್ಯೋ ಟ್ಯಾಂಕುಗಳು ತನ್ನಡಿಗೆ ಸಿಕ್ಕದನ್ನೆಲ್ಲ ಹುಡಿಮಾಡಿ ಮಣ್ಣೊಂದಿಗೆ ಕೂಡಿಸುತ್ತಲಿವೆ."

"ಅವರು ನಮ್ಮತ್ತಲೇ ಗುರಿ ಹಿಡಿದಿದ್ದಾರೆ."

ಬೆದರಿದ ಜೀವಗಳಿಗೆ ಮತ್ತೇನು ಬೇಕು, ಅರೆ ಜೀವವಾಗಲು. ಹೆಂಗಸರು-ಮಕ್ಕಳಂತೂ ಅಳ ತೊಡಗಿದರು. ಏನೂ ಅರಿಯದ ಕಂದಮ್ಮಗಳು ಗಾಬರಿಯಿಂದ ಸುತ್ತ ಮುತ್ತ ಕಣ್ಣು ಪಿಳಿಪಿಳಿಸುತ್ತ, ತಾಯಿಯ ಎದೆಗವಚಿಕೊಂಡು ಕುಳಿತಿದ್ದರೆ ಮುದುಕರು ಕೊನೆಯ ಬಾರಿಗೆಂಬಂತೆ ದೇವರಲ್ಲಿ ಮೊರೆಯಿಡುತ್ತಿದ್ದರು.

"ನಾವು ಸಿಕ್ಕಿ ಬಿದ್ದೆವು. ನಾವು ಸಿಕ್ಕಿ ಬಿದ್ದೆವು."

"ನದಿಯನ್ನು ದಾಟಬೇಕಾಗಬಹುದು. ಅದೇ ಕೊನೆಯ ದಾರಿ."

ಅವರೀಗ ನಿರಾಶ್ರಿತರು. ದೇವರೇ ದಿಕ್ಕು ಅವರಿಗೆ. ನದಿಯನ್ನಾದರೂ ಪಾರುಮಾಡಿದರಾಯಿತೆಂದು ಒಂದು ಗುಂಪು ಅತ್ತ ದೌಡಾಯಿಸಿತು. ಉಳಿದವರಲ್ಲಿ ಮುದುಕರು-ಮಕ್ಕಳು ಅಶಕ್ತರು. ಅಳುತ್ತಿದ್ದ ಮಕ್ಕಳಿಗೆ ಒಬ್ಬ, "ಏ, ಚುಪ್, ಬಾಯಿ ಮುಚ್ಚಿಕೊಂಡು ನಡೆ. ನೀವು ಅಳುವ ಸದ್ದು ಅವರಿಗೆ ಕೇಳಿದರೆ ನಮ್ಮ ಗತಿ ದೇವರಿಗೇ ಪ್ರೀತಿ. ಕತೆ ಮುಗಿದಂತೆಯೇ. ಕಡಿದು ತುಂಡು ಮಾಡಿ ಬಿಟ್ಟಾರು," ಎಂದು ಬೈದ.

ನದಿಯ ದಡವನ್ನು ತಲಪಿದ ಮೇಲೆ ಅವರಿಗೆ ತಾವೀಗ ಸುರಕ್ಷಿತ ಅನ್ನಿಸಿತು. ಕೂಡಲೇ ದೋಣಿಗಳಲ್ಲಿ ಮುದುಕರು, ಹೆಂಗಸರು, ಮಕ್ಕಳನ್ನು ತುಂಬಿದರು. ಯುವಕರು, ಸದೃಢ ಮಧ್ಯವಯಸ್ಕರು ಈಜಿಕೊಂಡು ಆಚೆ ದಡ ಸೇರುತ್ತಿದ್ದರು. ಸಾಮಾನುಗಳನ್ನು ಕೊನೆಯ ಸಾರಿಗೆಗೆ ಸಾಗಿಸುವುದೆಂದು ಮೊದಲೇ ಮಾತಾಡಿಕೊಂಡಿದ್ದರು. "ಮೊದಲು ಮನುಷ್ಯರು ಪಾರಾಗಿ ಹೋಗುವುದು ಮುಖ್ಯ."

ಕೊನೆಯ ಸಾರಿಗೆಯಲ್ಲಿ ಸಾಮಾನುಗಳು ತಮ್ಮನ್ನು ಸೇರಿದಾಗ ಅವರಿಗೆಲ್ಲ ಒಮ್ಮಿಂದೊಮ್ಮೆಲೆ ಧೈರ್ಯ ಬಂತು. ಆ ನಡುಕ, ಭಯ, ಉದ್ವೇಗಗಳೆಲ್ಲ ಮಾಯವಾಗಿ ಅವರೀಗ ನೆಮ್ಮದಿಯ ಉಸಿರು ಬಿಡತೊಡಗಿದರು. ಕಪ್ಪು ಮೋಡಗಳು ಆಕಾಶದಲ್ಲಿ ಬಸಿರಿಯರಂತೆ ಮೆಲ್ಲನೇ ಸಾಗಿದ್ದವು. ಆಗಾಗ ಭೆಂಕಿಯ ಹಾವು ಫಳಿರನೇ ಸರಿದು ಹೋಗುತ್ತಿದ್ದುದರಿಂದ ಮಕ್ಕಳು ಬೆದರುತ್ತಿದ್ದವು. ಬೆಂಕಿ ! ನದಿಯ ಈ ದಡದಲ್ಲಿ ನಿಂತವರಿಗೆ ಆ ಬೆಂಕಿ ಕಾಣಿಸಿತು. ತಾವು ಇಷ್ಟು ಕಾಲ ಬದುಕಿದ ಊರನ್ನು ಸುಡುತ್ತಿದ್ದ ಬೆಂಕಿ. ಬೀಸುಗಾಳಿಯೊಂದಿಗೆ ಹಾರಿಬಂದು ಇವರ ಮುಖ ಮೈಗಳಿಗೆ ಕರಕು ಮೆತ್ತಿಕೊಳ್ಳುತ್ತಿತ್ತು. ಒಬ್ಬ ಕಣ್ಣಲ್ಲಿ ಬಿದ್ದ ಕರಕನ್ನು ಉಜ್ಜಿ ಒರೆಸುತ್ತಿದ್ದ. ಕೈಗೆ ಮೆತ್ತಿಕೊಂಡ ಕಪ್ಪು ಕುಡು ಅಳತೊಡಗಿದ. "ವರ್ಷಗಳ ಶ್ರಮ ಬೂದಿಯಾಗುತ್ತಿದೆ."

ಈ ವರೆಗೆ ತಡೆದಿದ್ದ ಅವ್ಯಕ್ತ ದುಃಖ ಈಗ ವ್ಯಕ್ತವಾಗುವಂತಾಯಿತು, ಆತನ ಮಾತಿನಿಂದ. ಎಲ್ಲರೂ ಅಳತೊಡಗಿದರು. ಅಜ್ಜ–ಮುತ್ತಜ್ಜರ ಕಾಲದಿಂದಲೂ ಅಲ್ಲಿದ್ದ ಅವರಿಗೆ ತಮ್ಮ ನೆಲೆಯೇ ಬೂದಿಯಾಗುತ್ತಿರುವುದು ಎಲ್ಲಕ್ಕಿಂತ ಹೆಚ್ಚು ನೋವುಂಟುಮಾಡಿತ್ತು.

ಅವರಲ್ಲೇ ಹಿರಿಯನಾಗಿದ್ದ ಆ ಊರಿನ ಮುಖಂಡ ಸಂತೈಸತೊಡಗಿದ, "ಈ ಸಂಕಟ ಕೇವಲ ನಮ್ಮ ಹಳ್ಳಿಗಷ್ಟೆ ಅಲ್ಲ, ಇಡೀ ದೇಶಕ್ಕೇ ಬಂದೊದಗಿದೆ..."

"ಅಗೋ, ಅಲ್ಲಿ ಆ ದಂಡೆಯ ಮೇಲೆ ನೋಡಿ, ಒಬ್ಬ ಮನುಷ್ಯ ಮತ್ತು ಆತನ ಎಮ್ಮೆ! "ಅರೆ, ಆತ ತರುಂಗಬ್ಬಾ..."

"ಓ ತರುಂಗ್...ಇಲ್ಲಿ ಬಾ ಇಲ್ಲಿ...ಈ ಕಡೆ..."

ತರುಂಗಬ್ಬಾ ಎಮ್ಮೆ ಹೊಡೆದುಕೊಂಡು ನೀರಿಗಿಳಿಯುವುದೇ ತಡ, ಎಲ್ಲಿಂದಲೋ ಬಂದ ಗುಂಡುಗಳೆರಡು ಅವರಿಬ್ಬರನ್ನೂ ನೀರಿಗೆ ಕೆಡವಿದವು. ಅದನ್ನು ನೋಡಿದ ಅವರಿಗೆ ಇನ್ನೂ ಭಯ ಪರಿಹಾರವಾಗಿಲ್ಲ ಎನ್ನಿಸಿತು. ತರುಂಗ್ ಮತ್ತು ಎಮ್ಮೆ ನೀರಲ್ಲೇ ಒದ್ದಾಡುತ್ತಿದ್ದರು. ಗುಂಡುಗಳ ಸದ್ದು ಈಗ ಅವರಿಗೆ ಮತ್ತೊಮ್ಮೆ ಸಮೀಪವಾಯಿತು. ಓಡತೊಡಗಿದರು. ಓಡಿ ಗಿಡಮರಗಳ ಹಿಂದೆ ಅಡಗಿಕೊಳ್ಳತೊಡಗಿದರು. ದೂರದಲ್ಲಿ ಆ ಕೆಂಪು ಮಾಳಿಗೆಯ ಮನೆ ಕೆಲವರ ಕಣ್ಣಿಗೆ ಬಿತ್ತು. ಬಹುಶಃ ಅದು ನಕೊಫೋನ್ ಗ್ರಾಮವಾಗಿರಬೇಕು. ಸುತ್ತಲಿನ ಹತ್ತೂರವರಿಗೆ ಅದು ಸ್ವರ್ಗ ಸಮಾನ ಪ್ರದೇಶ. ನಡುಗುತ್ತಿದ್ದವರೆಲ್ಲರಿಗೆ ಈಗ ಮತ್ತೆ ನೆಮ್ಮದಿಯ ಉಸಿರು ಬಿಡುವ ಹಾಗಾಯಿತು. ಆದಷ್ಟು ಬೇಗ ಅಲ್ಲಿ ಹೋಗಿ ಸೇರಿಕೊಳ್ಳುವ ತವಕ ಆ ಮುದುಕರಿಗೆ, ಹೆಂಗಸರಿಗೆ. ಇಷ್ಟರಲ್ಲಿ ಬಲಗಡೆಯಿಂದ ಮತ್ತಷ್ಟು ಜನ–ಇವರದೇ ಸ್ಥಿತಿಯಿರಬೇಕು ಅವರದೂ–ಓಡಿ ಬರುವದು ಕಾಣಿಸಿತು: ತಮ್ಮನ್ನು ತಾವೇ ಎದುರಿನ ದೊಡ್ಡ ನಿಲುಗನ್ನಡಿಯಲ್ಲಿ ನೋಡಿಕೊಂಡ ಹಾಗೆ ಕಂಡು ಬಂದರು ಅವರು. ಆ ಹೆಂಗಸರ ಬಗಲಲ್ಲಿ ಮಕ್ಕಳು, ತಲೆಯ ಮೇಲೆ ಸಾಮಾನುಗಳ ಗಂಟು ಗಡಡಿಗಳು ಮತ್ತು ಗಂಡಸರ ಹೆಗಲ ಮೇಲೆ, ಹೆಂಗಸರು ಹೊರಲಾರದ, ಭಾರವಾದ ಸಾಮಾನುಗಳು ಮತ್ತು ಕೃಷಿ ಸಾಮಾನುಗಳು. ಎಲ್ಲರೂ ಓಡಿ ಬರುತ್ತಲಿದ್ದಾರೆ...

ಆದರೆ, ಅಬ್ಬಾ! ಅವರಿಗೂ ಗುಂಡುಗಳು ಬೆನ್ನಟ್ಟಿವೆ!

"ಮೂರು ಕಡೆಯಿಂದ ದಾಳಿ ಶುರುವಾಗಿದೆ. ಇನ್ನು ಹೇಗೆ ಬದುಕೇವು..."

"ಹೇಗೆ–ಹೇಗೆ ಬದುಕೇವು?"

ಅವರು ತಟ್ಟನೆ ನಿಂತುಬಿಟ್ಟರು. ಎತ್ತ ಹೋದರೆ ಉಳಿದೇವು ಎಂದವರಿಗೆ ತಿಳಿಯುತ್ತಲಿಲ್ಲ. "ದಾರಿ ಯಾವ ಕಡೆ?"

ನಗೂಯೆನ್ನಿನ ಬೆಂಕಿಯೀಗ ಸ್ವಲ್ಪ ಕಡಿಮೆಯಾಗಿತ್ತಾದರೂ ಆಗಾಗ ಜ್ವಾಲೆಗಳು ಹೊಗೆ ಗೋಡೆಯೊಳಗಿಂದ ಹೊರಗಿಣುಕುತ್ತಿದ್ದವು. ಹೊತ್ತು ಕಳೆಯುತ್ತಿದೆ. ಈಗ ಮತ್ತೊಂದು ಕಡೆಯಿಂದ ಗುಂಡುಗಳ ಸದ್ದು.

ಈ ಜನಕ್ಕೆ ಆ ಜನ ಕಂಡರು.

"ಬನ್ನಿ, ನಮ್ಮ ಹಿಂದೆ ಬನ್ನಿ. ನಮಗೆಲ್ಲ ದಾರಿಗಳೂ ಗೊತ್ತು. ನಾವು ಮೈನಡಾಕ್ಕೆ ಹೊರಟಿದ್ದೇವೆ. ಬೆಟ್ಟಗುಡ್ಡಗಳಲ್ಲಿ ಅಡಗಿಕೊಂಡು ಜೀವ-ವುಳಿಸಿಕೊಳ್ಳಬಹುದು..."

ಎಲ್ಲ ಒಂದಾಗಿ ಓಡತೊಡಗಿದರು. ಸೂರ್ಯ ಈಗ ಮನೆಗೆ ಮರಳುವ ದಾರಿಯಲ್ಲಿದ್ದ. ಹೀಗಾಗಿ ತಾಪ ಕಡಿಮೆಯಾದಂತೆನಿಸಿತವರಿಗೆ. ತಂಪುಗಾಳಿ-ಯೂ ಬೀಸತೊಡಗಿ ಹಾಯೆನಿಸಿತು. ಅವರೆಲ್ಲ ದಣಿದಿದ್ದರೂ ಯಾರಿಗೂ ಅರೆಕ್ಷಣ ಆರಾಮ ಪಡೆಯಬೇಕೆನ್ನಿಸಲಿಲ್ಲ. ಮರಣ ಬೆನ್ನಟ್ಟಿದಾಗ ಯಾರಲ್ಲಿ ತಾನೆ ಅಂಥ ಹುಚ್ಚು ಹವ್ಯಾಸ ಹುಟ್ಟೀತು? ದಣಿದ ಹೆಂಗಸರ, ಮುದುಕರ ಮತ್ತು ಹಸಿದ ಮಕ್ಕಳ ಆಕ್ರಂದನ ಯಾರ ಲಕ್ಷ್ಯಕ್ಕೂ ಬರಲಿಲ್ಲ. ಬೇಗ ಬೇಗನೆ ನಡೆದು ಮೈನಡಾ ಸೇರಬೇಕಲ್ಲ. ಮಳೆಯೂ ಬರುವ ಸೂಚನೆ ನೀಡಿತ್ತು. ಕೆಲ ನಿಮಿಷಗಳಲ್ಲಿಯೇ ಕಾಸಗಲದ ಹನಿಗಳು ಉದುರತೊಡಗಿದವು.

ಮೈನಡಾ ಇನ್ನೂ ದೂರವಿತ್ತು. "ಸ್ವಲ್ಪ ಮುಂದೆ ನಡೆದರೆ ಒಂದು ಸಣ್ಣ ಪೂಲು ಬರುತ್ತದೆ. ಗಾಳಿಯಲ್ಲಿ ತೂಗಾಡುವ ಮುರುಕು ಸೇತುವೆ. ಮಂಕಿ ಬ್ರಿಜ್ ಎಂದು ಅದರ ಹೆಸರು. ಅದನ್ನು ದಾಟಿದರೆ ಮಾತ್ರ ಮೈನಡಾದ ಪ್ರದೇಶ ಸೇರಿದಂತೆ," ಎಂದ ಒಬ್ಬ.

ಮಳೆ ಮತ್ತು ಹೊಗೆಗಳ ಹಿನ್ನಲೆಯಲ್ಲಿ ಆ ಸೇತುವೆ ತೂಗುತ್ತಿರುವಂತೆಯೇ ಕಾಣುತ್ತಿತ್ತು. ಅಲ್ಲಲ್ಲಿ ಏನೋ ಕೊಳೆತ ವಾಸನೆ ಗಮ್ಮೆಂದು ಮೂಗಿಗೆ ಅಡರುತ್ತಿತ್ತು. ಕತ್ತಲೂ ಪಸರಿಸತೊಡಗಿತ್ತು. ದೂರದಲ್ಲಿ ಕಾಣುತ್ತಿದ್ದ ಗುಡ್ಡ ರಾಕ್ಷಸನ ತಲೆಯಂತೆ ಕಾಣುತ್ತಿತ್ತು. "ಬಹುಶಃ ಆ ಹೊಗೆ ಆ ಗುಂಡುಗಳು ಆ ರಕ್ಕಸನ ಕೆಂಗಣ್ಣಿಂದಲೇ ಸಿಡಿದು ಬರುತ್ತಿರಬೇಕು."

ಸೇತುವೆ ಕಂಡಾಗ ಎಲ್ಲರ ಮುಖದಲ್ಲೂ ನಗೆ ಅರಳಿತು. ಮತ್ತೆ ಎಲ್ಲರೂ ನೆಮ್ಮದಿಯ ಉಸಿರು ಬಿಡುವಂತಾಯಿತು. ಭಯ ಕಡಿಮೆಯಾಯಿತು. ಅಪಾಯ ದೂರ ಹೋಯಿತೆನಿಸಿರಬೇಕು ಎಲ್ಲರಿಗೂ "ಆದರೆ...ಆದರೆ...ಆ ಸೇತುವೆಯನ್ನು ದಾಟುವುದು ಹೇಗೆ?" ಮುದುಕರಿಗೆ, ಮಕ್ಕಳಿಗೆ, ಹೆಂಗಸರಿಗೆದುರಾದ ಸಮಸ್ಯೆ. "ನೀವು ಹುಡುಗರು ಬೇಕಾದ ಹಾಗೆ ದಾಟುತ್ತೀರಿ. ನಮ್ಮ ಪಾಡೇನು?" ಮತ್ತೆ ಅವರು ಕಂಗಾಲಾದರು.

"ನದಿಯ ದಂಡೆಗುಂಟ ದಾರಿಯಿರಬೇಕಲ್ಲವೆ?"

"ಒಬ್ಬೊಬ್ಬರಂತೆ ಸೇತುವೆ ದಾಟಬೇಕು. ಅಂದರೆ ಮಾತ್ರ ಎಲ್ಲರೂ ಪಾರಾಗಬಹುದು. ಆ ಸೇತುವೆ ಅಷ್ಟು ಗಟ್ಟಿಯಲ್ಲ. ಆದರೆ ಎಲ್ಲರೂ ದಾಟಲು ಬಹಳ ಸಮಯ ಬೇಕು..."

ಸುಮಾರು ನೂರು ಗಜಗಳ ಅಂತರದಿಂದ ಗುಂಡು ಸಿಡಿದ ಸದ್ದು ಕೇಳಿ ಜನ ಸ್ತಬ್ಧರಾದರು. ಎಲ್ಲರ ತಲೆ ಮೇಲೂ ಮಣ್ಣು ಬೀಳತೊಡಗಿತು. ನಂತರ ಮೇಲಿಂದ ಮೇಲೆ ಗುಂಡು ಸಿಡಿದ ಸದ್ದು ಕೇಳತೊಡಗಿತು. ಎಲ್ಲರಿಗೂ ಭಯ. ಕೆಲವರು ಗಟ್ಟಿಗರು ನೀರಿಗೆ ಹಾರಿ ಈಜತೊಡಗಿದರು. ಕೆಲವರು ಸೇತುವೆಯ ಕಡೆ ಓಡಿದರು. ಅಷ್ಟು ಜನರ ಪದಾಘಾತದಿಂದ ಸೇತುವೆ ನಲುಗಿ ನೇತಾಡತೊಡಗಿತು.



"ಕನ್ನಡ ಆಡಳಿತ ಭಾಷೆ ಆಯ್ತು ಅಂದ್ರಿ, ಸರಿ. ಆದ್ರೆ ಯಾವ ರಾಜ್ಯದಲ್ಲಿ ಅಂತ ಮಾತ್ರ ಹೇಳಲೇ ಇಲ್ಲವಲ್ಲಾ...?"

"ಜಾಗೃತರಾಗಿ ಸೇತುವೆ ದಾಟಿ ಬನ್ನಿ. ಇಲ್ಲದೇ ಹೋದರೆ ನೀರು ಪಾಲಾದೀರಿ." ಕೆಲವರು ಕೂಗಿ ಕೊಂಡರು.

ಸೇತುವೆಯೂ ಅಷ್ಟೆ, ಗಾಳಿಯೂ ಅಷ್ಟೆ. ಎರಡೂ ಪ್ರಾಣಾಂತಕ. ಕೆಲವರಿಗೆ, "ಹೇಗೂ ಸಾಯುತ್ತೇವೆ. ಸೇತುವೆಯಿಂದ ಬಿದ್ದು ಸಾಯುವುದೇ ಮೇಲು," ಎನಿಸಿತು. ಕೆಲವರು ಆ ದಡವನ್ನು ತಲುಪಿದ್ದರು. ಒಬ್ಬ ಹೆಂಗಸು ತಲೆಯ ಮೇಲೆ ಬುಟ್ಟಿ ಹೊತ್ತು ಸೇತುವೆ ದಾಟಲು ಹೊರಟಳು. ಕತ್ತಲೆಯಾಗಿತ್ತು. ಆಕೆಯ ಹಿಂದಿದ್ದವ, "ಏ, ತಾಯಿ. ಬುಟ್ಟಿ ಹೊತ್ತು ಹೇಗೆ ನಡೆಯುತ್ತೀ? ನದಿಯಲ್ಲಿ ಎಸೆದು ನಡೆಯಬಾರದೆ?" ಅಂದ. ಆಕೆ ಬೆದರಿದಳು. ಬುಟ್ಟಿಯನ್ನು ಮತ್ತಷ್ಟು ಗಟ್ಟಿಯಾಗಿ ಹಿಡಿದಳು. "ಛಿ, ನೀನೂ ಬಹಳ ಹಟವಾದಿ ಹೆಣ್ಣು. ಬಿಸಾಡಬಾರದೆ ಅದನ್ನು" ಎನ್ನುತ್ತ ಆ ಬುಟ್ಟಿಗೆ ಕೈ ಹಚ್ಚುವದೇ ತಡ, ಶಿಶುಗಳೆರಡು ಒಮ್ಮೆಂದೊಮ್ಮೆಲೆ ಅಳತೊಡಗಿದ ಸದ್ದು ಕೇಳಿಸಿತು. ಒಂದು ತಿಂಗಳಿನ ಅವಳಿಗಳು! "ಅರೆ, ಮಕ್ಕಳು, ಕಂದಮ್ಮಗಳು. ಇವುಗಳೊಂದಿಗೆ ಹೇಗೆ ಪಾರಾಗುತ್ತೀ ತಾಯಿ? ಬಲು ಜೋಕೆ. ಸೇತುವೆ ಬಲು ಬೀಕಲು..." ಎಂದು ಆಕೆಯನ್ನು ಮುಂದೆ ಹೋಗಗೊಟ್ಟ. "ಇದೆಂಥ ಬೀಕಲು? ಇದಕ್ಕೂ ಬೀಕಲಾದ ಸೇತುವೆಯ ಮೇಲೆ ತಲೆಭಾರ ಹೊತ್ತು ಸಾಗಿದ್ದೇನೆ." ಎಂದಳಾಕೆ.

ಜನ ಸ್ತಬ್ಧರಾಗಿ ಆಕೆಯನ್ನು ನೋಡುತ್ತ ನಿಂತರು. ಕತ್ತಲು ಮತ್ತಷ್ಟು ಹೆಚ್ಚಿತು. ಆಕೆ ಅವರ ದೃಷ್ಟಿಯಿಂದ ಮೆಲ್ಲನೆ ಕರಗತೊಡಗಿದಳು. "ಆಕೆ ಆಚೆ ದಡ ಸೇರಿದರೆ ಅದೊಂದು ಪವಾಡವೇ ಸರಿ," ಎಂದು ಕೊಂಡರು ಜನ. ಕೆಲವರು ಆಕೆ ಮುಟ್ಟುತ್ತಾಳೋ ಇಲ್ಲವೋ ಎಂಬುದಾಗಿ ಪಂದ್ಯ ಕಟ್ಟಿದರು. "ಆಕೆ ಮುಟ್ಟಿದರೆ ನಾವೂ ಮುಟ್ಟುತ್ತೇವೆ," ಎಂದರು ಕೆಲವರು.

ಇಷ್ಟರಲ್ಲಿ ಗುಂಡುಗಳ ಸದ್ದು ಹೆಚ್ಚಾಗಿ ಬರ ತೊಡಗಿತು. ಕಣ್ಣು ಮುಚ್ಚಿ ತೆಗೆಯುವಷ್ಟರಲ್ಲಿಯೇ ಬಾಂಬ್ ಒಂದು ಸೇತುವೆಯ ಮಧ್ಯಕ್ಕೆ ಬಂದು ಕೆಳಗೆ ಬೀಳುತ್ತ ಸ್ಫೋಟಿಸಿತು. ಜನ ನೀರಿಗೆ ಹಾರಿದರು.

ಆ ತಾಯಿ ಭಯಭೀತಳಾಗಿ ಸುತ್ತ ನೋಡಿದಳು. ಕತ್ತಲು, ಮಳೆ, ಸದ್ದಿನ ಪ್ರತಿಧ್ವನಿ! ಬೆದರಿದಳು, ಬೆವರಿದಳು. ಮೈಯೆಲ್ಲ ನಡುಗಿತು. ಬುಟ್ಟಿ ಹಿಡಿದಿದ್ದ ಕೈಗಳು ಸಡಿಲಾದವು. ಶಿಶುಗಳ ಚೀತ್ಕಾರ, ಆಕೆಯ ಆಕ್ರಂದನ. ನೀರಲ್ಲಿ ಬಿದ್ದವರ ಭಯವಿಹ್ವಲ ಕೂಗು—ಆ ಬಾಂಬಿನ ಸ್ಫೋಟದ ಸದ್ದಿನಲ್ಲಿ ಸತ್ತು ಹೋದವು. ✡



## ಹಕ್ಕಿನ ಪಾಲು

ಮಹಾಶ್ರೀಮಂತ ಲಾರ್ಡ್ ರಾಥ್‌ಚೈಲ್ಡ್‌ರ ಮನೆಗೊಬ್ಬ ಕಮ್ಯುನಿಜಂ ವಾದಿ ಬಂದ. ಆತ, "ಮಿ. ರಾಥ್ ಚೈಲ್ಡ್‌ರೆ, ನೀವು ಇಷ್ಟೆಲ್ಲ ಸಂಪತ್ತನ್ನು ಒಂದೆಡೆ ಕೂಡಿಟ್ಟು ಉಪಭೋಗಿಸುತ್ತಿರುವುದು ತುಂಬ ಅನ್ಯಾಯ. ಇದರಲ್ಲಿ ಪ್ರಪಂಚದ ಎಲ್ಲರದೂ ಸಮಾನ ಪಾಲಿದೆ" ಎಂದು ಬಿಗಿದ ಮುಷ್ಟಿಯಿಂದ ಟೇಬಲ್ ಗುದ್ದುತ್ತ ಹೇಳತೊಡಗಿದ.

ಈ ತರ್ಕವನ್ನು ಸಮಾಧಾನದಿಂದ ಕೇಳುತ್ತ, ಆತನ ವಾದದ ಮುಖ್ಯಾಂಶಗಳನ್ನು ಮಗ್ನತೆಯಿಂದ ಬರೆದುಕೊಂಡು ಒಮ್ಮೆ ಓದಿಕೊಂಡರು ರಾಥ್ ಚೈಲ್ಡ್. ಆಮೇಲೆ ಎರಡು ನಾಣ್ಯಗಳನ್ನು ಆ ಕಮ್ಯುನಿಸ್ಟನ ಕೈಯಲ್ಲಿಟ್ಟರು.

ಆತನಿಗೆ ಆಶ್ಚರ್ಯವಾಯಿತು. ನಾಣ್ಯಗಳನ್ನು ತಿರುಗಿಸಿ ನೋಡುತ್ತ, "ಇದೇನಿದು?" ಎಂದು ಕೇಳಿದ.

ರಾಥ್‌ಚೈಲ್ಡ್ ಕೂಡಲೇ ಹೇಳತೊಡಗಿದರು: "ಪ್ರಪಂಚದ ಜನಸಂಖ್ಯೆಯ ಪ್ರಮಾಣದ ಮೇಲೆ ನನ್ನ ಸಂಪತ್ತಿನಲ್ಲಿ ನಿಮ್ಮ ಪಾಲಿಗೆ ಬರುವ ಹಕ್ಕಿನ ಅಂಶ ಈ ೨ ನಾಣ್ಯಗಳು." ಪಾಪ, ಸಾವರಿಸಿಕೊಳ್ಳಲು ಸಾಕಾಗಿ ಹೋಯಿತು ಆ ಸಾಮ್ಯವಾದಿಗೆ.

# ಬಾಳಿಕೆ ಬರುವ ಕರೋನಾ ರಚನೆ

ಗಟ್ಟಿ ಮುಟ್ಟಾದ, ಮೃದುವಾದ
ಸ್ಟ್ರಾಪ್‌ಗಳು — ನಿಮ್ಮ
ಪಾದಗಳಿಗೆ ಆರಾಮದಾಯಕ.

ಅಡ್ಡ ಪಟ್ಟಿಯುಳ್ಳ
ತಳ — ನಡೆಯುವಾಗ
ಒಳ್ಳೆಯ ಹಿಡಿತಕ್ಕಾಗಿ.

Corona
VIJAY
8

## ವಿಜಯ್ ರಬ್ಬರ್ ಸ್ಲಿಪ್ಪರ್ಸ್






ತಯಾರಕರು :
**ಕರೋನಾ ಸಾಹು ಕಂ. ಲಿ.**
221, ದಾದಾಭಾಯ್ ನವರೋಜಿ ರೋಡ್, ಮುಂಬಯಿ 400 001.

**ಕರೋನಾ-ಸದಾ ನಿಮ್ಮ ಹಿತೈಷಿ**

CHAITRA-CS-211 KAN

ಮೂವತ್ತು ವರ್ಷಗಳಿಗಿಂತಲೂ ಹಳೆಯ ಘಟನೆ. ಆದರೆ ಅದರಿಂದ ನಾನು ಕಲಿತ ಪಾಠ ಇಂದಿಗೂ ಹಸಿರಾಗಿಯೇ ನನ್ನ ಮನದಲ್ಲಿ ಉಳಿದಿದೆ. ನಮ್ಮದು ಜಾತ್ಯತೀತ ರಾಷ್ಟ್ರವೆಂದು ಘಂಟಾಘೋಷವಾಗಿ ನಾವು ಸಾರುತ್ತಿರುವಂತೆಯೇ ಜನತೆಯ ಖಾಸಗಿ ಜೀವನ, ಸಾರ್ವಜನಿಕ ಜೀವನಗಳೆರಡರಲ್ಲೂ ಹುಟ್ಟಿನಿಂದ ಬಂದ ಜಾತಿಯೇ ಹುಚ್ಚೆದ್ದು ಕುಣಿಯುತ್ತಿರುವ ಇಂದಿನ ಸಂದರ್ಭದಲ್ಲಿ ಈ ಘಟನೆಗಳನ್ನು ನೆನಪಿಸಿಕೊಳ್ಳುವುದು ಉಚಿತವೆನಿಸುತ್ತದೆ.

೧೯೪೭–೪೮ರಲ್ಲಿ ನಾನು ಧಾರವಾಡದ ಕರ್ನಾಟಕ ಹೈಸ್ಕೂಲಿನಲ್ಲಿ ಐದನೆಯ ವರ್ಗದ (ಇಂದಿನ ಲೆಕ್ಕದಲ್ಲಿ ಒಂಬತ್ತನೆಯ ವರ್ಗ) ವಿದ್ಯಾರ್ಥಿ. ಶ್ರೀ ಕೆ. ಜಿ. ಜೋಶಿಯವರು ನಮ್ಮ ಕ್ಲಾಸ್‌ಟೀಚರ್(ಮುಂದೆ ಅವರು ಇದೇ ಹೈಸ್ಕೂಲಿನ ಮುಖ್ಯಾಧ್ಯಾಪಕರಾಗಿ ನಿವೃತ್ತರಾಗಿ ನಂತರ ಕೆ.ಇ. ಬೋರ್ಡ್ಸ್ ಸಂಸ್ಥೆಯ ಕಾರ್ಯಾಧ್ಯಕ್ಷರಾಗಿದ್ದಾರೀಗ. ೧೯೪೨ರ ಸ್ವಾತಂತ್ರ್ಯಾಂದೋಲನದಲ್ಲಿ ಸೆರೆ ಸಿಕ್ಕಿದ್ದ ಅವರು ಅದೇ ಬಿಡುಗಡೆಯಾಗಿ ಕೆಲಸಕ್ಕೆ ಮರಳಿದ್ದರು.

ಆ ವರ್ಷ ಒಂದು ದಿನ ನಮ್ಮ ಶಾಲೆಯ ವಿದ್ಯಾರ್ಥಿಗಳಿಗೆಲ್ಲ ವನಭೋಜನವನ್ನು ಏರ್ಪಡಿಸಿದ್ದಾಯಿತು. ಈಗ ಕೃಷಿ ವಿಶ್ವವಿದ್ಯಾಲಯವಿರುವ ಎತ್ತಿನ ಗುಡ್ಡಕ್ಕೆ ಹೋಗುವುದೆಂದು ನಿರ್ಧರಿಸಲಾಗಿತ್ತು. ಕೆ.ಜಿ ಜೋಶಿಯವರೇ ನೇತೃತ್ವ ವಹಿಸಿದ್ದರು. ವಿದ್ಯಾರ್ಥಿಗಳೆಲ್ಲ ತಮ್ಮ ತಮ್ಮ ಮನೆಯಿಂದಲೇ ಊಟ ಕಟ್ಟಿಸಿಕೊಂಡು ಬರಬೇಕೆಂದು ಎಲ್ಲರಿಗೂ ಹೇಳಿದ್ದರು. ಆಗ ನಾನು ಫ್ರೀ-ಬೋರ್ಡಿಂಗಿನಲ್ಲಿ ಊಟ ಮಾಡುತ್ತಿದ್ದೆ. ಕಟ್ಟುನಿಟ್ಟಾದ ರೇಶನ್ ಕಾಲವಾದ್ದರಿಂದ ಅಲ್ಲಿ ನಮಗೆ ಸಿಗುತ್ತಿದ್ದುದು ಅಂಗೈದಪ್ಪದ ಗೋವಿನ ಜೋಳದ ರೊಟ್ಟಿಗಳು ಮಾತ್ರ. ಉಪಾಯಗಾಣದೆ ನಾನು ಅವುಗಳನ್ನೆ ಕಟ್ಟಿಸಿಕೊಂಡು ಹೋದೆ.

ಎತ್ತಿನ ಗುಡ್ಡಕ್ಕೆ ಹೋದ ನಂತರ ಹಲವಾರು ಬಗೆಯ ಆಟ ಪಾಟಗಳನ್ನು ಹುಡುಗರೆಲ್ಲ ಆಡಿದೆವು. ಅನಂತರ ಊಟಕ್ಕೆಂದು ಎಲ್ಲರನ್ನೂ ಒಂದೆಡೆ ಸೇರಿಸಲಾಯಿತು. ವಿದ್ಯಾರ್ಥಿ ವಿದ್ಯಾರ್ಥಿನಿಯರು ತಂತಮ್ಮ ಮನೆಗಳಿಂದ ಅನೇಕಾನೇಕ ತರಹದ ಭಕ್ಷ್ಯ – ಭೋಜ್ಯಗಳನ್ನು ತಂದಿದ್ದರು. ಉಂಡಿ, ಚಕ್ಕುಲಿ, ಕರಚೀಕಾಯಿ, ಬುತ್ತಿ, ಕಲಸನ್ನ–ಏನೇನೋ ಎಲ್ಲ ಇತ್ತು. ಅದೆಲ್ಲವನ್ನೂ ಕಂಡ ನನ್ನ ಬಾಯಿ ನೀರೂರಿತಲ್ಲದೆ ಇಷ್ಟೆಲ್ಲ ಸಹಪಾಠಿಗಳ ಗುಂಪಿನಲ್ಲಿ ನಾನೊಬ್ಬ ದರಿದ್ರ; ಅಂತಸ್ತಿನ ದೃಷ್ಟಿಯಿಂದ, ಕುಲದ ಕಾರಣದಿಂದ ಎಂಬ ಭಾವ ನನ್ನಲ್ಲಿ ಜಾಗ್ರತವಾಗಿ ನನ್ನ ತಲೆ ದಿಮ್ಮೆನ್ನತೊಡಗಿತು. ಇತರರು ತಂದ ರುಚಿ ರುಚಿಯಾದ ತಿಂಡಿಗಳು ನನಗೆ ಸಿಗುವುದಿರಲಿ ಉಚ್ಚ ಜಾತಿಗಳಿಗೆ ಸೇರಿದ್ದ ಇತರರೊಂದಿಗೆ ಕೂತು ನಾನು ತಂದ ರೊಟ್ಟಿಯನ್ನು ತಿನ್ನುವುದಕ್ಕಾದರೂ ನನಗೆ ಅವಕಾಶ ದೊರೆಯಬಹುದೇ ಎಂಬ ಸಂಶಯ ಭುಗಿಲ್ಲೆಂದೆದ್ದಿತು. ಆದಿನ್ನೂ ಉಚ್ಚ ನೀಚ ಭೇದಗಳು ಬಹುಮಟ್ಟಿಗೆ ಸಾಧುವೆಂದು ನಂಬಿದ್ದ ಜನರೇ ಹೆಚ್ಚಾಗಿದ್ದ ಕಾಲ. ಅಲ್ಲದೆ ನಮ್ಮ ಸಾಲೆಯಲ್ಲಿ ಅಂದು ಬ್ರಾಹ್ಮಣ ವಿದ್ಯಾರ್ಥಿಗಳ ಸಂಖ್ಯೆಯೇ ಬಹು ದೊಡ್ಡದು. ನಾನು ಅವರು ತಂದ ತಿಂಡಿಗಳ ರುಚಿ ನೋಡು.

ವುದಿರಲಿ, ಅವರ ಬದಿಗೆ ಕೂತು ಊಟ ಮಾಡಿದರೆ ಹೆಮ್ಮಿಗೆಯೆಂದವರು ಭಾವಿಸಲಿಕ್ಕಿಲ್ಲವೆ ? ನಾನೊಬ್ಬನೆ ನನ್ನ ಗಂಟಿನೊಂದಿಗೆ ಎಲ್ಲಾದರೂ ದೂರ ಓಡಿಹೋಗಿ ಹಸಿವನ್ನು ಹಿಂಗಿಸಿಕೊಂಡು ಬರಲೇ? ನನ್ನ ಗಂಟು ಬಿಚ್ಚಲೂ ನನಗದೇನೋ ರಸಾತಳಕ್ಕಿಳಿದಂತಹ ನಾಚಿಕೆಯ ಅನುಭವ.

ನನ್ನನ್ನೂ ನನ್ನ ದೈವವನ್ನೂ ಹಳಿದುಕೊಳ್ಳುವುದರಲ್ಲೇ ಮಗ್ನನಾಗಿರುವಾಗಲೇ ಜೋಶಿ ಮಾಸ್ತರರ ಸೀಟಿಯ ಸಪ್ಪಳ ಕೇಳಿಸಿದ್ದರಿಂದ ಎಲ್ಲರಂತೆ ನಾನೂ ತಲೆಯೆತ್ತಿದೆ. ಆಗಲೇ ನಮ್ಮೆದುರಿನಲ್ಲಿ ದೊಡ್ಡದೊಂದು ಜಮಖಾನೆ ಹಾಸಲಾಗಿತ್ತು. "ನಿಮ್ಮೆಲ್ಲಾ ಗಂಟುಗಳನ್ನೂ ಬಿಚ್ಚಿ ಅದರೊಳಗಿನದನ್ನೆಲ್ಲಾ ಈ ಜಮಖಾನೆಯ ಮೇಲೆ ಸುರುವಿಬಿಡಿರಿ"–ಮಾಸ್ತರರ ಅಪ್ಪಣೆ ಅದು. ಕಿವಿಗೆ ಬೀಳುವುದೊಂದೇ ತಡ ಎಲ್ಲರೂ ತಂತಮ್ಮ ಗಂಟುಗಳಲ್ಲಿ ತಂದದ್ದನ್ನೆಲ್ಲ ಜಮಖಾನೆಯ ಮೇಲೆ ಸುರುವತೊಡಗಿದರು. ಇದನ್ನು ನಿರೀಕ್ಷಿಸಿರದಿದ್ದ ನನಗೆ ಆಶ್ಚರ್ಯವೇ ಆಯಿತು. ಇವರು ಏನು ಮಾಡಲು ಹೊರಟಿದ್ದಾರೆಂದು ಅರ್ಥವಾಗದೆ ಆಜ್ಞೆಯನ್ನು ಪಾಲಿಸಬೇಕೆಂಬ ದೃಷ್ಟಿಯಿಂದ ಮಾತ್ರವೇ ನಾನು ಕೂಡ ಇತರರ ಕಣ್ಣಿಗೆ ಬೀಳದಂತೆ ನಾ ತಂದ ರೊಟ್ಟಿಗಳನ್ನೂ ಆ ರಾಶಿಗೆ ಸೇರಿಸಿದೆ. ಎರಡು ನಿಮಿಷಗಳ ನಂತರ ನೋಡಿದರೆ ನಮ್ಮ ಒಂದು ಬದಿಗೆ ಎತ್ತಿನ ಗುಡ್ಡವಾದರೆ ಇನ್ನೊಂದು ಬದಿಗೆ ಅನ್ನದ ಗುಡ್ಡ! ನನಗೆ ಪುರಾಣಕಥೆಗಳಲ್ಲಿ ಕೇಳಿದ್ದ ಬಕಾಸುರನ ಕೂಳಿನ ನೆನಪು ಬಂತು.

ಅನಂತರ ಜೋಶಿ ಮಾಸ್ತರರು ತಮ್ಮ ಸಹಾಯಕ್ಕೆಂದು ನಾಲ್ಕು ಹುಡುಗರನ್ನೆಬ್ಬಿಸಿಕೊಂಡು ಉಳಿದವರಿಗೆಲ್ಲ ಸುತ್ತಲೂ ಸಾಲಾಗಿ ಕೂಡಲು ಹೇಳಿದರು. ಅನಂತರ "ಓಂ ಸಹನಾವವತು..." ಪ್ರಾರ್ಥನೆಯಾಗಿ ತಾವೇ ಎಲ್ಲರಿಗೂ ಬಡಿಸಿಬಿಟ್ಟರು. ಅಂದಿನಂತಹ ಅಮೃತ ಸಮಾನ ಊಟವನ್ನು ಮತ್ತೆ ಇಂದಿಗೂ ಮಾಡಿಲ್ಲ. ಅಂದು ನಾ ತಂದಿದ್ದ ರೊಟ್ಟಿಗಳು ಯಾರಿಗೆ ಹೋದವೋ ತಿಳಿಯದು, ನನಗೆ ಮಾತ್ರ ಬರಲೇಯಿಲ್ಲ.

ಜಾತ್ಯತೀತತೆ, ಸಹಜೀವನ ಮುಂತಾಗಿ ದೊಡ್ಡ ದೊಡ್ಡ ಭಾಷಣ ಮಾಡುವವರನ್ನು ಬೇಕಾದಷ್ಟು ನೋಡಿದ್ದೇನೆ. ಅವೆಲ್ಲ ಮಾತುಗಳೂ ಈ ಕಿವಿಗೆ ಬಿದ್ದು ಆ ಕಿವಿಯಿಂದ ಹಾರಿಹೋಗಿವೆ. ಆದರೆ ಜೋಶಿ ಮಾಸ್ತರರ ಈ ಒಂದು ಕೃತಿ ನೂರಾರು ಜನರ ಭಾಷಣಗಳೂ ಹತ್ತಾರು ಪುಸ್ತಕಗಳೂ ಮಾಡಿರದಿದ್ದಂಥ ಪರಿಣಾಮವನ್ನು ನನ್ನ ಮೇಲೆ ಮಾಡಿತು. ಅವರು ತತ್ವಗಳ ಕುರಿತು ಮಾತಾಡಲಿಲ್ಲ, ತೀರ ಸಹಜವಾಗೆಂಬಂತೆ ತಮ್ಮ ಕೃತಿಯಲ್ಲಿ ತಂದು ತೋರಿಸಿಬಿಟ್ಟರು. ನೈಚ್ಯಾನುಸಂಧಾನದಿಂದ ಬಳಲುತ್ತಿದ್ದ ನನ್ನಂಥವನಲ್ಲಿ ಆತ್ಮಗೌರವವನ್ನೂ ಹೃದಯವೈಶಾಲ್ಯವನ್ನೂ ಮಾತಿಲ್ಲದೆ ಕುದುರಿಸಿಬಿಟ್ಟರು !

ಎನ್.ಎಂ. ಗುಡ್ಡಳ್ಳಿ

# ಒಂದು ಸಂಜೆ

ಜಿ. ವಿಜಯಕುಮಾರ

ವರ್ಷಕ್ಕೆ ಇಪ್ಪತ್ತರಿಂದ ಮುವ್ವತ್ತು ಇಂಚುಗಳಷ್ಟೇ ಮಳೆ ಬೀಳುವ ಮಧ್ಯಭಾರತದ ಕೃಷ್ಣಾ ಮತ್ತು ಗೋದಾವರಿಗಳ ನಡುವೆ ಶುಷ್ಕವಾದ ಬೇಸಾಯಕ್ಕೆ ಮಾತ್ರ ಅನುಕೂಲವಿರುವ ಕಡೆಯೂ ಅಲ್ಲಲ್ಲಿ ಸಣ್ಣ ಪುಟ್ಟ ಅರಣ್ಯಗಳಿವೆ. ಅಲ್ಲಿನ ವೃಕ್ಷಗಳು ಹೇಳಿಕೊಳ್ಳುವಷ್ಟು ಎತ್ತರವಾಗಿರದಿದ್ದರೂ ಸುತ್ತಲೂ ದಟ್ಟವಾದ ಮುಳ್ಳಿನ ಪೊದೆಗಳಿಂದ ಕೂಡಿವೆ.

ಮೇ ಮತ್ತು ಜೂನ್ ತಿಂಗಳ ಅಸಾಧ್ಯ ಬೇಸಿಗೆ ಕಾಲದಲ್ಲಿ ಮುಖ್ಯ ನದಿಗಳು ಅತ್ಯಂತ ತೆಳುವಾಗಿ ಹರಿಯುತ್ತವೆ. ಅವುಗಳ ಉಪನದಿಗಳಲ್ಲಂತೂ ನೀರು ಎಷ್ಟು ಕಡಿಮೆ ಇರುತ್ತದೆ ಎಂದರೆ ಬಹಳ ದೂರಕ್ಕೊಮ್ಮೆ ಸಿಗುವ ತೊರೆ ಅಥವಾ ಸಣ್ಣ ಮಡುವಿನ ನೀರಿಗಾಗಿ ಬಾಯಾರಿದ ಮೃಗಗಳು ಮತ್ತು ಪಕ್ಷಿಗಳು ಅರಣ್ಯದಿಂದ ಹುಡುಕಿಕೊಂಡು ಬರುತ್ತವೆ. ಮತ್ತೆ ಈ ಉಪನದಿಗಳು ಮಳೆ ಬಂದು ಹರಿಯ ತೊಡಗುವ ವರೆಗೆ ಈ ಪ್ರಾಣಿಗಳು ಪ್ರತಿ ದಿನವೂ ನೀರಿಗಾಗಿ ಇಲ್ಲಿಗೆ ಬರುತ್ತವೆ.

ಅಂಥ ಸಣ್ಣ ಪುಟ್ಟ ಕೊಳಗಳು ಮೇ ಮತ್ತು ಜೂನ್ ತಿಂಗಳಲ್ಲಿ ಬೇರೆ ಪ್ರಾಣಿಗಳಿಗೆ ಅಪಾಯಕಾರಿ ಸ್ಥಳಗಳಾಗುತ್ತವೆ. ಬಾಯಾರಿಕೆಗೆ ಮಾತ್ರವಲ್ಲದೆ ತಮ್ಮ ಆಹಾರ ಹುಡುಕುವುದಕ್ಕಾಗಿ ಮಾಂಸಾಹಾರಿ ಕ್ರೂರ ಮೃಗಗಳು ಅಲ್ಲಿ ಇದ್ದೇ ಇರುತ್ತವೆ.

ಕಾನಪುರದ ಭಾರೀ ಬಟ್ಟೆ ಗಿರಣಿಯಲ್ಲಿದ್ದ ನನ್ನ ಸ್ನೇಹಿತರೊಬ್ಬರೊಡನೆ ವನ್ಯ ಮೃಗಗಳನ್ನು ನೋಡಲು ಮೇ ತಿಂಗಳ ಮಧ್ಯ ಭಾಗದಲ್ಲಿ ಒಂದು ಸಂಜೆ ಹೊರಟೆವು. ಬಂದೂಕುಗಳನ್ನು ತೆಗೆದುಕೊಳ್ಳದೆ ಖಾಕಿ ಶರಟು ಮತ್ತು ನಿಕ್ಕರುಗಳನ್ನು ಧರಿಸಿ ರೇಲ್ವೆ ಹಳಿಗಳ ಪಕ್ಕದಲ್ಲಿ ನಡೆಯುತ್ತ ಅರಣ್ಯವನ್ನು ಪ್ರವೇಶಿಸಿದೆವು. ಸಣ್ಣ ತೊರೆಗೆ ಅಡ್ಡಲಾಗಿ ಕಟ್ಟಿದ ಎತ್ತರವ ಸೇತುವೆಯ ಮೇಲೆ ಇಂಜನಿಯರುಗಳು ತನಿಖೆ ನಡೆಸಲು ಅನುಕೂಲವಾಗುವಂತೆ ರಚಿಸಿದ್ದ ಪುಟ್ಟ ವೇದಿಕೆಯನ್ನೇರಿ ಕುಳಿತೆವು. ಐವತ್ತು ಅಡಿಗಳ ಕೆಳಗೆ ಒಣಗಿದ ಹಳ್ಳದ ಪಾತ್ರದ ಉದ್ದಗಲಕ್ಕೂ ಸುಮಾರು ದೂರದ ವರೆಗೆ ನಾವು ವೀಕ್ಷಿಸಬಹುದಾಗಿತ್ತು.

ನಾವು ಅಲ್ಲಿ ಸೇರಿದಾಗ ಸುಮಾರು ಸಂಜೆ ಐದು ಘಂಟೆಯಾಗಿತ್ತು. ಸಣ್ಣ ನೀರಿನ ಕೊಳ–ವೊಂದು ನಲವತ್ತು ಗಜಗಳಷ್ಟು ದೂರದಲ್ಲಿತ್ತು. ಅಷ್ಟು ಭಾಗದ ನೀರನ್ನು ಬಿಟ್ಟರೆ ಉಳಿದ ತೊರೆಯ ಪಾತ್ರವೆಲ್ಲ ಒಣಮರಳಿನಿಂದ ತುಂಬಿತ್ತು. ಎರಡೂ ಕಡೆಯ ದಡಗಳು ನಾಲ್ಕು ಅಡಿಗಳಿಗಿಂತ ಎತ್ತರವಿರದೆ ಇಳಿಜಾರಾಗಿದ್ದವು. ಅಲ್ಲಲ್ಲಿ ದಡದ ಉದ್ದಕ್ಕೂ ಮರಗಳಿದ್ದವು. ಅವುಗಳ ದೊಡ್ಡ ಬೇರುಗಳು ದಡದ ನೆಲದಿಂದ ಹೊರಗೆ ಅಲ್ಪ ಸ್ವಲ್ಪ ಕಾಣುತ್ತಿದ್ದವು. ಮರಗಳಲ್ಲಿ ಕೆಲವು ತೊರೆಯ ಕಡೆ ಅರ್ಧ ಬಾಗಿದವು. ಈ ಮರಗಳ ನಡುವೆ ಎತ್ತರವಾದ ಮತ್ತು ದಟ್ಟವಾದ ಮುಳ್ಳಿನ ಪೊದೆಗಳಿದ್ದವು. ಅವುಗಳ ನಡುವೆ ಅಲ್ಲಲ್ಲಿ ತೊರೆಯ ಕಡೆಗೆ ಬರಲು ಮಾಡಲಾಗಿದ್ದ ಸಣ್ಣ ಕಾಲುದಾರಿಗಳಿದ್ದವು. ನಮ್ಮ ದೂರದರ್ಶಕದಿಂದ

ಮತ್ತಷ್ಟು ಮೇಲೆ ನೋಡಿದಾಗ ದೊಡ್ಡ ಬಂಡೆಗಳಿಂದ ಕೂಡಿದ ಬೆಟ್ಟಗಳು ಮತ್ತು ವಿರಳವಾದ ಪೊದೆಗಳು ಕಂಡುಬಂದವು.

ಮರೆಯಲ್ಲಿ ಅವಿತುಕೊಂಡು ಸ್ವಲ್ಪವೂ ಅಲುಗಾಡದೆ ವನ್ಯಜೀವಿಗಳನ್ನು ನೋಡುವುದು ನಿಜಕ್ಕೂ ಸೊಗಸಾದ ಅನುಭವ. ಮರಸಿಗೆ ಕೂತವನು ಕಲ್ಲಿನಂತೆ ಅಚಲನಾಗಿರುವುದನ್ನು ಚೆನ್ನಾಗಿ ಅಭ್ಯಾಸ ಮಾಡಿರಬೇಕು. ಆಗ ಮಾತ್ರ ಪಕ್ಷಿಗಳು ಪ್ರಾಣಿಗಳು ಸ್ವಚ್ಛಂದವಾಗಿ ವಿಹರಿಸುವುದನ್ನು ಕಾಣಬಹುದು. ಹಾಗೆ ಅವಿತಿರುವಾಗ ಧೂಮಪಾನ ತೀರ ನಿಷಿದ್ಧ. ಹಾಗೆ ಬಹಳ ಕಾಲ ಕದಲದೆ ಕೂರುವದು ಅಸಾಧ್ಯವಾದ ಸಾಧನೆಯೇನಲ್ಲ.

ಕೊಳದ ಬಳಿಗೆ ಬರುವ ಹಲವಾರು ಜಾತಿಯ ಪಕ್ಷಿ ಸಂಕುಲವನ್ನು ನೋಡಲು ಅದು ಒಳ್ಳೆಯ ಸಮಯ. ನಾವು ಮರಸಿಗೆ ಕೂತು ಕಾಲು ಗಂಟೆಯೂ ಆಗಿರಲಿಲ್ಲ. ಬೂದು ಬಣ್ಣದ ಪಾರಿವಾಳಗಳ ಗುಂಪು ಹಾರಿ ಬಂದವು. ತಮ್ಮ ಕೊಕ್ಕುಗಳನ್ನು ನೀರಿನಲ್ಲಿ ಅದ್ದಿ ಅದ್ದಿ ಸಾಕಷ್ಟು ನೀರನ್ನು ಕುಡಿದಾದ ಮೇಲೆ ಎದುರು ದಡದ ದಟ್ಟವಾದ ಮರಗಳ ಕೊಂಬೆಗಳ ಮೇಲೆ ರಾತ್ರಿಯನ್ನು ಕಳೆಯಲು ಹಾರಿಹೋದವು.

ಒಂದು ಕ್ಷಣದ ನಂತರ ದಡದ ಉದ್ದಕ್ಕೂ ಇದ್ದ ಮರಗಳ ಕೊಂಬೆಗಳ ನಡುವಿನಿಂದ ಹೊರಟ ಅಸಂಖ್ಯಾತ ಪಕ್ಷಿಗಳ ಕಲರವ ಇಡೀ ವಾತಾವರಣವನ್ನು ತುಂಬಿತು. ಆದರೆ ಅವುಗಳ ಧ್ವನಿಯಲ್ಲಿ ಅಷ್ಟೇನು ಉತ್ಸಾಹ ಕಂಡುಬರಲಿಲ್ಲ. ಅವೆಲ್ಲ ಪೊದೆಗಳತ್ತ ನೋಡುತ್ತ ಎಚ್ಚರಿಕೆಯ ಧ್ವನಿ ಹೊರಡಿಸುತ್ತಿದ್ದವು. ಅದಕ್ಕೆ ಕಾರಣೀಭೂತವಾದ ಪ್ರಾಣಿ ಕ್ಷಿಪ್ರದಲ್ಲಿಯೇ ಕಾಣಿಸಿಕೊಂಡಿತು. ಒಂದು ಕಾಡುಬೆಕ್ಕು ಪೊದೆಗಳ ನಡುವಿನಿಂದ ಹೊರಬಂದು ನಿಧಾನವಾಗಿ ನೀರಿನ ಕಡೆ ನಡೆಯಿತು. ಬಹುಶಃ ಈ ಕಾಡು ಬೆಕ್ಕು ಪೊದೆಗಳ ನಡುವೆ ಬರುತ್ತಿದ್ದುದನ್ನು ಹಕ್ಕಿಗಳು ಕಂಡಿರಬೇಕು. ದಾಹವನ್ನು ತೀರಿಸಿಕೊಂಡಾದ ಮೇಲೆ ಅದು ಒಂದು ಕ್ಷಣ ನೀರಿನ ಬಳಿಯೇ ಕುಳಿತುಕೊಂಡು ಕೊರಳಿನ ಹಿಂಭಾಗವನ್ನು ಮುಂಗಾಲಿನಿಂದ ಕೆರೆದುಕೊಂಡು ನಂತರ ನಿಧಾನವಾಗಿ ಹೆಜ್ಜೆ ಹಾಕುತ್ತ ಕಣ್ಮರೆಯಾಯಿತು.

ಬೆಕ್ಕು ಅಪಾಯದ ಸ್ಥಳದಿಂದ ದೂರವಾದ ಮೇಲೆ ಮರಗಳಲ್ಲಿನ ಅಸ್ಪಷ್ಟ ಚಿಲಿಪಿಲಿ ನಿಧಾನವಾಯಿತು. ಒಂದೆರಡು ಹಕ್ಕಿಗಳು ತಮ್ಮ ಪುಟ್ಟ ಪುಟ್ಟ ಮರಿಗಳೊಡನೆ ನೀರಿನ ಹತ್ತಿರಕ್ಕೆ ಹಾರಿ ಬಂದು ಕೊಕ್ಕಿನಿಂದ ನೀರನ್ನು ಕುಡಿದವು. ಕೆಲವೇ ಕ್ಷಣಗಳ ಆ ದಾಹ ನಿವಾರಣೆಯ ಸಮಯದಲ್ಲೂ ಅವು ತಮ್ಮ ಶತ್ರುವಾದ ಕಾಡುಬೆಕ್ಕು ಮುಂತಾದವುಗಳ ಬಗ್ಗೆ ಮುಂಜಾಗರೂಕತೆಯಿಂದ ಇದ್ದವು.

ನಂತರ ಬಂದದ್ದು ಸುಂದರವಾದ ಶಿಟಿಯ ಒಂದು ಜೋಡಿ ಹಕ್ಕಿಗಳು. ಗಾಳಿಯಲ್ಲಿ ಅವು ಹಗುರವಾಗಿ ತೇಲಿ ಬಂದವು. ನೀರು ಕುಡಿದಾದ ಮೇಲೆ ಅವೂ ಮರಗಳ ಗುಂಪಿನತ್ತ ಹಾರಿ ಹೋದವು. ನಂತರ ಕಾಗೆಗಳ ಒಂದು ಜೋಡಿ ಬಂತು. ಕೆಲವು ಕ್ಷಣ ಮರಗಳ ಕೊಂಬೆಯ ಮೇಲೆ ಕುಳಿತಿದ್ದು ನಂತರ ನೀರಿನ ಬಳಿ ಸಿಕ್ಕುವ ಹುಳು ಹುಪ್ಪಟೆಗಳನ್ನು ಹಿಡಿಯಲು ಅವು ಕೆಳಕ್ಕೆ ಧಾವಿಸಿದವು. ಮತ್ತೆ ಮತ್ತೆ ಅವು ಕೊಂಬೆಗೆ ಹಿಂತಿರುಗುವುದೂ ನಂತರ ಕೊಳದ ದಡಕ್ಕೆ ಹಾರಿಬರುವುದೂ ಸ್ವಲ್ಪ ಕಾಲ ನಡೆಯಿತು. ಸ್ವಲ್ಪ ಕಾಲ ಕೀಟಭಕ್ಷಣ ಮಾಡಿದ ನಂತರ ನೀರು ಕುಡಿಯಬಹುದು ಎಂದು ಅವು ಯೋಚಿಸಿದವು. ಕುಡಿದಾದ ಮೇಲೆ ಎತ್ತಲೋ ಹಾರಿಹೋದವು.

ನಂತರ ಕೆಲವು ಮೈನಾ ಹಾಗೂ ಹರಟೆಮಲ್ಲ ಹಕ್ಕಿಗಳು ಒಟ್ಟಿಗೆ ಹಾರಿ ಬಂದವು. ಅವು ತುಂಬಾ ಜಾಯವಾರಿದ್ದವು. ಮೈನಾ ಹಕ್ಕಿಗಳು ಬಹಳ ದೂರದಿಂದ ಬಂದಿದ್ದರೂ ಉಳಿದವು ಮರಗಳ ಕೊಂಬೆಯಿಂದ ಕೊಂಬೆಗೆ ಹಾರುತ್ತ ಚಿಲಿಪಿಲಿ ಗದ್ದಲಮಾಡಿಕೊಂಡು ಬಂದಿದ್ದವು. ಅವುಗಳ ಮುಗಿಯದ ಸಂಭಾಷಣೆಯನ್ನು ಅರ್ಥ ಮಾಡಿಕೊಳ್ಳಲು ನಮ್ಮಿಂದ ಆಗಲಿಲ್ಲ. ಅವುಗಳ ನಿರ್ಗಮನದ ನಂತರ ಕಾಡುಕೋಳಿ

ಗಳ ಗುಂಪೊಂದು ಬಂತು. ಒಂದು ಮರದ ಕೊಂಬೆಗಳ ಮೇಲೆ ಅವು ಕೂತವು. ಸ್ವಲ್ಪ ಹೊತ್ತು ಎಚ್ಚರಿಕೆಯಿಂದ ಸುತ್ತ ಮುತ್ತಲ ಪೊದೆಗಳನ್ನು ವೀಕ್ಷಿಸಿದ ನಂತರ ಅವು ಕೆಳಗಿಳಿದು ನೀರು ಕುಡಿದು ಮತ್ತೆ ಹಿಂದಿನ ಮರಗಳ ಮೇಲೆಯೇ ಹಾರಿ ಕುಳಿತವು. ನಂತರ ಗುಬ್ಬಚ್ಚಿಗಳ ದೊಡ್ಡ ತಂಡ ಹಾರಿ ಬಂತು. ಅವು ಬಂದ ವೇಗಕ್ಕೆ ಒಂದೇ ಬಾರಿಗೆ ಕೊಳವನ್ನು ದಾಟಿ ಒಂದು ಸುತ್ತು ಪ್ರದಕ್ಷಿಣೆ ಹಾಕಿದ ಮೇಲೆಯೇ ಅವು ನೀರಿನ ಹತ್ತಿರ ಕುಳಿತುಕೊಳ್ಳಲು ಸಾಧ್ಯವಾಯಿತು. ಒಂದೇ ಗುಟುಕಿನಲ್ಲಿ ನೀರು ಕುಡಿದು ವೇಗವಾಗಿ ನಮ್ಮ ತಲೆಯ ಮೇಲೆಯೇ ಹಾರಿ ಹೋದವು.

ದೂರದಲ್ಲಿ ನವಿಲುಗಳ ಕೇಕೆ ಕೇಳಿಬಂತು. ಹತ್ತಿರ ಹತ್ತಿರಕ್ಕೆ ಬರುತ್ತ ಅವು ಕೂಗುವುದನ್ನು ನಿಲ್ಲಿಸಿ ನೀರಿನ ಹತ್ತಿರಕ್ಕೆ ಹೋದವು. ಆ ಗುಂಪಿನಲ್ಲಿ ಒಂದು ಗಂಡು ಮತ್ತು ಐದು ಹೆಣ್ಣು ನವಿಲುಗಳಿದ್ದವು. ನೀರು ಕುಡಿದಾದ ಮೇಲೆ ಮರಳಿನ ಮೇಲೆ ಸ್ವಲ್ಪ ದೂರ ಬಂದಾಗ ಗಂಡು ನವಿಲಿಗೆ ಇದ್ದಕ್ಕಿದ್ದಂತೆ ತನ್ನ ಸುಂದರ ಗರಿಗಳನ್ನು ಪ್ರದರ್ಶಿಸುವ ಇಚ್ಛೆಯುಂಟಾಯಿತು. ಅದು ಮರಳಿನ ಮೇಲೆ ನಿಂತಿದ್ದರೂ ವಿಶಾಲವಾಗಿ ಹರಡಿದ ಅದರ ಗರಿಗಳು ಸಿಂಹಾಸನದಂತೆ ಸುಂದರವಾಗಿ ಕಂಗೊಳಿಸಿದವು. ಅದು ತನ್ನ ಅದ್ಭುತ ಸೌಂದರ್ಯವನ್ನು ಪ್ರದರ್ಶಿಸುವಾಗ ಉಳಿದ ನವಿಲುಗಳು ಮೆಚ್ಚುಗೆಯ ನೋಟದಿಂದ ಅದನ್ನು ವೀಕ್ಷಿಸುತ್ತಿದ್ದವು.

ಸ್ವಲ್ಪ ಹೊತ್ತಿನ ನಂತರ ನವಿಲು ತನ್ನ ರೆಕ್ಕೆಗಳನ್ನು ಮಡಿಸಿ ಪರಿವಾರದೊಡನೆ ಹತ್ತಿರದ ಮರವನ್ನೇರಿ ಅರಣ್ಯದ ಪ್ರಾಣಿವರ್ಗಕ್ಕೆಲ್ಲ ರಾತ್ರಿಯ ಶುಭಹಾರೈಕೆಯನ್ನು ಹೇಳುವಂತೆ ಕೇಕೆ ಹಾಕಿದವು. ಅವು ನೀರಿಗಾಗಿ ಬಂದ ಪಕ್ಷಿಗಳ ಕಡೆಯ ಗುಂಪು. ನಂತರ ಸ್ವಲ್ಪ ಹೊತ್ತು ಗಂಭೀರವಾದ ನಿಶ್ಶಬ್ದ ಇಡೀ ಅರಣ್ಯವನ್ನು ಆವರಿಸಿತು. ಈ ಸಣ್ಣ ಪುಟ್ಟ ಪಕ್ಷಿಗಳ ಆಗಮನ ಮತ್ತು ನಿರ್ಗಮನಗಳು ಮುಂದೆ ಬರಲಿದ್ದ ಗಂಭೀರ ವಾತಾವರಣಕ್ಕೆ ಸೌಮ್ಯರೂಪದ ಮುನ್ನುಡಿಯಾಗಿದ್ದವು.

ಒಂದು ಜೋಡಿ ನರಿಗಳು ಪೊದೆಯಿಂದ ಹೊರಬಂದವು. ಒಂದು ಕ್ಷಣ ಅವು ನೀರಿನ ಬಳಿ ನಿಂತು ಎದುರು ದಡದತ್ತ ತಲೆಯೆತ್ತಿ ನೋಡುತ್ತ ಗಾಳಿಯ ವಾಸನೆಯನ್ನು ಹಿಡಿಯುತ್ತ ನಿಂತವು. ಅವು ಬಿಸಿಲಿನ ಬೇಗೆಯಿಂದ ತ್ವರಿತಗತಿಯಲ್ಲಿ ಉಸಿರಾಡುತ್ತ ನಾಲಗೆಯನ್ನು ಜೋತು ಬಿಟ್ಟಿದ್ದವು. ಎಚ್ಚರಿಕೆಯಿಂದ ನೀರನ್ನು ಸಮೀಪಿಸಿ ನಾಯಿಯಂತೆ ಲೊಚಗುಟ್ಟುತ್ತ ಕುಡಿದವು. ರಾತ್ರಿ ಅವು ಬೇಟೆಗೆ ಹೋಗಬೇಕಾದ್ದರಿಂದ ಹೆಚ್ಚಿಗೆ ನೀರನ್ನು ಕುಡಿಯಲಿಲ್ಲ. ನಂತರ ಅವು ನದಿಯ ಮರಳಿನ ಮೇಲೆ ನಮ್ಮ ಸೇತುವೆಯ ಕೆಳಗೆ ನಿಧಾನವಾಗಿ ಹಾದು ಹೋದವು.

ನಂತರ ಒಂದು ಕಡವೆ ಬಂತು. ಅದು ಸಾವಧಾನವಾಗಿ ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತ ಅಪಾಯ ಸನ್ನಿಹಿತವಾದರೆ ಉಳಿದ ಪ್ರಾಣಿವರ್ಗಕ್ಕೆ ಎಚ್ಚರಿಕೆ ನೀಡಲು ಸಿದ್ಧವಾಗಿ ನೀರನ್ನು ಸಮೀಪಿಸಿತು. ಸುತ್ತಲೂ ಯಾವ ಅಪಾಯದ ಸೂಚನೆಗಳೂ ಕಂಡು ಬಾರದ್ದರಿಂದ ಸಾವಧಾನವಾಗಿ ನೀರನ್ನು ಕುಡಿಯಿತು. ಆಗಲೂ ಮಧ್ಯೆ ಮಧ್ಯೆ ತಲೆ ಎತ್ತಿ ಸುತ್ತಲೂ ನೋಡುತ್ತ ಎಲ್ಲವೂ ಸರಿಯಾಗಿದೆ ಎಂಬುದನ್ನು ದೃಢಪಡಿಸಿಕೊಳ್ಳುತ್ತಿತ್ತು. ದಾಹ ಅಡಗಿಸಿಕೊಂಡ ಮೇಲೆ ಬಂದ ದಾರಿಯಿಂದಲೇ ನಿಧಾನವಾಗಿ ಅದು ಮರೆಯಾಯಿತು.

ಬಹಳ ಹೊತ್ತು ದಡದ ಉದ್ದಕ್ಕೂ ದೂರದರ್ಶಕದಿಂದ ನೋಡುತ್ತಿರುವಾಗ ಪೊದೆಗಳ ನಡುವಿನಿಂದ ಕಪ್ಪು ತಲೆಯೊಂದು ಹೊರಗೆ ಇಣುಕಿ ಹಾಕಿತು. ಅದು ಒಂಟಿ ಕಿರುಬ. ನಿಧಾನವಾಗಿ ಕೆಳಗಿಳಿಯಿತು. ಮುಂದಿನ ಕಾಲುಗಳಿಗಿಂತ ಹಿಂದಿನವು ಚಿಕ್ಕದಾಗಿರುವುದರಿಂದ ಕಿರುಬನ ನಡಿಗೆಯ ಶೈಲಿ ವಿಚಿತ್ರವಾಗಿರುತ್ತದೆ. ಪಾರ್ಶ್ವವಾಯು ಬಡಿದಂತೆ ಒಂದು ರೀತಿಯಲ್ಲಿ ತೆವಳುತ್ತ ನಡೆಯುವ ಈ ಮೃಗ ರಾತ್ರಿ ಹಲವಾರು ಮೈಲಿಗಳಷ್ಟು ದೂರ ನಿರಾಯಾಸವಾಗಿ ಸಂಚರಿಸಬಲ್ಲದು. ನೀರು ಕುಡಿದಾದ ಮೇಲೆ ಅದು ಬೇಟೆಯನ್ನು ಹುಡುಕಿಕೊಂಡು ಹೋಯಿತು.

ಅತಿ ಎಚ್ಚರಿಕೆಯಿಂದ ಮುಂದುವರೆಯುತ್ತ ಅಲ್ಲಲ್ಲಿ ನಿಂತು ಸುತ್ತಲಿನ ಪೊದೆಗಳನ್ನು ವೀಕ್ಷಿಸುತ್ತ ಚುಕ್ಕೆ ಜಿಂಕೆಗಳ ಹಿಂಡೊಂದು ಬಂತು. ಆ ಗುಂಪಿನಲ್ಲಿ ಒಂದು ಗಂಡು ಐದು ಹೆಣ್ಣು ಹಾಗೂ ಎರಡು ಮರಿಗಳಿದ್ದವು. ತೀರ ಉದ್ವೇಗದಲ್ಲಿದ್ದು ಅಪಾಯದ ವಾಸನೆ ಬಂದ ಕೂಡಲೇ

ಮಿಂಚಿನಂತೆ ಹಾರಿ ಪಾರಾಗಲು ಸಿದ್ಧವಾಗಿದ್ದಂತೆ ಅವು ಕಂಡು ಬಂದವು. ನೀರಿನಿಂದ ನಾಲ್ಕೈದು ಗಜ ದೂರದಲ್ಲಿ ಅವು ನಿಶ್ಚಲವಾಗಿ ತಲೆಯೆತ್ತಿ ನಿಂತಿದ್ದವು. ಇದ್ದಕ್ಕಿದ್ದಂತೆ ಮಿಂಚಿನಂತೆ ಅವು ಹಾರಿ ಕಣ್ಮರೆಯಾದವು.

ಕೆಲವೇ ಕ್ಷಣಗಳಲ್ಲಿ ಅವುಗಳ ಪಲಾಯನದ ಕಾರಣ ಹೊರಬಿತ್ತು. ಚಿರತೆಯೊಂದು ಅವುಗಳಿಗಾಗಿ ಹೊಂಚು ಹಾಕುತ್ತಿತ್ತು. ಆದರೆ ಈ ತೀಕ್ಷ್ಣ ಬುದ್ಧಿಯ ಜಿಂಕೆಗಳು ಅದನ್ನು ಕಂಡು ಬಿಟ್ಟಿದ್ದವು. ನಿರಾಶೆಯಿಂದ ಚಿರತೆ ಪೊದೆಯಿಂದ ಹೊರಬಂದು ಚುಕ್ಕೆಗಳಿಂದಾವೃತವಾದ ತನ್ನ ಸುಂದರ ದೇಹವನ್ನು ಪ್ರದರ್ಶಿಸಿತು. ಭಾರತದ ಎಲ್ಲ ಮಾಂಸಾಹಾರಿ ಪ್ರಾಣಿಗಳಲ್ಲಿ ಚಿರತೆ ಅತಿ ಸುಂದರವಾದದ್ದು ಎಂಬುದರಲ್ಲಿ ಸಂಶಯವಿಲ್ಲ. ಹೀಗೆ ಮರೆಯಲ್ಲಿ ಕುಳಿತಿರುವಾಗ ಬಹಳಷ್ಟು ಕಾಲ ಅದರ ಸೌಂದರ್ಯವನ್ನು ವೀಕ್ಷಿಸುತ್ತ ಇರಬಹುದು. ಹುಲಿಯ ಚರ್ಮಕ್ಕಿಂತ ಚಿರತೆಯ ಚರ್ಮ ಆಕರ್ಷಣೀಯವಾಗಿರುತ್ತದೆ.

ಈ ಚಿರತೆ ಗಾತ್ರದಲ್ಲಿ ದೊಡ್ಡದು. ತನ್ನ ದೊಡ್ಡ ಬೇಟೆಯಾದ ಜಿಂಕೆಗಳು ಹಾರಿ ಹೋದೆಡೆ ಒಂದು ಕ್ಷಣ ಅದು ದಿಟ್ಟಿಸುತ್ತಿತ್ತು. ಅದರ ಮುಖದಲ್ಲಿ ತಾತ್ಕಾಲಿಕ ನಿರಾಶೆಯಿದ್ದರೂ ನಂತರ ಅದನ್ನು ಸಾಧಿಸುವ ನಿರ್ಧಾರದಿಂದ ಕೂಡಿತ್ತು. ನೀರು ಕುಡಿದಾದ ಮೇಲೆ ಜಿಂಕೆಗಳು ಹೋದ ದಿಕ್ಕಿಗೆ ಅದು ತನ್ನ ಅನ್ವೇಷಣೆಯನ್ನು ಮುಂದುವರೆಸುತ್ತ ನಿಧಾನವಾಗಿ ಮರೆಯಾಯಿತು.

ಚಿರತೆಯನ್ನು ಕುರಿತು ನಾವು ಯೋಚಿಸುತ್ತಿರುವಂತೆಯೇ ಪೊದೆಗಳಿಂದ ದೊಡ್ಡ ಕಾಡು ಹಂದಿಯೊಂದು ಹೊರಬಂತು. ಅದರ ದೈತ್ಯಾಕಾರವನ್ನು ಕಂಡು ನಾವು ಆಶ್ಚರ್ಯ ಚಕಿತರಾದೆವು. ಅದು ಎತ್ತರಕ್ಕೆ ಕಟ್ಟುಮಸ್ತಾಗಿ ಬೆಳೆದಿತ್ತು. ಅದರ ದಪ್ಪ ಕುತ್ತಿಗೆ ಬಾಗಿದ ಭಯಂಕರ ಕೋರೆ ಹಲ್ಲುಗಳು ಅದಕ್ಕೆ ಭಯಾನಕ ರೂಪವನ್ನು ಕೊಟ್ಟಿದ್ದವು. ಅದು ಯಾವ ಅಂಜಿಕೆಯೂ ಇಲ್ಲದೆ ನೇರವಾಗಿ ನೀರಿನಲ್ಲಿ ಇಳಿದು ದಣಿವಾರುವ ತನಕ ನೀರನ್ನು ಕುಡಿಯುತ್ತ ಬಿಸಿಲಿನ ಬೇಗೆಯಿಂದ ಉರಿಯುತ್ತಿದ್ದ ಮೈಯನ್ನು ನೀರಿನಲ್ಲಿ ತಂಪು ಮಾಡಿಕೊಳ್ಳುತ್ತ ಕುಳಿತುಕೊಂಡಿತು. ತನ್ನ ದೈತ್ಯಶಕ್ತಿ ಮತ್ತು ಅಪಾಯಕಾರಿ ಕೋರೆ ಹಲ್ಲುಗಳಿಂದಾಗಿ ಅದಕ್ಕೆ ಒಂದು ರೀತಿಯ ನಿಶ್ಚಿಂತೆ ಆವರಿಸಿತ್ತು. ಇಡೀ ಕೊಳವೇ ತನ್ನದು ಎಂಬಂತೆ ಅದು ನಿಶ್ಚಲವಾಗಿ ಕುಳಿತಿತ್ತು. ನೀರು ಕುಡಿದಾದ ಮೇಲೆ ಹೊರ ಬಂದು ಹಳ್ಳದ ಮಧ್ಯದ ಮರಳಿನಲ್ಲಿ ಸಂತೃಪ್ತಿಯಿಂದ ಹೊರಳಾಡಿತು. ಅದಕ್ಕೆ ಹೊಸ ಹುರುಪು ಮತ್ತು ಚೈತನ್ಯ ಬಂದ ಹಾಗಿತ್ತು. ಹಾಗೇ ಸ್ವಲ್ಪ ಹೊರಳಾಡಿತು. ಇದ್ದಕ್ಕಿದ್ದಂತೆ ಅದರ ಮೈಯಲ್ಲಿ ವಿದ್ಯುತ್ ಪ್ರವಹಿಸಿದಂತೆ ನಿಮಿರಿ ನಿಂತು ಎದುರಿನ ಪೊದೆಗಳತ್ತ ದಿಟ್ಟಿಸಿ ನೋಡುತ್ತ ಅಲುಗಾಡದೆ ನಿಂತಿತು.

ಕೆಲವು ಕ್ಷಣಗಳ ನಂತರ ಆ ಪೊದೆಯಿಂದ ಹುಲಿಯ ತಲೆಯೊಂದು ಇಣುಕು ಹಾಕಿತು. ಆದರೆ ಬಾಯಾರಿಕೆಯನ್ನು ಪರಿಹರಿಸಿಕೊಳ್ಳಲು ಇಲ್ಲಿ ಅದಕ್ಕೊಂದು ಅಡ್ಡಿಯಿತ್ತು. ತಲೆಯನ್ನು ಹಿಂದಕ್ಕೆ ಳೆದುಕೊಂಡು ಪೊದೆಗಳಿಂದ ಮರೆಯಾದರೂ ಐದಾರು ಗಜಗಳ ಕೆಳಗೆ ಮತ್ತೆ ಪೊದೆಗಳಿಂದ ಹೊರಬಂದಿತು. ಪೊದೆಗಳಲ್ಲಿ ಅದರ ಚಲನೆಯನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದಾಗಿತ್ತು. ಏಕೆಂದರೆ ಹಂದಿ ಹುಲಿಯ ಚಲನೆಯನ್ನೆ ನೋಡುತ್ತ ಅತ್ತ ಕಡೆ ತಿರುಗುತ್ತಿತ್ತು. ಹುಲಿ ತನ್ನ ಎದುರಿನ ಶತ್ರುವನ್ನು ತೀರ ಉದಾಸೀನ ಮಾಡುವಂತಿರಲಿಲ್ಲ. ಕಾಡು ಹಂದಿ ಮತ್ತಷ್ಟು ದೃಢವಾಗಿ ನಿಂತಿತು.

ಹುಲಿ ನಿಧಾನವಾಗಿ ಮರಳಿನ ಮೇಲೆ ನಡೆಯುತ್ತ ಹಂದಿಯ ಚಲನೆಯನ್ನು ಗಮನಿಸುತ್ತ ಗಸ್ತು ಹಾಕಲು ಪ್ರಾರಂಭಿಸಿತು. ಹೀಗೆ ಸ್ವಲ್ಪ ಕಾಲ ಸುತ್ತು ಹಾಕಿದ ನಂತರ ಇದ್ದಕ್ಕಿದ್ದಂತೆ ಹುಲಿ ಘರ್ಜಿಸಿ ಮೇಲೆ ಹಾರಿತು. ಅದು ಬಲವಾಗಿ





ಹಂದಿಯನ್ನು ಹೊಡೆದು ಚತುರತೆಯಿಂದ ಪಕ್ಕಕ್ಕೆ ಹಾರಿ ತಪ್ಪಿಸಿಕೊಂಡಿತು. ಆದರೆ ಹಂದಿ ಅಷ್ಟೇ ಚುರುಕಾಗಿ ಪಕ್ಕಕ್ಕೆ ಜರುಗಿ ಏಟು ಭುಜಕ್ಕೆ ಬೀಳುವಂತೆ ಮಾಡಿಕೊಂಡು ಪ್ರಾಣಾಪಾಯದಿಂದ ಪಾರಾಯಿತು.

ಹೀಗೆ ಹುಲಿ ಹಲವಾರು ಬಾರಿ ಮತ್ತೆ ಮತ್ತೆ ಹಂದಿಯ ಮೇಲೆ ಆಕ್ರಮಣ ಮಾಡಿ ಅದನ್ನು ಮತ್ತಷ್ಟು ಘಾಸಿಗೊಳಿಸಿದರೂ ಅದು ಹಂದಿಯ ಆಕ್ರಮಣಕ್ಕೆ ಅವಕಾಶ ಕೊಡಲಿಲ್ಲ. ಅದರ ಪಂಜದ ಹೊಡೆತಗಳು ಮಾರಕವಾಗಿದ್ದವೆಂದು ಹಂದಿಯ ಭುಜದಿಂದ ಧಾರಾಕಾರವಾಗಿ ಹರಿಯುತ್ತಿದ್ದ ರಕ್ತ ತೋರಿಸುತ್ತಿತ್ತು. ಹಂದಿ ಆಕ್ರಮಣ ಮಾಡುವ ಸ್ವಲ್ಪ ಲಕ್ಷಣಗಳು ಕಂಡು ಬಂದರೂ ಹುಲಿ ಹಿಂದಕ್ಕೆ ಸರಿದು ಅಪಾಯದ ವಲಯದಿಂದ ದೂರವಾಗುತ್ತಿತ್ತು. ಚುರುಕುತನದಿಂದಾಗಿ ಹುಲಿಯದೇ ಕಾಳಗದಲ್ಲಿ ಮೇಲುಗೈಯಾಗಿತ್ತು. ಆಕ್ರಮಣ, ಪಂಜದ ಹೊಡೆತ, ಹಾರಿ ತಪ್ಪಿಸಿಕೊಳ್ಳುವುದು ಇವುಗಳನ್ನೆ ಅದು ಜಯ ಸಾಧಿಸಲು ಉಪಯೋಗಿಸುತ್ತಿದ್ದುದು. ಆದರೂ ಈ ಹೊಡೆತಗಳು ಮತ್ತು ರಕ್ತಧಾರೆಯಿಂದ ಹಂದಿಗೆ ಕಿಂಚಿತ್ ಭಯವೂ ಆದಂತೆ ಕಾಣಲಿಲ್ಲ. ಬದಲಾಗಿ ಅದು ಮತ್ತಷ್ಟು ನಿಮಿರಿ ವೈರಿಯ ಚಲನವಲನವನ್ನು ಪರೀಕ್ಷಿಸುತ್ತ ನಿಂತಿತು.

ಈ ಹೋರಾಟ ಯಾವುದಾದರೂ ಒಂದು ಪ್ರಾಣಿಯ ಅಂತ್ಯದವರೆಗೆ ನಡೆಯುವುದು ನಿಶ್ಚಿತವಾಗಿತ್ತು. ಆದರೆ ಎಷ್ಟು ಕಾಲ ಅದು ಮುಂದುವರೆಯುತ್ತದೆ ಎಂದು ಹೇಳಲಾಗಲಿಲ್ಲ. ಹುಲಿಯಾಗಲೀ ಹಂದಿಯಾಗಲೀ ಸುಸ್ತಾದಂತೆ ಕಂಡು ಬರಲಿಲ್ಲ. ಹುಲಿ ತನ್ನ ಚುರುಕುತನದಿಂದ ಸುರಕ್ಷಿತವಾಗಿತ್ತು. ಹಂದಿ ಮತ್ತಷ್ಟು ರಕ್ತಸ್ರಾವದಿಂದ ಕಡೆಗೆ ಹುಲಿಗೆ ಒಳ್ಳೆಯ ಆಹಾರವಾಗುವದೆಂದು ನಮಗೆ ಅರಿವಾಯಿತು.

ಈ ಯೋಚನೆಗಳಲ್ಲಿ ನಾವಿದ್ದಾಗ ಅನಿರೀಕ್ಷಿತವಾದ ಘಟನೆಯೊಂದು ನಡೆದುಹೋಯಿತು. ಹುಲಿ ಹಾರಿ ಪಂಜದಿಂದ ಹೊಡೆದು ನೆಗೆದು ತಪ್ಪಿಸಿಕೊಳ್ಳುವಾಗ ಸಮತೋಲ ತಪ್ಪಿಯೋ ಅಥವಾ ಜಾರಿಯೋ ಮರಳಿನಲ್ಲಿದೊಪ್ಪನೆ ಬಿದ್ದಿತು. ತನಗೆ ಸಿಕ್ಕಿದ ಅವಕಾಶವನ್ನು ಕಳೆದುಕೊಳ್ಳದೆ ಹಂದಿ ಮಿಂಚಿನಂತೆ ನೇರವಾಗಿ ಹುಲಿಯತ್ತ ನುಗ್ಗಿ ಅದರ ಮೇಲೆ ಕುಳಿತು ತನ್ನ ಭಯಂಕರ ಕೋರೆ ಹಲ್ಲುಗಳಿಂದ ಹುಲಿಯ ಹೊಟ್ಟೆಯನ್ನು ತಿವಿದು ತಿವಿದು ಬಗೆದು ಹಾಕಿತು. ಅದರ ದೈತ್ಯ ಭಾರ ಮತ್ತು ಅಮಾನುಷ ಶಕ್ತಿಗಳು ಅದಕ್ಕೆ ಅನುಕೂಲವಾಗಿದ್ದವು.

ವಿಪರೀತ ಪ್ರಯಾಸದಿಂದ ಹುಲಿ ಹಂದಿಯ ಹಿಡಿತದಿಂದ ಬಿಡಿಸಿಕೊಂಡು ಸ್ವಲ್ಪ ದೂರಕ್ಕೆ ಬಂದಿತು. ಹಂದಿಯೂ ದೂರ ನಿಂತರೂ ಮುಂದಿನ ಆಕ್ರಮಣವನ್ನು ಎದುರು ನೋಡುತ್ತ ಜಾಗರೂಕವಾಗಿತ್ತು. ಆದರೆ ಆಕ್ರಮಣ ನಡೆಯಲಿಲ್ಲ! ಭೀಭತ್ಸವಾಗಿ ಗಾಯಗೊಂಡ ಹುಲಿಯ ದೊಡ್ಡ ಕರುಳು ಮುಂತಾದ ಭಾಗಗಳು ಸೀಳಿಹೋಗಿ ಹೊಟ್ಟೆಯ ಕೆಳಗೆ ನೇತಾಡುತ್ತಿತ್ತು. ಅದು ನಿಧಾನವಾಗಿ ದಡವನ್ನೇರಿ ಹೊರ ಬಂದ ತನ್ನ ಕರುಳಿನ ದಾರವನ್ನೆಳೆಯುತ್ತ ಪೊದೆಗಳ ನಡುವೆ ಮರೆಯಾಯಿತು.

ದೀರ್ಘವಾಗಿ ಉಸಿರನ್ನೆಳೆಯುತ್ತ ರಕ್ತ ಸುರಿಸುತ್ತಿದ್ದ ದೈತ್ಯ ಹಂದಿ ತನ್ನ ಶತ್ರು ಮರೆಯಾದ ಕಡೆಗೆ ನೋಡುತ್ತ ಬಂಡೆಯಂತೆ ನಿಂತಿತ್ತು. ಮತ್ತೆ ಆಕ್ರಮಣದ ಸೂಚನೆ ಕಂಡುಬರದ್ದರಿಂದ ಅದು ಹೋರಾಟ ನಡೆದ ಮರಳಿನ ಮೇಲೆಯೆ ಚೆನ್ನಾಗಿ ಹೊರಳಾಡಿ ಎದ್ದು ಮೈಯನ್ನು ಬಲವಾಗಿ ಕೊಡವಿಕೊಂಡು ಎದುರು ದಡವನ್ನೇರಿ ದಟ್ಟವಾದ

ಪೊದೆಗಳಲ್ಲಿ ಮಸುಕುಮಸುಕಾಗುತ್ತಿದ್ದ ಕತ್ತಲಲ್ಲಿ ಮರೆಯಾಯಿತು.

ಕದನದಲ್ಲಿ ಗೆಲುವು ಯಾರದೆಂಬುದರಲ್ಲಿ ಅನುಮಾನವಿರಲಿಲ್ಲ. ದುರದೃಷ್ಟದಿಂದ ಹುಲಿ ಜಾರಿ ಬಿದ್ದಕೂಡಲೆ ಮಿಂಚಿನಂತೆ ಹಂದಿ ಅದರ ಮೇಲೆ ನುಗ್ಗಿ ಹೊಟ್ಟೆಯನ್ನು ಸೀಳಿ ಹಾಕಿದ ದೃಶ್ಯವನ್ನು ನಾವು ಮರೆಯುವಂತಿಲ್ಲ. ನಮ್ಮ ನಿರೀಕ್ಷೆಯಂತೆ ಜಯಶಾಲಿಯಾದ ಹಂದಿಯು ಗಾಯಗಳು ಸ್ವಲ್ಪ ಕಾಲದ ಮೇಲೆ ವಾಸಿಯಾದ ನಂತರ ಅದು ಎಂದಿನಂತೆ ಪೌರುಷದಿಂದ ಮತ್ತೆ ಅರಣ್ಯದಲ್ಲಿ ಸಂಚರಿಸಬಹುದಾಗಿತ್ತು.

ಸಂಜೆಯ ವಿಹಾರ ಅನಿರೀಕ್ಷಿತ ಕುತೂಹಲ ಮತ್ತು ಮೈ ನವಿರೇಳುವ ಘಟನೆಯಿಂದ ಮುಗಿಯಿತು. ನಾವು ಕೂತಿದ್ದ ಜಾಗದಿಂದೆದ್ದು ನಿಧಾನವಾಗಿ ಕತ್ತಲೆ ಜಾರುತ್ತಿದ್ದ ರೈಲ್ವೆ ಹಳಿಗಳ ಮೇಲೆ ನಡೆಯುತ್ತ ಶಿಬಿರದ ಕಡೆಗೆ ಹೆಜ್ಜೆ ಹಾಕಿದೆವು.

ಮರುದಿನ ಬೆಳಗ್ಗೆ ಎದ್ದ ಕೂಡಲೆ ನಮ್ಮ ಬಂದೂಕುಗಳನ್ನು ಹೆಗಲಿಗೇರಿಸಿ ಕೊಳದ ಹತ್ತಿರ ಹೋದೆವು. ಹುಲಿ ಹೋದ ಪೊದೆಗಳ ಜಾಡಿನಲ್ಲಿ ಎಚ್ಚರಿಕೆಯಿಂದ ನಿಂತು ಕತ್ತನ್ನು ನಿಮಿರಿಸಿ ನೋಡಿದೆವು. ಮುಳ್ಳುಗಳಿಂದಾವೃತವಾಗಿದ್ದ ಅದು ಬಹು ದೊಡ್ಡ ಪೊದೆಯಾಗಿತ್ತು. "ಅದೋ ಅಲ್ಲಿ ನೆಲದ ಮೇಲೆ ಬಿದ್ದಿದೆ" ಎಂದು ನನ್ನ ಮಿತ್ರರು ಪಿಸುಗುಟ್ಟಿದರು. ದೂರದಲ್ಲಿ ಪೊದೆಗಳ ಕೆಳಗೆ ಅದು ಮಲಗಿತ್ತು.

ಕಲ್ಲುಗಳು ಸಿಕ್ಕದ್ದರಿಂದ ಮಣ್ಣಿನ ಹೆಂಟೆಗಳನ್ನೆತ್ತಿ ಅದರತ್ತ ಎಸೆದೆವು. ಯಾವ ಚಲನೆಯೂ ಕಂಡು ಬರಲಿಲ್ಲ. ಮತ್ತಷ್ಟು ಹೆಂಟೆಗಳನ್ನೆಸೆದರೂ ಅದು ಕದಲಲಿಲ್ಲ. ಎಚ್ಚರಿಕೆಯಿಂದ ಅದನ್ನು ಸಮೀಪಿಸಿದಾಗ ಅದು ಸತ್ತು ಹಲವಾರು ಘಂಟೆಗಳಾಗಿತ್ತು.

ಪೊದೆಗಳಲ್ಲಿ ಅದು ನುಸುಳಿದ್ದರೂ ಸ್ವಲ್ಪ ದೂರ ಮಾತ್ರ ಅದು ಮುಂದುವರೆದಿತ್ತು. ಗುಲಾಬಿ ಗಿಡದ ಮುಳ್ಳಿಗಿಂತ ದೊಡ್ಡದಾದ ಪೊದೆಗಳ ನಡುವೆ ಅದರ ಉದ್ದನೆಯ ಕರುಳಿನ ಬಳಿ ಸಿಕ್ಕಿ ಹಾಕಿಕೊಂಡು ತಡೆದಿತ್ತು. ಹುಲಿ ಎಳೆದಷ್ಟು ಮುಳ್ಳಿನ ಹಿಡಿತ ಅಸಾಧ್ಯವಾಗಿ ಅದರ ಮರಣ ಯಾತನೆ ಅಸಾಧ್ಯವಾಗಿತ್ತು. ದಟ್ಟವಾದ ಪೊದೆಗಳ ನಡುವೆ ಅದು ನೆಲದ ಮೇಲೆ ಕುಸಿದು ಕಡೆಯುಸಿರೆಳೆದಿತ್ತು. ✿

ಮೂವರು ತಾಯಂದಿರು ಮೂವರು ಸುಪುತ್ರರಿಗೆ ಜನ್ಮವಿತ್ತರು.

ಒಬ್ಬ ತಾಯಿ, "ಮಗನೆ, ಲಕ್ಷಾಂತರ ಜನರ ಮನೆ ಬೆಳಕಾಗು" ಎಂದಳು.

ಇನ್ನೊಬ್ಬಾಕೆ ತನ್ನ ಮಗನಿಗೆ, "ನನ್ನ ಚಿನ್ನಾ ನಿನ್ನ ಮನೆತನದ ಹೆಸರನ್ನು ಅಜರಾಮರಗೊಳಿಸು" ಎಂದು ಹೇಳಿದಳು.

ಮತ್ತೊಬ್ಬಾಕೆ, "ನೋಡಪ್ಪಾ ಎಂಥ ಪ್ರಸಂಗದಲ್ಲೇ ಆಗಲಿ ನಿನ್ನ ಮಣ್ಣಿನ ಮಾನವನ್ನು ಕಾಪಾಡು" ಎಂದಳು.

ವರ್ಷಗಳುರುಳಿದವು.

ಮೂವರೂ ಬೆಳೆದ ದೊಡ್ಡವರಾಗಿದ್ದರು.

ಮೂವರಿಗೂ 'ತಾಯಿ ನುಡಿ' ನೆನಪಿನಲ್ಲಿತ್ತು.

ಮೊದಲನೆಯಾಕೆಯ ಮಗ ಲಕ್ಷಾಧೀಶನಾದ. ಲಕ್ಷಾಂತರ ಜನರ ಮನೆಗಳು ಬೆಳಗುವಂತೆ ಮಾಡಿದ. ಆದರೆ ಆ ಬೆಳಕನ್ನು ನೋಡಲು ಆ ಜನರಾರೂ ಉಳಿಯಲಿಲ್ಲ. ಸುಟ್ಟುಕೊಂಡು ಸತ್ತುಹೋಗಿದ್ದರು.

ಎರಡನೆಯಾಕೆಯ ಮಗ ಪೋಲಿಯಾದ. ಮನೆತನದ ಮರ್ಯಾದೆಯನ್ನು ಬೀದಿಗೆಳೆದು ಎಲ್ಲರ ಬಾಯಲ್ಲೂ, 'ಇಂಥವರ ಮಗ, ಹೀಗೆ ಮಾಡಿದ' ಎನ್ನುವ ಮಾತು ಬರುವಂತೆ ಮಾಡಿದ

ಆದರೆ ಮೂರನೆಯವನ ಮಾತ್ರ ಯೋಧನಾದ. ಅನೇಕ ಯುದ್ಧಗಳಲ್ಲಿ ಕಲಿತನದಿಂದ ಕಾದಿದ. ತಾನು ಹುಟ್ಟಿದ ಮಣ್ಣಿನ ಹಿಡಿಯನ್ನೂ ಇತರರ ಪಾಲಾಗದಂತೆ ರಕ್ಷಿಸಿದ.

— ಜ್ಯೋತಿರ್ಪ್ರಕಾಶರ 'ದಿಲ್‌ಕಿ ಗೆಹರಾಯಿ'ಯಿಂದ

# ರ್‍ಯಾಲಿ-ಕ್ಲಿಯರ್‌ಟೋನ್‌ನ 6 ಕೆಚ್ಚೆದೆಯ ಯೋದ್ಧರು

ಬಟ್ಟೆಗಳ ಮಡಿಕೆಗಳ ಶತ್ರು—

## ರ್‍ಯಾಲಿ ಕ್ಲಿಯರ್‌ಟೋನ್ ಇಸ್ತ್ರಿಪೆಟ್ಟಿಗೆಗಳು.




ಗೃಹೋಪಕರಣಗಳ ಕ್ಷೇತ್ರದಲ್ಲಿನ ಒಂದು ಹೊಸ, ಮಹಾನ್ ಜೋಡಿ ನಿಮಗೆ ಇಸ್ತ್ರಿಪೆಟ್ಟಿಗೆಗಳ ಹೊಸ ಶ್ರೇಣಿಯನ್ನೀಯುತ್ತದೆ—ರ್‍ಯಾಲಿ ಕ್ಲಿಯರ್‌ಟೋನ್. ಈ ಬ್ರಾಂಡ್‌ನಲ್ಲಿ ಕ್ಲಿಯರ್‌ಟೋನ್‌ನ ಉಚ್ಚ ಮಟ್ಟದ ಗುಣಗಳು ಮತ್ತು ರ್‍ಯಾಲೀಸ್‌ನ ವಿಶ್ವಾಸಾರ್ಹತೆ ಸಮ್ಮಿಲಿತವಾಗಿವೆ. ನೀವು ಈ ಇಸ್ತ್ರಿಪೆಟ್ಟಿಗೆಗಳ ಶ್ರೇಣಿಯಿಂದ ನಿಮಗೆ ಬೇಕಾದುದನ್ನು ಆಯ್ದು ಕೊಳ್ಳಿರಿ.
ಆರು ಉತ್ತಮ ಮಾಡೆಲುಗಳಿವೆ—ಇಷ್ಟವಾದುದನ್ನು ಕೊಳ್ಳಿರಿ:
ಆಟೊಮ್ಯಾಟಿಕ್—ಸೋವಾ. ಕ್ವೀನ್, ಇಂಪೀರಿಯಲ್.
ನಾನ್-ಆಟೊಮ್ಯಾಟಿಕ್—ಪಾಪ್ಯುಲರ್, ಸೀನಿಯರ್, ಡಿಲೈಟ್.

**ರ್‍ಯಾಲಿ ಕ್ಲಿಯರ್‌ಟೋನ್—ಹೊಸ ಜೋಡಿಯ ಕೆಲಸ ನೋಡಿ, ಅನುಪಮವು ಅದರ ಮೋಡಿ!**

## ಕೇರಳ ವಿಜ್ಞಾನ ಸಾಹಿತ್ಯ ಪರಿಷತ್ತಿನ ಸಾಧನೆ

# ಜನಸಾಮಾನ್ಯರಿಗೆ ವಿಜ್ಞಾನ

**ಟಿ. ಎಂ. ಸುಬ್ಬರಾಯ**

ಕೇರಳದ ಉತ್ತರದ ತುದಿ ಕಾಸರಗೋಡಿನ ಸಮೀಪದ ಹಳ್ಳಿಯೊಂದರಲ್ಲಿ ೧೯೭೭ರ ಅಕ್ಟೋಬರ್ ಎರಡನೆಯ ತಾರೀಕು ಸುಮಾರು ನಲವತ್ತು ಜನರ ಪುಟ್ಟ ಗುಂಪೊಂದು ಸೇರಿತ್ತು. ಆ ಗುಂಪಿನಲ್ಲಿ ವೈದ್ಯರಿದ್ದರು; ವಿಜ್ಞಾನಿಗಳಿದ್ದರು; ತಾಂತ್ರಿಕ ಪರಿಣತರಿದ್ದರು. ಆ ಗುಂಪು ಒಟ್ಟಾಗಿ ಒಂದು ಮಹತ್ವದ ನಿರ್ಣಯ ಕೈಗೊಂಡಿತು. ಪರಿಣಾಮವಾಗಿ ನಂತರದ ಮೂವತ್ತೇಳು ದಿನಗಳ ಮೇಲೆ 'ಸಮೂಹ ಜಾಥಾ' ಆರಂಭವಾಯಿತು. ಕೇರಳ ನಾಡಿನ ಉತ್ತರ ಭಾಗದಿಂದ ಹೊರಟ ಈ ಜಾಥಾ ಹಳ್ಳಿಗಳನ್ನು ಹಾಯ್ದು, ಸುಮಾರು ಹನ್ನೊಂದು ಸಾವಿರ ಕಿಲೋಮೀಟರ್ ಕ್ರಮಿಸಿ ದಕ್ಷಿಣ ತುದಿ ತಲುಪಿತು. ಸಾಗುವಾಗ ಸುಮಾರು ೮೫೦ ಸಭೆಗಳನ್ನು ನಡೆಸಿತು; ಸುಮಾರು ಐದು ಲಕ್ಷ ಮಂದಿಯನ್ನುದ್ದೇಶಿಸಿ ಉಪನ್ಯಾಸ ನೀಡಿತು. ಆ ಉಪನ್ಯಾಸಕ್ಕೆ ಆಯ್ದುಕೊಂಡಿದ್ದ ವಿಷಯಗಳು 'ಸಾಮಾಜಿಕ ಕ್ರಾಂತಿಗೆ ವಿಜ್ಞಾನ', 'ಕಾರ್ಮಿಕ ಶಕ್ತಿಯೇ ಮಹಾನ್ ಆಸ್ತಿ,' 'ಜನ ಸಾಮಾನ್ಯನ ಭಾಷೆಯಲ್ಲಿ ರಾಷ್ಟ್ರಪಳಿತ' ಇತ್ಯಾದಿ. ಈ ಅಪೂರ್ವ 'ಜೀಪ್ ಜಾಥಾ'ವನ್ನು ಸಂಘಟಿಸಿದ ಕೀರ್ತಿ ಕೇರಳ ಶಾಸ್ತ್ರ ಸಾಹಿತ್ಯ ಪರಿಷತ್ತಿನದು. ಹಾಗೆಂದು ಈ ಕಾರ್ಯಕ್ರಮ ತೀರಾ ಹೊಸದಾದದ್ದೇನೂ ಆಗಿರಲಿಲ್ಲ. ಇಷ್ಟು ಬೃಹತ್ ಪ್ರಮಾಣದಲ್ಲಿ ಅಧಿಕ ಸಂಖ್ಯೆಯ ಜನರ ಸಮಾವೇಶದೊಂದಿಗೆ ಈ ಹಿಂದಿನ ಕಾರ್ಯಕ್ರಮಗಳು ನಡೆದಿರಲಿಲ್ಲ ಅಷ್ಟೆ. ಮಲೆಯಾಳಿ ಭಾಷೆಯಲ್ಲಿ ಬರೆಯುವ ವೈಜ್ಞಾನಿಕ ಲೇಖಕರ ಸಂಘವೊಂದು ಈ ಪರಿಷತ್ತಿನ ವತಿಯಿಂದ ೧೯೬೨ರ ಹೊತ್ತಿಗೇ ಸಂಘಟಿಸಲ್ಪಟ್ಟು 'ಸಾಮಾಜಿಕ ಕ್ರಾಂತಿಗಾಗಿ ವಿಜ್ಞಾನ' ಎನ್ನುವ ವಿಚಾರವನ್ನು ಜನಪ್ರಿಯಗೊಳಿಸಲು ಪ್ರಯತ್ನಿಸಿತ್ತು. ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಹಬ್ಬಿದ್ದ 'ವಾಚನಾಲಯ ಜಾಗೃತಿ'ಯ ಪರಿಣಾಮವಾಗಿ ಹುಟ್ಟಿಕೊಂಡು ಕೇರಳ ಶಾಸ್ತ್ರ (ವಿಜ್ಞಾನ) ಸಾಹಿತ್ಯ ಪರಿಷತ್ತಿಗೆ ವಿಜ್ಞಾನ ಲೇಖಕರ ಸಂಘ ಸ್ಫೂರ್ತಿಯ ಸೆಲೆಯಾಯಿತು. ಹೊಸ ಸಂಗತಿ ಹೊಸ ವಿಚಾರಗಳ ಆವಿಷ್ಕಾರಕ್ಕೆ ಹಿನ್ನೆಲೆ ಒದಗಿಸಿತು. ಇದರ ಪ್ರೇರಣೆಯಿಂದ ವೈಜ್ಞಾನಿಕ ಕ್ಷೇತ್ರದ ಬರವಣಿಗೆಯನ್ನು ಜನಪ್ರಿಯಗೊಳಿಸುವಲ್ಲಿ ಪರಿಷತ್ತು ಆಸ್ಥೆ ತಾಳಿತು. ವಿಜ್ಞಾನ ಬರಹಗಾರರ ಬರಹಗಳನ್ನು ರಾಜ್ಯ ಭಾಷೆಯಲ್ಲಿ ಪ್ರಚಲಿತಗೊಳಿಸಿ ಆ ಮೂಲಕ ವಿಜ್ಞಾನ ಬರಹಗಳಿಗೆ ಪ್ರೋತ್ಸಾಹ ನೀಡಲು ಮುಂದಾಯಿತು. ಈ ಉದ್ದೇಶ ಕೈಗೂಡಲು ಸ್ವಂತ ಪ್ರಕಾಶನ ವ್ಯವಸ್ಥೆ ಆಗಬೇಕಿತ್ತು. ಯಾಕೆಂದರೆ ಅಸ್ತಿತ್ವದಲ್ಲಿದ್ದ ಪ್ರಕಾಶನ ಸಂಸ್ಥೆಗಳು ಈ ಕಾರ್ಯದಲ್ಲಿ ನೆರವು ನೀಡಲು ಸಿದ್ಧವಿರಲಿಲ್ಲ. ಆದ್ದರಿಂದ ಶಾಸ್ತ್ರ ಸಾಹಿತ್ಯ ಪರಿಷತ್ತು ೧೯೬೬ರಲ್ಲಿ ತನ್ನ ಸ್ವಂತ ಪ್ರಕಾಶನ ಆರಂಭಿಸಿತು. ಅದರ ವತಿಯಿಂದ 'ಶಾಸ್ತ್ರಗತಿ' ತ್ರೈಮಾಸಿಕ ಹೊರಬರಲಾರಂಭವಾಯಿತು. ಈ ಪತ್ರಿಕೆ ಸಂಪೂರ್ಣವಾಗಿ ವಿಜ್ಞಾನ ವಿಚಾರಕ್ಕೇ ಮೀಸಲಾಗಿತ್ತು. ಈ ಬಗೆಯ ಪತ್ರಿಕೆ

ಬದುಕುವುದೂ ಪ್ರಸಾರ ಸಾಧ್ಯತೆ ಹೆಚ್ಚಿಸಿಕೊಳ್ಳುವುದೂ ದುಷ್ಕರವಾಗಿದ್ದರೂ ಅದನ್ನು ಸಾಧಿಸಿದ್ದು ಮಾತ್ರವಲ್ಲದೆ ಪರಿಷತ್ತು ಮುಂದಿನ ವರುಷಗಳಲ್ಲಿ ಕೈ ಗೊಂಡ ವಿಜ್ಞಾನ ಸಂಘಟನೆಯಲ್ಲಿ ಮಹತ್ತರ ಪಾತ್ರ ವಹಿಸಿತು. ಕೆಲವು ತಿಂಗಳುಗಳ ನಂತರ ದ್ವೈಮಾಸಿಕವಾಗಿ ಪ್ರಕಟಣೆಗೊಳ್ಳತೊಡಗಿದ 'ಶಾಸ್ತ್ರಗತಿ' ನಂತರ ಮಾಸಿಕ ವಿಜ್ಞಾನ ಪತ್ರಿಕೆಯಾಗಿ ಹೊರಬರತೊಡಗಿತು.

ಇಂದು ಕೇರಳ ಶಾಸ್ತ್ರ ಸಾಹಿತ್ಯ ಪರಿಷತ್ತಿನಲ್ಲಿ ಮೂರು ಸಾವಿರ ಸಕ್ರಿಯ ಹಾಗೂ ಜೀವಾವಧಿಯ ಸದಸ್ಯರುಗಳಿದ್ದಾರೆ. ಸುಮಾರು ಅಷ್ಟೇ ಸಂಖ್ಯೆಯ ಸಂಘ–ಸಂಸ್ಥೆಗಳೂ ಗ್ರಾಮೀಣ ವಿಜ್ಞಾನ ಸಂಘಗಳೂ ಶಾಲಾ ವಿಜ್ಞಾನ ಸಂಘಗಳೂ ಕೆ. ಎಸ್. ಎಸ್. ಪಿ. ಯಿಂದ ಅನುದಾನ ಪಡೆದು ಅದರೊಂದಿಗೆ ಚಿರಂತನ ಬಾಂಧವ್ಯ ಬೆಳೆಸಿಕೊಂಡಿವೆ.

ಶಿಕ್ಷಕರು, ವೈದ್ಯರು, ಇಂಜಿನಿಯರರು, ಸಮಾಜ ಸೇವಾ ಕಾರ್ಯಕರ್ತರು, ಕೆಲಸಗಾರರು, ರೈತರು, ಪತ್ರಕರ್ತರು, ನಿರುದ್ಯೋಗಿ ಯುವಕರು ಹೀಗೆ ಹಲವು ರಂಗಗಳ ಜನ ಪರಿಷತ್ತಿನ ಈ ವೇದಿಕೆಯ ಉಪಯುಕ್ತತೆಯನ್ನು ಮನಗಂಡಿದ್ದಾರೆ. ಇವರೆಲ್ಲರಿಗಿಂತ ಮಿಗಿಲಾಗಿ ವಿದ್ಯಾರ್ಥಿಗಳು ಈ ಪರಿಷತ್ತಿನೊಂದಿಗೆ ನಿಕಟ ಸಂಪರ್ಕ ಬೆಳೆಸಿಕೊಂಡಿದೆ. ೧೯೭೩ರಲ್ಲಿ ಪರಿಷತ್ತು ಕೈಗೊಂಡ 'ಒಂದು ಸಾವಿರ ವಿಜ್ಞಾನ ಸಂಘಗಳ ಯೋಜನೆ'ಯೇ ಇದಕ್ಕೆ ಕಾರಣವಾದ ಅಂಶ. ಈ ಯೋಜನೆ ರೂಪುಗೊಂಡಾಗ ಇದೊಂದು ಪರಿಣಾಮಕಾರೀ ಯೋಜನೆಯಾದೀತೆಂಬ ನಂಬುಗೆ ಪರಿಷತ್ತಿಗೆ ಇರಲಿಲ್ಲ. ಆದರೆ ಅವರ ನಿರೀಕ್ಷೆಗೂ ಮೀರಿ ಅದು ಸಫಲಗೊಂಡಿತು. ಆ ವರ್ಷಾವಧಿಯಲ್ಲಿ ರಾಜ್ಯದ ನೂರಾರು ಶಾಲೆಗಳಲ್ಲಿ ವಿಜ್ಞಾನ ಸಂಘಗಳು ತಲೆ ಎತ್ತಿದವು. ಪರಿಷತ್ತಿನ ಧ್ಯೇಯೋದ್ದೇಶಗಳನ್ನು ತಿಳಿದುಕೊಂಡ ಶಾಲಾ ಶಿಕ್ಷಕರು ಪರಿಷತ್ತಿನೊಂದಿಗೆ ಸಂಬಂಧ ಬೆಳೆಸಿಕೊಂಡರು. ಆಸಕ್ತ ಪಾಲಕರೂ ಪರಿಷತ್ತು ನಡೆಸುವ ಚಟುವಟಿಕೆಗಳಲ್ಲಿ ಭಾಗ ವಹಿಸಿದರು. ತತ್ಪರಿಣಾಮವಾಗಿ ಶಾಲೆಗಳಲ್ಲಿ ಸೈನ್ಸ್ ಕಾರ್ನರ್‌ಗಳೂ ಹೈಸ್ಕೂಲ್‌ಗಳಲ್ಲಿ ವಿಜ್ಞಾನ ಸಂಘಗಳೂ ಕಾಲೇಜುಗಳಲ್ಲಿ ವಿಜ್ಞಾನ ವೇದಿಕೆಗಳೂ ಕೇರಳದಾದ್ಯಂತ ಜ್ಞಾನಪ್ರಸಾರದ ಕೇಂದ್ರಗಳೆನ್ನಿಸಿವೆ ಈಗಲೂ. ಬೆಳೆಯುತ್ತಿದ್ದ ವಿದ್ಯಾರ್ಥಿಗಳ ವಿಜ್ಞಾನದಾಹಕ್ಕೆ 'ವಿಜ್ಞಾನ ಗತಿ'ಯ ಆಹಾರ ಸಾಕಾಗಲಿಲ್ಲ. ಇದರಿಂದಾಗಿ ೧೯೬೯ರಲ್ಲಿ ಪರಿಷತ್ತು 'ವಿಜ್ಞಾನ ಕೇರಳ' ವನ್ನು ಹೊರಡಿಸತೊಡಗಿತು. ಜೊತೆಗೆ ವಿಜ್ಞಾನಕ್ಕೆ ಸಂಬಂಧಿಸಿದ ಪುಸ್ತಕ ಪ್ರಕಟಣೆಗೂ ಪರಿಷತ್ತು ಮುಂದಾಯಿತು. 'ವಿಜ್ಞಾನ ಕೇರಳ'ಕ್ಕಿಂತ ಸರಳವಾಗಿ ಪ್ರಾಥಮಿಕ ಶಾಲಾ ಮಕ್ಕಳಿಗೆ ಸುಲಭವಾಗಿ ಅರ್ಥವಾಗುವಂತೆ ಇರುವ ಒಂದು ಪತ್ರಿಕೆಯ ಅಗತ್ಯವನ್ನು ಕುರಿತು ಪರಿಷತ್ತಿನ ಧುರೀಣರು ಯೋಚಿಸಿದ್ದರ ಫಲವಾಗಿ ೧೯೭೦ರಲ್ಲಿ ಮಕ್ಕಳ ವಿಜ್ಞಾನ ಪತ್ರಿಕೆ 'ಯುರೇಕಾ' ಹೊರಬಂತು. ಆರಂಭದ ಅವಧಿಯಲ್ಲಿಯೇ ೪೫,೦೦೦ ಪ್ರತಿಗಳು ಮಾರಾಟವಾಗಿ ಒಂದು ದಾಖಲೆ ಆಯಿತು. ಪರಿಷತ್ತಿನ ವತಿಯಿಂದ ಹೊರಡುತ್ತಿದ್ದ ಉಳಿದೆಲ್ಲಾ ವಿಜ್ಞಾನಕ್ಕೆ ಸಂಬಂಧಿಸಿದ ಪತ್ರಿಕೆಗಳ ಪ್ರಸಾರ ಸಂಖ್ಯೆಯನ್ನೂ ಇದು ಹಿಂದೆ ಹಾಕಿದೆ.

ಹಾಗೆಂದು 'ಯುರೇಕಾ' ವಿಜ್ಞಾನಕ್ಕೆ ಸಂಬಂಧಿಸಿದ ಕೊನೆಯ ಪತ್ರಿಕೆಯೇನೂ ಆಗಲಿಲ್ಲ. ೧೯೭೭ರಲ್ಲಿ ಪರಿಷತ್ತು ಒಂಬತ್ತು ವರ್ಷದ ಏಳಿಯರಿಗಾಗಿ ಗೋಡೆಗಳಿಗೆ ಅಂಟಿಸಬಹುದಾದ ೯೦ × ೫೮ ಸೆಂಟಿಮೀಟರ್ ಅಳತೆಯ ದೊಡ್ಡ ಪ್ರಮಾಣದ 'ಬಾಲ ವಿಜ್ಞಾನ' ಎನ್ನುವ ವಿಜ್ಞಾನ ಚಿತ್ರಲೇಖನಗಳ ಪ್ರಕಟಣೆ ಆರಂಭಿಸಿತು. ಸಂಪೂರ್ಣ ವರ್ಣರಂಜಿತ ಚಿತ್ರ ಲೇಖನಗಳಿಂದ ಕೂಡಿದ ಈ ಬಾಲ ವಿಜ್ಞಾನ ವರುಷದಲ್ಲಿ ಎರಡು ಬಾರಿ ಮುಖ್ಯವಾಗಿ ಶಾಲೆ ತೆರೆದಿರುವ ಕಾಲದಲ್ಲಿಯೇ ಪ್ರಕಟವಾಗುತ್ತಿದೆ. ಮಕ್ಕಳಲ್ಲಿ ವಿಜ್ಞಾನ ಕುರಿತಂತೆ ಆಸಕ್ತಿ ಹೆಚ್ಚುತ್ತಿರುವುದನ್ನು ಗಮನಿಸಿದ ಸಾಹಿತ್ಯ ವಿಜ್ಞಾನ ಪರಿಷತ್ತು ಇನ್ನೊಂದು ದಿಟ್ಟ ಕಾರ್ಯಕ್ರಮ ಕೈಗೊಂಡಿತು. ಅದು ವಿಜ್ಞಾನ ಪರೀಕ್ಷೆಗಳು. 'ವಿಜ್ಞಾನ ಸ್ಪರ್ಧೆ' ಎಂದೇ ಖ್ಯಾತವಾಗಿರುವ ಇವು ಮೂರು ಹಂತಗಳಲ್ಲಿ ನಡೆಯುತ್ತವೆ. ಪ್ರಾಥಮಿಕ, ಪ್ರೌಢ ಶಾಲೆಗಳ ಹಾಗೂ ಕಾಲೇಜು ವಿದ್ಯಾರ್ಥಿಗಳ ಮಟ್ಟದಲ್ಲಿ ಪ್ರತ್ಯೇಕವಾಗಿ ಸ್ಪರ್ಧೆಗಳನ್ನು ನಡೆಸಲಾಗುತ್ತದೆ. ವಿಜೇತರಾದವರಿಗೆ ಪರ್ಯಾಯ ಫಲಕ, ಪಾರಿತೋಷಕ ಹಾಗೂ ವಿದ್ಯಾರ್ಥಿ ವೇತನ

ಗಳನ್ನೂ ನೀಡಲಾಗುತ್ತದೆ. ಕೇವಲ ವಿದ್ಯಾರ್ಥಿಗಳಿಗೆ ವಿಜ್ಞಾನದ ಬಗ್ಗೆ ಆಸಕ್ತಿ ಕುದುರಿಸಿ ವಿಜ್ಞಾನಾರ್ಜನೆಗೆ ಅವಕಾಶ ಮಾಡಿಕೊಡುವುದಷ್ಟೇ ಪರಿಷತ್ತಿನ ಸೀಮಿತ ಉದ್ದೇಶವಾಗಿಲ್ಲ. ಸಮಾಜದ ವಿವಿಧ ಘಟಕಗಳ ಜೊತೆ ಅದು ಸಂಬಂಧ ಕುದುರಿಸಿಕೊಂಡಿದೆ. ಜನಸಾಮಾನ್ಯರಿಗೂ ವಿಜ್ಞಾನ ವಿವರ ತಲುಪಲು ಯತ್ನ ನಡೆಸಿದೆ. ರಾಜ್ಯದಾದ್ಯಂತ ಆಗಾಗ ವಿಜ್ಞಾನ ಶಿಬಿರ ನಡೆಸಿ ಪರಿಣತರಿಂದ ಉಪನ್ಯಾಸ-ಚರ್ಚೆ ನಡೆಸಿ, ಜ್ಞಾನದಾಸೋಹ ಏರ್ಪಡಿಸುತ್ತಿವೆ. ವಾರದ ಸಂತೆಗಳು ನಡೆಯುವಲ್ಲಿ, ಬೀದಿಗಳಲ್ಲಿ, ಪ್ರಮುಖ ಮೂಲೆಗಳಲ್ಲಿ, ವಾಚನಾಲಯಗಳಲ್ಲಿ ಈ ಬಗೆಯ ಶಿಬಿರ ದಿಢೀರನೆ ಸಂಘಟಿಸಲ್ಪಟ್ಟು ಜನರನ್ನು ಸೆಳೆಯುತ್ತವೆ. ಇದರಿಂದ ಜನ ಆಕರ್ಷಿತರಾಗಿದ್ದಾರೆ. ಪರಿಣಾಮವಾಗಿ, ಜನರೊಂದಿಗೆ ಪರಿಷತ್ತು ನಿಕಟ ಸಂಬಂಧ ಸಾಧಿಸಿಕೊಳ್ಳಲು ಸಾಧ್ಯವಾಗುತ್ತಿದೆ. ೧೯೭೭ರಲ್ಲಿ ಆರಂಭಿಸಿದ 'ವಿಜ್ಞಾನ ಸಪ್ತಾಹ' ವಿಷ್ಟು ಯಶಸ್ವಿಯಾಯಿತೆಂದರೆ ಒಂದೇ ವಾರದಲ್ಲಿ ೧೫೦೦ ಸಭೆಗಳು ನಡೆದು ಒಂದು ಲಕ್ಷಕ್ಕೂ ಹೆಚ್ಚು ಮಂದಿ ಈ ಸಭೆಗಳಲ್ಲಿ ಪಾಲ್ಗೊಂಡರು!

ಒಮ್ಮುಖ ವಿಚಾರಧಾರೆ ಹರಿಯಬಾರದೆನ್ನುವುದೂ ಪರಿಷತ್ತಿನ ಇಷ್ಟ. ಅದಕ್ಕಾಗಿ ಚರ್ಚೆ ವಿಚಾರ ವಿನಿಮಯಕ್ಕೆ ಆದ್ಯತೆ. ಇದಕ್ಕಾಗಿ ಸಭೆಯ ತರುವಾಯ ಪ್ರಶ್ನೆ, ವಿಚಾರ ವಿಮರ್ಶೆಗೆ ವಿಪುಲ ಅವಕಾಶ.

ಜನಸಮೂಹದ ಜೊತೆ ಉಂಟಾದ ಸಂಪರ್ಕ ಹೆಚ್ಚುತ್ತಾ ಬಂದಿದೆ. ಹೊಳಹು ಹಾಕಿಕೊಂಡ ಒಂದು ತಿಂಗಳ ಕಾರ್ಯಕ್ರಮದ ಆಧಾರದ ಮೇಲೆ ಹಾಗೂ ಪರಿಷತ್ತು ನಡೆಸಿದ ಚರ್ಚಾ ತರಗತಿಗಳ ಆಧಾರದ ಮೇಲೆ ಹಲವಾರು ಪುಸ್ತಕಗಳು ಪ್ರಕಟವಾಗತೊಡಗಿವೆ. ಹಾಗೆಂದು ನಡೆಸಿದ ಸಭೆಗಳಲ್ಲಿ ವಿರೋಧವೇ ಕುದು ಬಂದಿಲ್ಲವೆಂತಲ್ಲ. ಆಸಕ್ತಿಯಂತೆಯೇ ವಿರೋಧ ಕೂಡಾ ವ್ಯಕ್ತವಾಗುತ್ತಿರುವುದುಂಟು. ಆಸಕ್ತಿ ಯಾಕೆಂದರೆ ಅದು, ಈ ಜನಕ ವಿಶ್ವದ ಕುರಿತು ಹಾಗೂ ಮಾನವನ ಚಿರಂತನ ಹೋರಾಟದ ಬದುಕನ್ನು ಕುರಿತು ಹೆಚ್ಚಿನ ತಿಳುವಳಿಕೆ ಯಾರಿಂದಲೂ ಇಷ್ಟು ಸುಲಭ ರೂಪದಲ್ಲಿ ದೊರಕಿರಲಿಲ್ಲ. ವಿರೋಧವೇಕೆಂದರೆ ಈ ಸಭೆಗಳಲ್ಲಿ ದೇವರ ವಿಚಾರ ಹೇಳುತ್ತಿರಲಿಲ್ಲ. ಪ್ರಚಲಿತವಿರುವ ನಂಬಿಕೆಯಂತೆ, ಈ ಸೃಷ್ಟಿ ಪ್ರಕೃತಿ ಋತುಗಳಿಗೆ ಮೂಲ ಕಾರಣ ದೇವರು ಎನ್ನದೆ ಇವಕ್ಕೆ ಬೇರೆ ಕಾರಣ ನೀಡಲು ಮುಂದಾದುದು ಸಂಪ್ರದಾಯವಾದಿಗಳನ್ನು ರೇಗಿಸಿದ್ದು ಉಪನ್ಯಾಸಕರಿಗೂ ಸಂಪ್ರದಾಯವಾದಿಗಳಿಗೂ ಸಭೆಯಲ್ಲಿಯೇ ವಾಗ್ವಾದಗಳು ನಡೆದವು. ಇದರಿಂದ 'ತರಗತಿ'ಗಳ ಸಂಖ್ಯೆ ಇನ್ನೂ ಹೆಚ್ಚಾದವು.

ಕೇರಳ ಸಂಪತ್ತು, ಕೇರಳದ ವ್ಯವಸಾಯ ಸಮಸ್ಯೆ, ರಾಜ್ಯದ ಆರೋಗ್ಯ ರೈತರ ಆರ್ಥಿಕ ಪರಿಸ್ಥಿತಿ. ಗ್ರಾಮೀಣ ಅಭಿವೃದ್ಧಿ, ಮಾನವ ವಿಕಾಸ ಹೀಗೆ ಹಲವು ಸಮಸ್ಯೆಗಳನ್ನು ಎತ್ತಿಕೊಂಡ ಪರಿಷತ್ತು ವಿಚಾರ ವಿನಿಮಯ ಕೂಟ ನಡೆಸಿ, ಸಮಸ್ಯೆಗಳ ಮೇಲೆ ಬೆಳಕು ಚೆಲ್ಲತೊಡಗಿದೆ. ರಾಜ್ಯದ ಮೂಲಭೂತ ಸಮಸ್ಯೆಗಳ ಬಗ್ಗೆಯೂ ಚರ್ಚಿಸಿ ಅಗತ್ಯವಾದ ಸಲಹೆಯನ್ನು ಸಂಬಂಧಿಸಿದ ಇಲಾಖೆಗೆ ಕೊಡುವ ಪರಿಹಾರ ಸೂಚಿಸುವ ಕಾರ್ಯವು ಪರಿಷತ್ತಿನಿಂದ ನಡೆದಿದೆ. ರಾಜ್ಯದ ಅಕ್ಕಿ ಬೆಳೆ




"ಏನು! ನಾವು ಜನತಾದವರ ಅಂಗಡಿಗೆ ಕಾಲಿಡೋದೇ? ಬೇಡ ಬೇಡ... ಯಾರಾದರೂ ತಪ್ಪು ತಿಳಿದಾರು. ಎಷ್ಟೆಂದರೂ ನಾವು ಕಾಂಗ್ರೆಸ್ಸಿನವರು....!"

ಯಲ್ಲಿ ಎರಡನೆಯ ಸ್ಥಾನ ಹೊಂದಿದ ಕುಟ್ಟನಾಡು ಪ್ರದೇಶದ ಸಮಸ್ಯೆ. ಉತ್ತರ ಕೇರಳದ ಗಿರಿಜನಾಂಗಗಳ ವಾಸಸ್ಥಾನ ಎನ್ನಿಸಿದ ವೈನಾಡಿನ ಸಮಸ್ಯೆ, ಹಾಗೂ ಇಡಿಕ್ಕಿ ಜಿಲ್ಲೆಯ ಅಭಿವೃದ್ಧಿ ಕುರಿತು ಸುದೀರ್ಘ ಸಮೀಕ್ಷೆ ನಡೆಸಿ ವರದಿ ಸಲ್ಲಿಸಿದೆ. ಪರಿಷತ್ತಿನ ಪರಿಣತರು ಈ ಪ್ರದೇಶಗಳಿಗೆ ಭೆಟ್ಟಿಕೊಟ್ಟು ಸಮಸ್ಯೆ ಅಧ್ಯಯನ ಮಾಡುತ್ತಾರೆ. ಅದರ ಕರಡು ಪ್ರತಿ ತಯಾರಿಸಿ ಸಭೆಯ ಮುಂದಿಡುತ್ತಾರೆ. ಸಭೆ ಚರ್ಚಿಸಿ ಪರಿಹಾರ ಸೂಚಿಸುತ್ತದೆ. ಈ ಸೂಚಿತ ಪರಿಹಾರ ಸಂಬಂಧಿತ ಖಾತೆಗೆ ರವಾನಿಸಲ್ಪಡುತ್ತದೆ. ಈ ಕಾರ್ಯಕ್ರಮಗಳು ಹೇಗೆ ಪ್ರಯೋಜನಕಾರಿ ಎಂಬುದದಕ್ಕೆ ಪರಿಷತ್ತಿನ ಅಧ್ಯಕ್ಷ ವಿ. ಕೆ. ದಾಮೋದರನ್ ಎರಡು ಉದಾಹರಣೆಗಳನ್ನು ಕೊಡುತ್ತಾರೆ. ಕಲ್ಲಿಕೋಟೆಯ ಬಳಿ ಮರದ ಪಲ್ಪ್ ಕಾರ್ಖಾನೆಯಿಂದ ಉಂಟಾದ ಜಲ ಹಾಗೂ ವಾಯು ಮಾಲಿನ್ಯ ಸಮಸ್ಯೆಗೆ ಪರಿಹರಿಸುವಲ್ಲಿ ಪರಿಷತ್ತು ಯಶಸ್ವಿಯಾದದ್ದು ಮೊದಲ ಉದಾ-ಹರಣೆಯಾದರೆ ದೇಶದ ಗಮನ ಸೆಳೆದ ಮೌನ ಕಂದರದ (Silent valley) ಯೋಜನೆಯ ನಿಲುಗಡೆಗೆ ಯತ್ನಿಸಿದ್ದು ಎರಡನೆಯ ಉದಾ-ಹರಣೆ. ಪರಿಷತ್ತು ಸೈನ್ಸ್ ಬುಕ್ ಕ್ಲಬ್ ಸ್ಥಾಪಿಸಿದೆ. ಸ್ವಯಂಪ್ರೇರಿತರಾದ ಸುಮಾರು ಎರಡು ಸಾವಿರ ಮಂದಿ ಇದರ ಸದಸ್ಯರಾಗಿದ್ದಾರೆ. ಇವರಿಗಾಗಿಯೇ ಪ್ರತಿ ತಿಂಗಳೂ ಸುಮಾರು ಇನ್ನೂರು ಪುಟಗಳಷ್ಟು ವಿಜ್ಞಾನವಿಚಾರದ ಪುಸ್ತಕಗಳನ್ನು ಪರಿಷತ್ತು ಒದಗಿಸುತ್ತಿದೆ. ಮಕ್ಕಳಿಗಾಗಿ ಐವತ್ತು ವಿಜ್ಞಾನ ಪುಸ್ತಕ ಮಾಲೆಯ ಪ್ರಕಟಣೆಗೆ ಪರಿಷತ್ತು ಉದ್ದೇಶಿಸಿದೆ. ಇದರ ಅಂಗವಾಗಿ ಈಗಾಗಲೇ ಇಪ್ಪತ್ತು ಪುಸ್ತಕಗಳು ಹೊರಬಂದಿವೆ. ವಿಜ್ಞಾನ ವಿಶ್ವಕೋಶದ ತಯಾರಿ ನಡೆಸುತ್ತಿದ್ದು, ಈ ವರ್ಷ ಅದರ ಪ್ರಥಮ ಸಂಪುಟ ಪ್ರಕಟವಾಗುವ ನಿರೀಕ್ಷೆ ಇದೆ.

ಇದನ್ನೆಲ್ಲ ನೀವು ಹೇಗೆ ಸಾಧಿಸಿದಿರಿ ಎಂಬುದಾಗಿ ಪರಿಷತ್ತಿನ ಕಾರ್ಯ ಚಟುವಟಿಕೆ ಗಮನಿಸಿದವರು ಕೇಳಬಹುದಾದ ಪ್ರಶ್ನೆ. ಇದಕ್ಕೆಲ್ಲಾ ಅಗತ್ಯವಾದ ಅಗಾಧ ಪ್ರಮಾಣದ ಹಣ ಹೇಗೆ ಸಂಗ್ರಹಿಸಲ್ಪಡುತ್ತದೆ ಎಂಬುದು ಇನ್ನೊಂದು ಪ್ರಶ್ನೆ. ಮೊದಲನೆಯದಕ್ಕೆ ಉತ್ತರ ಕೇರಳದ ಸಾಕ್ಷರತಾ ಪ್ರಮಾಣ (ಕೇರಳದ ಸಾಕ್ಷರತಾ ಪ್ರಮಾಣ ೬೦.೪%) ಹಾಗಾಗಿ ಪ್ರಕಟಿತ ಅಂಶಗಳು ಹೆಚ್ಚು ಮಂದಿಯನ್ನು ತಲುಪುವುದು ಸಾಧ್ಯ. ಇದರಿಂದ ಆಸಕ್ತಿ ಕುದುರುತ್ತಾ ಸಾಗುತ್ತದೆ.

ಆರ್ಥಿಕ ಸ್ಥಿತಿಯ ವಿವರ ಹೀಗಿದೆ: ತನ್ನ ಸದಸ್ಯರಿಂದ ವಾರ್ಷಿಕ ಚಂದಾ ಐದು ರೂಪಾಯಿಗಳನ್ನು ಪರಿಷತ್ತು ಪಡೆಯುತ್ತದೆ. ಜೀವಾವಧಿ ಸದಸ್ಯರಾಗುವವರು ನೂರು ರೂಪಾಯಿಗಳ ವಂತಿಕೆ ಸಲ್ಲಿಸಬೇಕು. ಕೇವಲ ಕೆಲವೇ ಮಂದಿ ಈ ಬಗೆಯ ಸದಸ್ಯರಾಗಿದ್ದಾರೆ. ಈ ಕಾರಣದಿಂದಾಗಿ ಯೋಜನೆಗಳಿಗೆ ಬೇಕಾದ ಅಗಾಧ ಪ್ರಮಾಣದ ಹಣದಿಂದಾಗಿ ಪರಿಷತು ಆರ್ಥಿಕ ಭಾರ ಭರಿಸಿಕೊಳ್ಳುವುದಕ್ಕೆ ಹೆಣಗಾಡುತ್ತಿದೆ. ಸರಕಾರ ಹಾಗೂ ಸಂಬಂಧಿತ ಸಂಸ್ಥೆಗಳಿಂದ ಆಗಾಗ ಕೆಲವು ಪ್ರಮಾಣದಲ್ಲಿ ನೆರವು ದೊರೆಯುತ್ತದೆಯಾದರೂ ಅದರ ಪ್ರಮಾಣ ಕಡಿಮೆ ಎಂದೇ ಹೇಳಬೇಕು. ಜನಸಾಮಾನ್ಯರ ದೇಣಿಗೆ ಹಾಗೂ ಪುಸ್ತಕ, ಪತ್ರಿಕೆಗಳ ಮಾರಾಟದ ಉತ್ಪತ್ತಿಯೇ ಪರಿಷತ್ತಿಗೆ ದೊರೆಯುವ ಅಮೂಲ್ಯ ನಿಧಿ.

ಪರಿಷತ್ತಿನ ಆಡಳಿತ ನೋಡಿಕೊಳ್ಳಲು, ಯೋಜನೆ ರೂಪಿಸಲು ತನ್ನದೇ ಆದ ಅಂಗರಚನೆಯನ್ನು ಅದು ಹೊಂದಿದೆ. ಕೇಂದ್ರ ಸಮಿತಿಯಲ್ಲಿ ಐವತ್ತು ಸದಸ್ಯರಿದ್ದಾರೆ. ಪ್ರತಿಯೊಂದು ಹೊಸ ಯೋಜನೆಗಾಗಿ ತಾತ್ಕಾಲಿಕ ಸಮಿತಿ ರಚನೆಯಾ-ಗುತ್ತದೆ. ಕೇಂದ್ರ ಸಮಿತಿಯ ವತಿಯಿಂದ ೧೬೦ ಸ್ಥಳೀಯ ಘಟಕಗಳೂ ೩೦ ಪ್ರಾಂತೀಯ ಸಮಿತಿಗಳೂ ೧೧ ಜಿಲ್ಲಾ ಕಾರ್ಯಾಗಾರಗಳೂ ಕೆಲಸ ನಿರ್ವಹಿಸುತ್ತವೆ.

(ಸಾಧಾರ)

---

**ಬಾಸ್: ರೀ, ಯಾಕ್ರಿ ಶರ್ಮಾ ಆಫಿಸ್ನಲ್ಲಿ ಕೆಲ್ಸಾ ಮಾಡ್ತಿರೋವಾಗ ವಿಸಲ್ ಹಾಕೋದು ?**
**ಶರ್ಮಾ: ಕ್ಷಮಿಸ್ಸಿ, ತಪ್ಪು ತಿಳಕೊಂಡಿದೀರಿ. ನಾನು ವಿಸಲ್ ಹಾಕೋವಾಗ ಕೆಲ್ಸಾ ಮಾಡ್ತಾ ಇರ್ಲಿಲ್ಲ ಸಾರ್.**

# ನೆಪೋಲಿಯನ್ನನ ಪ್ರೇಯಸಿಯರು

ಮೂಲ: **ಆರ್. ಕೆ. ಮೂರ್ತಿ** ಸಂಗ್ರಹ: **ವಾಲ್ಟರ್ ಲಾಸ್ರಾದೊ**

ಜೋಸೆಫಿನ್

ಒಬ್ಬ ಹಣ್ಣು ಹಣ್ಣು ಮುದುಕಿ ಸುಪುಷ್ಟ-ಸುಂದರ ಬಾಲಿಕೆಯ ಕೈಯನ್ನು ಮೆಲ್ಲನೆ ಎತ್ತಿಕೊಂಡು ಅಂಗೈಯನ್ನು ಬಿಡಿಸಿ ರೇಖೆಗಳನ್ನು ಏಕಾಗ್ರತೆಯಿಂದ ಪರಿಶೀಲಿಸಿದಳು.

ಆ ಬಾಲಿಕೆ, ಮಾರೀ ಜೊಸೆಫ್-ರೋಜ್ ಉದಾಸೀನದಿಂದ ನಿಂತಿರುವಾಗ ಮುದಿ ಜ್ಯೋತಿಷ್ಯಿ ಆಶ್ಚರ್ಯದಿಂದ ನೋಡಿದಳು.

"ಹಾಗೆ ದುರುಗಟ್ಟಿ ನೋಡಬೇಡ, ನಿನ್ನ ಕಣ್ಣುಗಳು ತಲೆಬುರುಡೆಯಿಂದ ಹೊರ ಬೀಳುವಂತೆ ಆಗಿವೆ" ಬಾಲಿಕೆ ಹೇಳಿದಳು.

ಆಗ ಮುದಿ ಹೆಂಗಸು, "ನನ್ನ ಮಾತುಗಳನ್ನು ಬರೆದಿಡು. ಒಂದು ದಿನ ನೀನು ಮಹಾರಾಣಿಯ ಕಿರೀಟವನ್ನು ಧರಿಸುವೆ. ನಿನ್ನ ವಿಧಿ ನಿನ್ನನ್ನು ಬೇಗ ಮದುವೆ, ಬೇಗ ವಿಧವೆ ಮತ್ತು ಪುನರ್ವಿ-ವಾಹದಿಂದ ಚಕ್ರವರ್ತಿಯ ಸಂಗಾತಿಯಾಗುವಂತೆ ಮಾಡುತ್ತಿದೆ ಎಂದು ತೋರಿಸುತ್ತದೆ."

ಬಾಲಿಕೆ ಭುಜಗಳನ್ನು ಹಾರಿಸಿದಳು, ಹಾಸ್ಯಾಸ್ಪದ ಭವಿಷ್ಯಕ್ಕೆ ಜೋರಾಗಿ ನಕ್ಕು ಕೈಕೊಸರಿ ಅಲ್ಲಿಂದ ಓಡಿದಳು.

ಕಾಲ ಕಳೆಯಿತು. ಹುಡುಗಿ ಒಂದು ಆಕರ್ಷಕ, ನಮ್ರ ಕನ್ಯೆಯಾಗಿ ಬೆಳೆದು, ಅವಳ ಚಿಕ್ಕಮ್ಮನ ಪ್ರಭಾವದಿಂದ ಫ್ರಾನ್ಸಿಗೆ ಹೋಗಿ ಅಲೆಗ್ಸಾಂಡ್ರೆ ಬಿಹೋರ್‌ನೈಸ್ ಎಂಬ ಸುಂದರ ಸರದಾರ-ನೊಡನೆ ಮದುವೆಯಾದಳು.

ಅಂದು ಅವಳು ಸರಳ, ದಯಾಳು ಮತ್ತು ಉದಾತ್ತ ಸ್ವಭಾವದವಳಾಗಿದ್ದು ಮದುವೆಯ ಸಮಯದಲ್ಲಿ ಬಹಳ ಪ್ರಸನ್ನಳಾಗಿದ್ದಳು. ಇಷ್ಟು ದೊಡ್ಡ ಐಶ್ವರ್ಯವಂತ ಕುಟುಂಬದ ಪತಿಯನ್ನು ಪಡೆದುದಕ್ಕಾಗಿ ಅಭಿಮಾನದಿಂದ ಅವಳ ಹೃದಯ ತುಂಬಿತ್ತು. ಉತ್ತಮ ಗೃಹಿಣಿಯಾಗಿ ತನ್ನ ಪ್ರಭುವನ್ನು ತೃಪ್ತಿಪಡಿಸಲು ಅವಳು ಹಾತೊರೆ-ಯುತ್ತಿದ್ದಳು.

ಆದರೆ ಅವಳ [illegible] ಆಶೆ ಎಲ್ಲಾ ಮಣ್ಣುಪಾಲಾಯಿತು. ಅವಳ ಗಂಡ ಮದುವೆಯ ಸಂಬಂಧವನ್ನು ಪವಿತ್ರದೃಷ್ಟಿಯಿಂದ ನೋಡುತ್ತಿರಲಿಲ್ಲ. ಅವನು ಯಾವಾಗಲೂ ಬೇರೆ ಹೆಂಗಸರೊಡನೆ ಕೂಡುತ್ತಿದ್ದ.

ರೋಜ್ ತಲ್ಲಣಿಸಿದಳು, ಕಾಡಿದಳು, ಗಂಡನನ್ನು ತನ್ನವನನ್ನಾಗಿ ಮಾಡಲು [illegible] ಪ್ರಯತ್ನ ಮಾಡಿದಳು. ಆಗ [illegible]

ದರೂ ಪತಿ ಸರಿ ದಾರಿಗೆ ಬರಬಹುದೆಂಬ ಅವಳ ನಂಬಿಕೆ ನೀರಾಯಿತು. ಅವನು ತನ್ನ ರೂಪ ಲಾವಣ್ಯದ ಕಡೆ ಕುರುಡನಾಗಿದ್ದುದನ್ನು ನೋಡಿ ಅವಳ ಹೃದಯಕ್ಕೆ ಆಘಾತವಾಯಿತು.

ಕಡೆಗೆ ಅವಳ ಗಂಡ ತನ್ನ ಪ್ರೇಯಸಿಯರ ಪೈಕಿ ಒಬ್ಬಳ ಪ್ರಭಾವದಿಂದಾಗಿ, ರೋಜ್‌ಗೆ ಹುಟ್ಟಿದ ಎರಡನೇ ಮಗು ಹೆಣ್ಣು ತನ್ನದಲ್ಲ ಅದು ಬೇರೆಯವರಿಂದ ಹುಟ್ಟಿದೆ ಎಂದು ಪ್ರಚಾರ ಮಾಡಿದನು.

ಈ ಘೋರ ಸುಳ್ಳು ಆಪಾದನೆಯಿಂದ ಅವಳು ಕುಸಿದಳು. ಮನುಷ್ಯತ್ವದಲ್ಲಿ ಸಮಾಜದಲ್ಲಿ ಮತ್ತು ಪವಿತ್ರ ವಿವಾಹಬಾಂಧವ್ಯದಲ್ಲಿ ಅವಳಿಗೆ ಇದ್ದ ನಂಬಿಕೆ ಭಯಂಕರ ಏಟು ಬಿತ್ತು. ಈ ದುಃಖದಿಂದ ಪಾರಾಗಿ ಸುಸ್ಥಿತಿಗೆ ಬರಲು ಅವಳಿಗೆ ಕೆಲವು ಸಮಯ ಬೇಕಾಯಿತು.

ಫ್ರೆಂಚ್ ರಾಜ್ಯಕ್ರಾಂತಿ ಅವಳನ್ನು ಮೃತ್ಯುವಿನ ಬಾಯಿಗೆ ಕೊಂಡೊಯ್ದಿತು. ಅವಳ ಗಂಡ ಕ್ರಾಂತಿಯಲ್ಲಿ ಭಾಗವಹಿಸಿ ರಾಜ ಮತ್ತು ರಾಣಿಯರನ್ನು ಸೆರೆಹಿಡಿಯುವುದರಲ್ಲಿ ೧೭೯೧ರಲ್ಲಿ ಮುಖ್ಯ ಪಾತ್ರ ವಹಿಸಿದ. ಇದಕ್ಕಾಗಿ ಅವನನ್ನು ಫ್ರೆಂಚ್ ಸೈನ್ಯದ ಪ್ರಮುಖನನ್ನಾಗಿ ನೇಮಿಸಲಾಯಿತು.

ಆದರೆ ಕ್ರಾಂತಿಯು ಗಲಿಬಿಲಿಯಲ್ಲಿ ಎಷ್ಟೋ ನಂಬಿಗಸ್ಥನ ಮೇಲೆ ಕೂಡ ಕ್ಷಣಮಾತ್ರದಲ್ಲಿ ಸಂಶಯ ಉಂಟಾಗುವ ಆ ದಿನಗಳಲ್ಲಿ ಅಲೆಗ್ಸಾಂಡ್ರೇನ ಮೇಲೂ ಆರೋಪ ಬಂದು ಏಪ್ರಿಲ್ ೧೭೯೪ ರಲ್ಲಿ ಅವನನ್ನು ಗಲ್ಲಿಗೇರಿಸಲಾಯಿತು.

ರೋಜ್‌ಳನ್ನೂ ಸೆರೆಹಿಡಿದರು. ಗಲ್ಲಿನಿಂದ ಪಾರಾಗಲು ಯಾವ ದಾರಿಯೂ ಉಳಿದಿಲ್ಲವೆಂದು ಅವಳಿಗೆ ಮನವರಿಕೆಯಾಯಿತು. ಸಾವಿನ ನೆರಳಿನಲ್ಲಿದ್ದ ಅವಳಿಗೆ ೨೬ ವರ್ಷದ ಒಬ್ಬ ಜನರಲ್ಲನ ಪರಿಚಯವಾಯಿತು. ಈ ಪರಿಚಯವು ಅವರಲ್ಲಿ ಪ್ರೇಮ ಸಂಬಂಧವನ್ನು ಉಂಟುಮಾಡಿತು.

ಈ ಸಂಬಂಧದ ಪರಿಣಾಮವಾಗಿ ಅವಳ ಒಳದೃಷ್ಟಿ ತೆರೆಯಿತು. ಸಮಾಜದ ರೀತಿ ನೀತಿಯ ಬಗ್ಗೆ ತಿಳುವಳಿಕೆ ಬಂತು. ಬೆಡಗು ಮೆರಗು ಮತ್ತು ರಮಣೀಯತೆಯಿಂದ ತುಂಬಿದ ಹೆಣ್ಣು ಎಷ್ಟು ದೊಡ್ಡ ಅಧಿಕಾರಿಯ ಮನಸ್ಸನ್ನು ಕೂಡ ಸೂರೆಗೊಂಡು ತನ್ನ ಕೆಲಸವನ್ನು ಮಾಡಿಕೊಳ್ಳಬಹುದೆಂದು ಅವಳಿಗೆ ಸ್ಪಷ್ಟವಾಯಿತು.

ಜುಲೈ ೧೭೯೪ರಲ್ಲಿ ಸರ್ವಾಧಿಕಾರಿಯ ಆಳ್ವಿಕೆ ಮುಕ್ತಾಯವಾದಾಗ ಅವಳು ಸೆರೆಮನೆಯಿಂದ ಹೊರಬಂದಳು.

ರೋಜಳ ಮಗ ಎಲ್ಜೀನ್ ತನ್ನ ತಂದೆಯ ಖಡ್ಗವನ್ನು ಮರಳಿ ಪಡೆಯುವ ಸಲುವಾಗಿ ನೆಪೋಲಿಯನ್ನನ ಮೊರೆ ಹೊಕ್ಕನು. ನೆಪೋಲಿಯನ್ ಅವನ ಆಶೆ ಪೂರೈಸಿದ. ಈ ಕೃಪೆಯ ಧನ್ಯವಾದ ಅರ್ಪಿಸಲು ರೋಜ್ ನೆಪೋಲಿಯನ್ನನನ್ನು ಭೆಟ್ಟಿಯಾದಳು.

ಅವಳ ಅದ್ಭುತ ಸೌಂದರ್ಯ ಮತ್ತು ಸದ್ವರ್ತನೆ ನೆಪೋಲಿಯನ್ನನ ಮನಸ್ಸನ್ನು ಸೂರೆಗೊಂಡಿತು. ಸಮಯವನ್ನು ವ್ಯರ್ಥ ಮಾಡದೇ ಅವಳೊಂದಿಗೆ ಗೆಳೆತನ ಬೆಳೆಸಿ ಮಾರ್ಚ್ ೧೭೯೬ರಲ್ಲಿ ಮದುವೆಯಾದ.

ನೆಪೋಲಿಯನ್ ರೋಜಳನ್ನು ಜೋಸೆಫಿನ್ ಎಂದು ಹೆಸರಿಸಿದ. ಅವಳ ಸೌಂದರ್ಯದ ಗುಲಾಮನಾದ.

ಮದುವೆಯಾದ ಎರಡೇ ದಿನಗಳಲ್ಲಿ ಇಟಲಿಯ ದಂಡಯಾತ್ರೆಗೆ ಹೋಗಬೇಕಾದಾಗ ನೆಪೋಲಿಯನ್ನನಿಗೆ ಬಹಳ ಬೇಸರವಾಯಿತು.

ಯುದ್ಧ ಭೂಮಿಯಿಂದ ಅವನು ಪ್ರತಿದಿನ ಆಕೆಗೆ ಪತ್ರ ಬರೆದು ತನ್ನ ಪ್ರೇಮವನ್ನು ವ್ಯಕ್ತಪಡಿಸಿದ. ಈ ಪತ್ರಗಳಲ್ಲಿ ನೆಪೋಲಿಯನ್ ತನ್ನ ಮನೋಭಾವನೆಯನ್ನು ಕಾವ್ಯರೂಪದಲ್ಲಿ ಹೃದಯಕ್ಕೆ ನಾಟುವಂತೆ ಬಣ್ಣಿಸಿದ. ಅದು ಅವನ ಪ್ರಥಮ ಪ್ರೇಮವಾಗಿತ್ತು.

ಆದರೆ ಜೋಸೆಫಿನ್ ತನ್ನ ಗಂಡನ ಪ್ರೇಮಕ್ಕೆ ತಕ್ಕ ಪ್ರತಿಕ್ರಿಯೆ ತೋರಿಸುವ ಗೋಜಿಗೇ ಹೋಗಲಿಲ್ಲ. ಅವಳು ಮೊದಲಿನ ಗಂಡನಿಂದ ಪಡೆದ ಕಟು ಅನುಭವದ ಪರಿಣಾಮವಾಗಿ ನೆಪೋಲಿಯನ್ನನ ಈ ಪ್ರೇಮವನ್ನು ನಂಬಲು ಅಸಮರ್ಥಳಾದಳು.

"ನನ್ನ ಗಂಡ ನನ್ನನ್ನು ಪ್ರೇಮ ಮಾಡುವುದಿಲ್ಲ ಪೂಜಿಸುತ್ತಾನೆ. ನನ್ನ ಪ್ರೇಮದಿಂದ ಅವನು ಹುಚ್ಚನಾಗಬಹುದೆಂದು ನನಗೆ ತೋರುತ್ತದೆ." ಎಂದು ಹೇಳಿ ಗೊಂದಲಕ್ಕೀಡು ಮಾಡುತ್ತಿದ್ದಳು. ಅಲ್ಲದೆ ಆಕೆ ಗಂಡಸರೊಡನೆ ಬೆರೆಯತೊಡಗಿದಳು.

ಚಾರ್ಲ್ಸ್ ಎಂಬೊಬ್ಬನನ್ನು ಈ ನಿಷಿದ್ಧ ಕೂಡಿಕೊಂಡ ಅವಳಿಗೆ ಸಂಬಂಧದಲ್ಲಿ ಎಷ್ಟು ಅಪಾಯವಿದೆ ಎಂಬುದೂ ಗಂಡನಿಗೆ ತಿಳಿದರೆ ಏನು ಗತಿಯಾಗಬಹುದೆಂದೂ ಅವಳಿಗೆ ಗೊತ್ತಿತ್ತು.

ಈಜಿಪ್ಟಿನ ಯುದ್ಧಯಾತ್ರೆಯಲ್ಲಿದ್ದಾಗ ನೆಪೋಲಿಯನ್ನನಿಗೆ ತನ್ನ ಹೆಂಡತಿಯ ಚಟುವಟಿಕೆಗಳ ಬಗ್ಗೆ ಸುದ್ದಿ ತಲುಪಿತು. ವಿವಾಹ ವಿಚ್ಛೇದನದ ಬಗ್ಗೆ ಆತ ಯೋಚಿಸಿದ. ಆದರೆ ಜೋಸೆಫಿಳನ್ನು ತೊರೆಯಲು ಅವನಿಂದ ಸಾಧ್ಯವಾಗಲಿಲ್ಲ. ಹೆಂಡತಿಯನ್ನು ಹತ್ತಿರ ಬರಗೊಡುವುದಿಲ್ಲ ಎಂಬ ಶಪಥದೊಡನೆ ನೆಪೋಲಿಯನ್ ಫ್ರಾನ್ಸಿಗೆ ಮರಳಿದ. ಕೆಲವು ಮಟ್ಟಿಗೆ ಅವನು ಯಶಸ್ವಿಯಾದ. ಜೊಸೆಫಿನ್ ಕ್ಷಮೆ ಬೇಡಲು ಅವನಲ್ಲಿಗೆ ಹೋದಾಗ ಅವಳಿಗೆ ಮುಚ್ಚಿದ ಬಾಗಿಲು ಸ್ವಾಗತಿಸುತ್ತಿತ್ತು. ಏನಾದರೂ ಮಾಡಿ ನೆಪೋಲಿಯನ್ನನ ಮನವೊಲಿಸದಿದ್ದರೆ ಮುಂದೆ ತನ್ನ ಭವಿಷ್ಯಕ್ಕೆ ತೊಂದರೆ ಬರುವುದೆಂದು ಆಕೆಯ ನಂಬಿಕೆ.

ನೆಪೋಲಿಯನ್ ಜನರಿಗೆ ಅಚ್ಚುಮೆಚ್ಚಿನವನಾಗಿದ್ದು ಸೈನಿಕರ ಧೈರ್ಯಶಾಲಿ ಮುಖಂಡನಾಗಿದ್ದ. ಅವನು ಫ್ರಾನ್ಸಿಗೆ ಗೌರವ ತಂದಿದ್ದ. ಆ ಸಮಯದಲ್ಲಿ ಅವನೇ ದಕ್ಷ ಆಡಳಿತಗಾರನಾಗಿದ್ದ.

ಜೊಸೆಫಿನ್ನಳ ಚಾಣಾಕ್ಷ ಬುದ್ಧಿಗೆ ಒಂದು ಉಪಾಯ ಹೊಳೆಯಿತು. ತನ್ನ ಪ್ರಾರ್ಥನೆಗೆ ಅವನು ಕಿವಿಗೊಡದ್ದನ್ನು ನೋಡಿ ತನ್ನ ಮಕ್ಕಳನ್ನು ತನ್ನ ಪರವಾಗಿ ಮೊರೆಯಿಡಲು ಪತಿಯಲ್ಲಿಗೆ ಕಳಿಸಿದಳು. ಆಗ ನೆಪೋಲಿಯನ್ನನ ಉಕ್ಕಿನ ಮನಸ್ಸು ಕರಗಿತು. ಅವನ ಬಾಗಿಲು ತೆರೆಯಿತು. ಪತ್ನಿಯನ್ನು ಅಪ್ಪಿಕೊಂಡಾಗ ಜೊಸೆಫಿನ್ ಅವನ ಪಾದ ಹಿಡಿದಳು. ಆತನನ್ನು ಕೂಡಿಕೊಂಡಳೇನೋ ನಿಜ, ಆದರೆ ಪರಸ್ಪರರಲ್ಲಿ ಸಂಶಯದ ಹೊಗೆಯಾಡುತ್ತಲೇ ಇತ್ತು. ಆಕೆ ತೋರಿಕೆಯ ಒಲವು ತೋರಿಸ ತೊಡಗಿದಳು.

ಆದರೆ ವಿಧಿ ತನ್ನ ಗತಿಯನ್ನು ಬದಲಿಸಿತು. ನೆಪೋಲಿಯನ್ ತನ್ನದೇ ಆದ ಒಂದು ಮಗುವನ್ನು ಪಡೆಯಲು ಹಂಬಲಿಸುತ್ತಿದ್ದ. ಜೊಸೆಫಿನ್ ಅವನಿಗಿಂತ ವಯಸ್ಸಿನಲ್ಲಿ ಆರು ವರ್ಷ ಹಿರಿಯಳು. ಆದರೆ ಆಕೆ ಮಕ್ಕಳನ್ನು ಪಡೆಯುವ ಕಾಲ ಮೀರಿದೆ ಎಂದು ಕಾರಣ ನೀಡಿ ವಿವಾಹ ವಿಚ್ಛೇದನ ಪಡೆಯುವಂತೆ ನೆಪೋಲಿಯನ್ನನಿಗೆ ಆಪ್ತರು ಸಲಹೆ ನೀಡಿದರು.

ತನ್ನ ಪುರುಷತ್ವದ ಬಗ್ಗೆ ಪರೀಕ್ಷೆಯಾಗದೆ ಜೊಸೆಫಿನ್ನಳನ್ನು ಬಿಡುವುದು ಅವನಿಗೆ ಸರಿಗಾಣಲಿಲ್ಲ. ಆದ್ದರಿಂದ ತನ್ನ ತಂಗಿ ಕೆರೊಲಿನ್ನಳ ಸಲಹೆಯಂತೆ ಹದಿನೆಂಟು ವರ್ಷ ಪ್ರಾಯದ ಒಬ್ಬ ಚೆಲುವೆಯ ಸಂಬಂಧ ಮಾಡಿದ.

ಈ ಪ್ರೇಮದಿಂದ ಅವನಿಗೆ ಗಂಡು ಮಗು ಹುಟ್ಟಿದಾಗ ತನಗೆ ಮಕ್ಕಳಾಗದ ಕಾರಣ ತನ್ನ ಹೆಂಡತಿಯೆಂದು ಅವನಿಗೆ ಸ್ಪಷ್ಟವಾಯಿತು. ಜೊಸೆಫಿನ್ನಳ ಅದೃಷ್ಟ ಇಲ್ಲಿಗೆ ಮುಗಿಯಿತು.

ಅಂತೂ ತನ್ನ ಜೊಸೆಫಿನ್ನಳನ್ನು ತ್ಯಾಗಮಾಡುವ ನಿರ್ಧಾರಕ್ಕೆ ಬಂದ. ತನ್ನ ನಿರ್ಧಾರವನ್ನು ಆಕೆಗೆ ವಿವರಿಸುವಾಗ ಅವನು "ರಾಜಕಾರಣಕ್ಕೆ ಹೃದಯವಿಲ್ಲ, ಬರೀ ಒಂದು ತಲೆ" ಎಂದ. ಆಕೆ ಎಷ್ಟು ಗೋಗರೆದರೂ ಪ್ರಯೋಜನವಾಗಲಿಲ್ಲ.

ಹೀಗೆ ಜೊಸೆಫಿನ್ ಹಿರಿಮೆಯ ಕಾಲ ಅಂತ್ಯ ಕಂಡಿತು. ಡಿಸೆಂಬರ್ ೧೫, ೧೮೦೯ರಂದು ಆಕೆಯು ಮಹಾರಾಣಿ ಪಟ್ಟ ಹೊರಟು ಹೋದರೂ ಅವಳನ್ನು "ಮಹಾರಾಣಿ" ಎಂದೇ ಕರೆದು ಮೊದಲಿನ ಸ್ಥಾನಮಾನ ಕೊಡಬೇಕೆಂದು ನೆಪೋಲಿಯನ್ ಅಪ್ಪಣೆ ಕೊಟ್ಟ.

ವೈವಾಹಿಕ ಸಂಬಂಧ ದೂರವಾದರೂ ಅವನ ಆತ್ಮೀಯತೆ ಕಡಿಮೆಯಾಗಲಿಲ್ಲ. ಇಬ್ಬರಲ್ಲೂ ಪತ್ರವ್ಯವಹಾರ ನಡೆಯುತ್ತಿತ್ತು. ನೆಪೋಲಿಯನ್ ಮಾರೀ ಲೂಯಿಜಳನ್ನು ಮದುವೆಯಾದಾಗ ಮತ್ತು ಅವನಿಗೆ ಗಂಡು ಮಗು ಹುಟ್ಟಿದಾಗ ಅವನ ಸಂತೋಷದಲ್ಲಿ ಇವಳೂ ಪಾಲ್ಗೊಂಡಳು.

ಕ್ರಮೇಣ ನೆಪೋಲಿಯನ್ನನ ಸಾಮರ್ಥ್ಯ ಕಡಿಮೆಯಾಗುತ್ತ ಬಂದು ಏಪ್ರಿಲ್ ೧೮೧೪ ರಲ್ಲಿ ಅವನು ಪರಾಜಿತನಾದುದನ್ನು ನೋಡಿ ಜೊಸೆಫಿನ್ ಬಹಳ ದುಃಖಪಟ್ಟಳು. ನೆಪೋಲಿಯನ್ನಂಥ ಮಹಾನಾಯಕನಿಗೆ ಇಂತಹ ಪರಿಸ್ಥಿತಿ ಹೇಗೆ ಬಂದಿತು ಅವಳಿಗೆ ಅರ್ಥವಾಗಲಿಲ್ಲ. ನೆಪೋಲಿಯನ್ನನನ್ನು ಎಲ್ಬಾಕ್ಕೆ ಸಾಗಿಸುತ್ತಾರೆಂದು ಕೇಳಿದಾಗಲಂತೂ ಆಕೆ ಮತ್ತಷ್ಟು ಖತಿಗೊಂಡಳು.

ಎಲ್ಬಾಕ್ಕೆ ತೆರಳುವ ಮೊದಲು ನೆಪೋಲಿಯನ್ ಅವಳಿಗೆ ಪತ್ರ ಬರೆದ: "ನಿನ್ನನ್ನು ಎಂದೂ ಮರೆಯದ, ಮುಂದೆ ಮರೆಯಲಾರದ ಅವನನ್ನು ನೀನು ಎಂದಿಗೂ ಮರೆಯಬೇಡ."

ಈ ಮಾತು ಅವಳ ಹೃದಯಕ್ಕೆ ನಾಟಿತು. ನೆಪೋಲಿಯನ್ನನ ಪರಾಜಯ ಮತ್ತು ಎಲ್ಬಾಕ್ಕೆ ಆತನನ್ನು ಗಡಿಪಾರು ಮಾಡಿದ್ದನ್ನು ಸಹಿಸಲಾಗದ

ಜೋಸೆಫಿನ್ ನೆಪೋಲಿಯನ್ನನ ನಿರ್ಗಮವಾಗಿ ಕೆಲವೇ ದಿನಗಳಲ್ಲಿ ತೀರಿಕೊಂಡಳು (ಮೇ ೨೯,೧೮೧೪.)

ಈ ಘೋರ ಸುದ್ದಿಯನ್ನು ಕೇಳಿ ದುಃಖ ಸಾಗರದಲ್ಲಿ ಮುಳುಗಿದ ನೆಪೋಲಿಯನ್ ಚೇತರಿಸಿಕೊಳ್ಳಲು ಕೆಲವು ಸಮಯ ಹಿಡಿಯಿತು. ಅವಳ ಭಾವಚಿತ್ರವನ್ನು ತನ್ನ ಕೋಣೆಯಲ್ಲಿ ತೂಗುಹಾಕಿಸಿದ.

## ಪಾಲ್ಲಿನ್ ಫೋರೆಸ್

೧೭೯೮ರ ಸೆಪ್ಟೆಂಬರಿನ ಒಂದು ದಿನ. ನೆಪೋಲಿಯನ್ ತನ್ನ ಪರಿವಾರ ಸಮೇತ ಕೈರೋ ನಗರದ ಹೊರವಲಯದಲ್ಲಿ ತಿರುಗಾಡಲು ಹೊರಟಿದ್ದ. ಆ ಸಮಯದಲ್ಲಿ ಅವನಿಗೆ ದಾರಿಯಲ್ಲಿ ವಿಹಾರದ ಜನರ ಗುಂಪಿನಲ್ಲಿದ್ದ ನೀಲಿ ಕಣ್ಣುಗಳ ಓರ್ವ ಆಕರ್ಷಕ ಯುವತಿಯ ಮೇಲೆ ಅವನ ದೃಷ್ಟಿ ಬಿದ್ದಿತು.

ಆ ಚೆಲುವೆಯ ಬಗ್ಗೆ ವಿಚಾರಿಸಿದಾಗ ಅವಳು ಅವನ ಕೈಕೆಳಗಿನ ಒಬ್ಬ ಅಧಿಕಾರಿಯ ಹೆಂಡತಿ ಎಂದು ತಿಳಿದು ಬಂತು. ಅವಳು ತನ್ನ ಪತಿಯೊಡನೆ ಸೇರಲು ಒಬ್ಬ ಯುವಕನಂತೆ ಕಡಲಿನ ದೂರದ ಪ್ರಯಾಣ ಮಾಡಿ ಬಂದಿದ್ದಳು.

ಅವಳ ಹೆಸರು ಪಾಲ್ಲಿನ್.

ಪಾಲ್ಲಿನಳ ಧೈರ್ಯ ಮತ್ತು ಸೌಂದರ್ಯ ನೋಡಿ ನೆಪೋಲಿಯನ್ ಮರುಳಾದ. ಯುವತಿಯನ್ನು ತನ್ನ ಕಡೆಗೆ ಸೆಳೆಯಲು ಉತ್ತಮ ಅವಕಾಶಕ್ಕೆ ಕಾದು ಕುಳಿತ.

೧೭೯೮ರ ನವೆಂಬರಿನಲ್ಲಿ ಒಂದು ಸಾಮಾಜಿಕ ಕೂಟದಲ್ಲಿ ಅವನಿಗೆ ಅವಳ ಭೇಟಿಯಾಯಿತು. ನೆಪೋಲಿಯನ್ನನ ಹೃದಯ ಸಂತೋಷದಿಂದ ಕುಣಿದಾಡಿತು. ಅವನು ಅವಳ ಸಮೀಪ ಹೋದ ತಲೆ ತಗ್ಗಿಸಿ ಅವಳ ಸೌಂದರ್ಯದ ಗುಣಗಾನ ಮಾಡಿದ.

ತನ್ನ ಬಗ್ಗೆ ನೆಪೋಲಿಯನ್ ತೋರಿದ ಆಸಕ್ತಿಗೆ ಪಾಲ್ಲಿನ್ ಸ್ತಬ್ಧಳಾದಳು. ಪ್ರತಿಯಾಗಿ ಅವನಿಗೆ ಧನ್ಯವಾದ ಹೇಳಿದಳು. ನೆಪೋಲಿಯನ್ ನಕ್ಕು ಹೇಳಿದ, "ನಾವು ಪುನಃ ಭೇಟಿಯಾಗುತ್ತೇವೆಂದು ನಾನು ನಂಬುತ್ತೇನೆ." [illegible]

ನೆಪೋಲಿಯನ್ ತಕ್ಷಣ ತನ್ನ ಅಧಿಕಾರಿಯನ್ನು ಕರೆದು ಪಾಲ್ಲಿನಳಿಗೆ ಒಂದು ಉತ್ತಮ ಕಾಣಿಕೆ ಮತ್ತು ಊಟದ ಆಮಂತ್ರಣ ಕೊಡಲು ಆಜ್ಞೆ ಕೊಟ್ಟ.

ಪಾಲ್ಲಿನಳಿಗೆ ನೆಪೋಲಿಯನ್ನನ ವರ್ತನೆಯಿಂದ ಶಂಕೆ ಬಾರದೆ ಇರಲಿಲ್ಲ. ಆದರೆ ತನ್ನ ಅನುಮತಿ ಕೊಡುವ ಮೊದಲು ಅವನ ಪ್ರೇಮ ನಿಜವೇ ಎಂಬುದನ್ನು ನೋಡಬಯಸಿದಳು. ಸುದೈವದಿಂದ ಇಷ್ಟು ದೊಡ್ಡ ಯೋಧ ಅವಳ ಪ್ರೇಮಕ್ಕೆ ಕಾತರಪಡುವಾಗ ಹೇಗೆ ಹಿಂದೆ ಸರಿಯುವುದು ?

ಅವಳ ಪತಿ ಒಬ್ಬ ಅಧಿಕಾರಿಯಾಗಿದ್ದ. ಅವಳು ಅವನನ್ನು ಬಹುವಾಗಿ ಪ್ರೀತಿಸುತ್ತಿದ್ದಳು. ಆದರೆ ಈ ಅದೃಷ್ಟದ ಬಾಗಿಲು ತೆರೆಯುವಾಗ...?

ಒಬ್ಬ ಜನರಲ್ ಭೋಜನಕೂಟಕ್ಕೆ ಸತ್ಕಾರಕ್ಕೆ ಅವನು ಹಾಜರಾದನು. ಊಟ ನಡೆಯುತ್ತಿರು-ವಾಗಲೇ ನೆಪೋಲಿಯನ್ ಒಳಗೆ ಬಂದ. ನೇರವಾಗಿ ಪಾಲ್ಲಿನಳ ಬಳಿಯಲ್ಲಿ ಹೋಗಿ ಕುಳಿತ. ಅವನಿಗಾಗಿ ಒಂದು ಕಪ್ ಕಾಫಿ ಬಂತು. ಕಾಫಿ ಸೇವಿಸುವಾಗ ಬೇಕೆಂದೇ ಅವನು ಕಾಫಿಯನ್ನು ಆಕೆಯ ಬಟ್ಟೆಯ ಮೇಲೆ ಚೆಲ್ಲಿದನು. ತನ್ನ ಅಜಾಗ್ರತೆಗೆ ಪಶ್ಚಾತ್ತಾಪ ವ್ಯಕ್ತಪಡಿಸಿ ಅವಳ ಬಟ್ಟೆಯನ್ನು ಶುಚಿಗೊಳಿಸುವ ನೆಪದಲ್ಲಿ ಅವಳ ಕೈಹಿಡಿದು ಒಳಗೆ ಕರೆದು-ಕೊಂಡು ಹೋದ.

ಅನಂತರ ಪಾಲ್ಲಿನಳ ಪತಿಯ ಪ್ರಶ್ನೆ ಉಳಿಯಿತು. ನೆಪೋಲಿಯನ್ ಉಪಾಯದಿಂದ ಫೋರೆಸನಿಗೆ ಒಂದು ಕೆಲಸ ಕೊಟ್ಟು ಫ್ರಾನ್ಸಿಗೆ ಅಟ್ಟಿದ. ಆದರೆ ದಾರಿಯಲ್ಲಿ ಬ್ರಿಟಿಷರು ಅವನ ಹಡಗನ್ನು ಹಿಡಿದರು. ಫೋರೆಸನ ಹೆಂಡತಿ ಪಾಲ್ಲಿನ್ ನೆಪೋಲಿಯನ್ನನ ಉಪ-ಪತ್ನಿಯಾಗಿರುವ ಸುದ್ದಿ ಬ್ರಿಟಿಷರ ಹಡಗಿನ ಕ್ಯಾಪ್ಟನ್ ಕೇಳಿದ್ದ. ಹಾಗಾಗಿ ಅವನು [illegible] ಬಿಟ್ಟರೆ ಅವನ [illegible] ಕಾಣ್ಸುತ್ತಿತ್ತು.

ಫೋರೆಸ್ ಮರಳಿ ಈಜಿಪ್ತಿಗೆ ಬಂದಾಗ ಹೆಂಡತಿ ಮನೆಯಲ್ಲಿ ಇರಲಿಲ್ಲ. ಕೋಪದಿಂದ ಕುದಿದ. ಒಂದು ಬಾರುಕೋಲನ್ನು ಎತ್ತಿಕೊಂಡು ನೆಟ್ಟಗೆ ನೆಪೋಲಿಯನ್ನನ ಅರಮನೆಗೆ ಓಡಿದ.

ಕೋಪಿಷ್ಟ ಪತಿಯ ಮುಖ ನೋಡಿ ಪಾಲ್ಲಿನ್ ನಡುಗಿದಳು. ಸಹಾಯಕ್ಕಾಗಿ ಬೊಬ್ಬೆ ಹಾಕಲು ಪ್ರಯತ್ನಿಸಿದಳು. ಆದರೆ ಹೆದರಿಕೆಯಿಂದ

ಶಬ್ದವೇ ಹೊರಡಲಿಲ್ಲ. ಆ ದಿಗಿಲಿನಿಂದ ಚೇತರಿಸಿ ಕೊಳ್ಳುವುದರೊಳಗೆ ಅವಳ ಬೆನ್ನಿನ ಮೇಲೆ ಬಾರ ಕೋಲಿನ ಪೆಟ್ಟಿನ ಮಳೆ ಬೀಳತೊಡಗಿತು.

ಅವಳ ಕಿರುಚಾಟ ಕೇಳಿ ಕಾವಲುಗಾರರು ಓಡಿ ಬಂದಾಗ ಅವಳ ಬೆನ್ನು ಒಡೆದು ರಕ್ತ ಸುರಿಯು ತಿತ್ತು. ಫೂರೆಸನನ್ನು ಹಿಡಿದು ನೆಪೋಲಿಯನನಿಗೆ ಸುದ್ದಿ ಕಳುಹಿಸಿದರು. ಪಾಲ್ಲಿನ್ನಳ ಗಂಡನನ್ನು ಬಿಡ ಬೇಕೆಂದು ನೆಪೋಲಿಯನ್ನನಿಂದ ತೀರ್ಪು ಬಂದಿತು.

ಅಂತೂ ಫೂರೆಸ್ ಹಾದಿಯಿಂದ ಸರಿದ ನಂತರ ಈ ಪ್ರೇಮಿಗಳಿಗಾವ ಅತಂಕವೂ ಉಳಿಯಲಿಲ್ಲ.

೧೭೯೯ ಇಸವಿಯ ಮಧ್ಯದಲ್ಲಿ ನೆಪೋಲಿಯನ್ ಮರಳಿ ಫ್ರಾನ್ಸಿಗೆ ಹೋಗುವ ಆಲೋಚನೆ ಮಾಡುವ ತನಕ ಇವರ ಪ್ರೇಮ ನಡೆಯಿತು. ತನ್ನನ್ನು ಫ್ರಾನ್ಸಿಗೆ ಕರೆದುಕೊಂಡು ಹೋಗೆಂದು ಪಾಲ್ಲಿನ್ ಬೇಡಿದಾಗ, "ಅದು ಸಾಧ್ಯವಿಲ್ಲ! ಬ್ರಿಟಿ ಷರು ನನ್ನನ್ನು ಹಿಡಿಯಬಹುದು. ನನ್ನ ಮರ್ಯಾದೆಯ ವಿಷಯದಲ್ಲಿ ನೀನು ಯೋಚಿಸಬೇಕು. ನನ್ನ ಹಡಗಿನಲ್ಲಿ ಸ್ತ್ರೀ ಇರುವದು ಗೊತ್ತಾದರೆ ಏನು ಹೇಳಿಯಾರು?" ಎಂದು ಕೇಳಿದನು.

ನಿಜವಾಗಿ ನೋಡಿದರೆ ನೆಪೋಲಿಯನನಿಗೆ ಈಗ ಅವಳ ಮೇಲೆ ಮನಸ್ಸಿರಲಿಲ್ಲ. ಅವಳಿಗೆ ಮಗುವಾ ಗುವ ಲಕ್ಷಣ ಕಾಣದ್ದನ್ನು ನೋಡಿ ಅವನ ಪೌರು ಷಕ್ಕೇ ಸವಾಲು ಹಾಕಿದಂತೆ ಆಗಿತ್ತು. ನನಗೊಂ– ದು ಮಗು ಏಕೆ ಕೊಡುವುದಿಲ್ಲ? ತಕ್ಷಣ ನಾನು ಜೊಸೆಫಿನಳನ್ನು ಬಿಟ್ಟು ನಿನ್ನೊಡನೆ ಮದುವೆ ಯಾಗುತ್ತೇನೆ ಹೀಗೆ ಯಾವಾಗಲೂ ಅವಳ ಕಿವಿ ಯಲ್ಲಿ ಅವನು ಉಸುರುತ್ತಿದ್ದನು.

ನೆಪೊಲಿಯನ್ ಮರಳಿ ಹೋದ ಕೆಲವೇ ಸಮ ಯದಲ್ಲಿ ೧೭೯೯ ನವೆಂಬರಿನಲ್ಲಿ ಅವಳೂ ಫ್ರಾನ್ಸಿಗೆ ಹೋದಳು. ನೆಪೋಲಿಯನ್ನನಿಗೆ ಪತ್ರಗಳನ್ನು ಬರೆದು ಅವನ ಮನ ಒಲಿಸುವಂತೆ ಪ್ರಯತ್ನ ಮಾಡಿದಳು ಪಾಲ್ಲಿನ್. ಆದರೆ ನೆಪೋಲಿಯನ್ ಬಹಳ ಶಾಂತ ರೀತಿಯಿಂದ ಅವಳನ್ನು ದೂರವಿರಿ ಸಿದ ಮತ್ತು ಅವಳಿಗೆ ಏನೂ ಕಡಿಮೆಯಾಗದಂತೆ ನೋಡಿಕೊಂಡ.

ಪಾಲ್ಲಿನ್ ನಂತರ ಇನ್ನೊಬ್ಬನೊಡನೆ ಮದುವೆ ಯಾದಳು. ಅವಳ ಹೊಸ ಪತಿಗೆ ನೆಪೋಲಿಯನ್ ಒಂದು ಉತ್ತಮ ಹುದ್ದೆ ಕೊಟ್ಟ.

ತಟ್ಟನೆ ಉನ್ನತಿಗೆ ಏರಿದ ಪಾಲ್ಲಿನ್ ಹಾಗೆಯೇ ಕೆಳಗೆ ಉರುಳಿದಳು.

## ಜೋರ್ಜಿನಾ

ಸಭಾಗೃಹ ಪ್ರೇಕ್ಷಕರಿಂದ ತುಂಬಿಹೋಗಿತ್ತು. ಉದ್ರೇಕಗೊಂಡ ಜನರು ಹೊರಗೆ ಟಿಕೇಟಿಗಾಗಿ ಓಡ್ಡಾಡುತ್ತಿದ್ದರು.

ಒಬ್ಬಳು ಪ್ರಖ್ಯಾತ ನಟಿಯಿಂದ ತರಬೇತಿ ಪಡೆದ ೧೫ ವರ್ಷ ಪ್ರಾಯದ ಕುಮಾರಿ ಜೋರ್ಜಿನಾಳ ವಿಷಯದಲ್ಲಿ ಕೇಳಿದ ಸ್ವಾರಸ್ಯಕರ ಕಥೆಗಳ ವಿಷಯದಲ್ಲಿ ಅವರು ಚರ್ಚಿಸುತ್ತಿದ್ದರು.

ಗುಂಪಿನಲ್ಲಿ ಒಬ್ಬ ಹೇಳಿದ–ಅವಳು ಅತ್ಯಂತ ಸುಂದರಿ, ಕಾಮುಕಿ ಮತ್ತು ಆಕರ್ಷಕಳಾಗಿದ್ದಾಳೆ. ಇನ್ನೊಬ್ಬ ಅರುಹಿದ, ಅವಳು ಪ್ಯಾರಿಸ್ಸಿನಲ್ಲಿ ಬಿರು ಗಾಳಿ ಎಬ್ಬಿಸುತ್ತಾಳೆ! ಯೌವನದ ತೆರೆಗಳಿಂದ ತುಂಬಿ ತುಳುಕಾಡುತ್ತಾಳೆ.





"ನಿಮ್ಮ ಪ್ರೇಮ ಕವನಗಳನ್ನು ಓದಿದೆ. ನಿಮ್ಮ ಹೃದಯರಾಣಿಯನ್ನು ನೋಡೋ ಆಸೆ ಅತಿ ಯಾಯಿತು. . . ."

ಕುಮಾರಿ ಜೋರ್ಜಿನಾ ಥಿಯೆಟರಿನ ಮುಖ್ಯ ದ್ವಾರಕ್ಕೆ ಬಂದಾಗ ಅವಳ ದರ್ಶನ ಪಡೆಯಲು ಜನ ಸೇರಿದ್ದರು. ಪೋಲೀಸರು ಅವಳಿಗೆ ದಾರಿ ಮಾಡಿ ಕೊಟ್ಟರು. ಜನರು ನುಗ್ಗಾಡುತ್ತಿದ್ದರು. ಯುವತಿಗೆ ಸೌಂದರ್ಯ ಮತ್ತು ಯೌವನ ಇರುವ ತನಕ ಅವಳು ರಾಕೆಟಿನಂತೆ ಪ್ರಸಿದ್ಧಿಗೆ ಏರಿಕೊಂಡು ಅಧಿಕಾರದಲ್ಲಿದ್ದವರ ಕೈಗೊಂಬೆ ಆಗುವಳೆಂದು ಜನರು ಯೋಚಿಸಿದರು.

ನವೆಂಬರ್ ೨೮, ೧೮೦೨. ಕೀರ್ತಿಯ ಶಿಖರಕ್ಕೆ ಮುಟ್ಟಿದ ನೆಪೋಲಿಯನ್ ದೊರೆಯ ಉನ್ನತ ಉಡುಪಿನಲ್ಲಿ ಶೋಭಿತನಾಗಿ ಜೊಸೆಫಿನಳ ಸಂಗಡ ಸಭಾಗೃಹಕ್ಕೆ ಆಗಮಿಸಿದ. ಉತ್ಸಾಹದ ಕೂಗಿನಿಂದ ಅವನಿಗೆ ಅಭಿನಂದನೆ ಮಾಡುವ ಜನರಿಗೆ ಕೈ ಬೀಸುತ್ತಾ ಮುತ್ತು ವಜ್ರಗಳಿಂದ ಅಲಂಕೃತ ಮಹಾರಾಣಿಯೊಡನೆ ಅವನು ಪ್ರತ್ಯೇಕ ಆಸನ ದೆಡೆಗೆ ನಡೆದ.

ನಾಟಕ ಪ್ರಾರಂಭವಾಯಿತು. ಮೊದಲ ಎರಡು ದೃಶ್ಯಗಳ ನಂತರ ಮಾರಿ ಜೋರ್ಜಿನಾ ರಂಗಮಂಚದ ಮೇಲೆ ಬಂದ್ದಳು. ಪ್ರೇಕ್ಷಕರು ಅವಳ ಸೌಂದರ್ಯ ನೋಡಿ ಮೈಮರೆತರು. ಪ್ಯಾರಿಸ್ಸಿನ ವೀನಸ್ ಅಂತ ಅವಳನ್ನು ಕೂಗಿ ಕರೆದರು.

ನೆಪೋಲಿಯನ್ನನ ಮೇಲೆ ವಿಶೇಷ ಪರಿಣಾಮವಾಗಿತ್ತು. ಅವನ ಹೃದಯದಲ್ಲಿ ತುಮುಲ ನಡೆದಿತ್ತು.

ಆ ಯುವತಿ ನಟಿಯನ್ನು ಅವನು ಜೊಸೆಫಿನಳೊಂದಿಗೆ ಹೋಲಿಸಿ ನೋಡಿದನು. ತನಗಿಂತ ಆರು ವರ್ಷ ದೊಡ್ಡವಳಾಗಿದ್ದ ಜೊಸೆಫಿನ್ "ಬಣ್ಣ ಹಾಕಿದ ಬೊಂಬೆ"ಯಂತೆ ಕಂಡಳು. ಅವಳಿಗೆ ಮಕ್ಕಳಾಗುವ ಪ್ರಾಯ ಮೀರಿ ಹೋಗಿದೆ ಎಂಬ ಸಂಶಯ ಅವನನ್ನು ಕೊರೆಯುತೊಡಗಿತು. ತನಗೆ ಮಕ್ಕಳಾಗದಿರಲು ಇದೊಂದು ಕಾರಣವಾಗಬಹುದು ಮತ್ತು ಹೀಗೆ ತನ್ನ ಹೆಸರು ಹಾಳಾಗಬಹುದು ಎಂಬ ಹೆದರಿಕೆಯಿಂದ ಮಕ್ಕಳನ್ನು ಹಡೆಯುವ ಅನ್ಯ ಕಾಂತೆಯನ್ನು ಅವನ ಮನಸ್ಸು ಹುಡುಕತೊಡಗಿತು.

ಜೋಸೆಫೀನಳಿಗೆ ಅವಳ ಮೊದಲಿನ ಗಂಡನಿಂದ ಇಬ್ಬರು ಮಕ್ಕಳು ಹುಟ್ಟಿದ್ದರಿಂದ ತನಗೆ ಮಕ್ಕಳಾಗದಿರಲು ಕಾರಣ ನೆಪೋಲಿಯನ್ನನೇ ಎಂದು ಅವಳು ಹೇಳುತ್ತಿದ್ದಳು. ಅದು ಸತ್ಯವೇ ಎಂಬುದನ್ನು ನೆಪೋಲಿಯನ್ನನಿಗೆ ಪರೀಕ್ಷಿಸಬೇಕಿತ್ತು. ಪರೀಕ್ಷೆಯ ಸಲುವಾಗಿ ಇಂತಹ ಸುಂದರಿ ಯುವತಿಯಲ್ಲದೆ ಬೇರೆ ಏನು ಬೇಕು ?

೧೮೦೩ರ ಪ್ರಾರಂಭದಲ್ಲಿ ನೆಪೋಲಿಯನ್ ಅವಳಿಗೆ ಆಮಂತ್ರಣ ಕಳಿಸಿದ. ಅವಳು ಸಂತೋಷದಿಂದ ಅವನ ಭೇಟಿಗೆ ಹೋದಳು. ಮೊದಲಿನ ಭೇಟಿಯಲ್ಲಿ ವಿಶೇಷವೇನೂ ನಡೆಯಲಿಲ್ಲ. ಅವನು ಅವಳೊಡನೆ ಬಹಳ ಮಾತಾಡಿದ. ಅವಳ ಬಾಲ್ಯ ಚರಿತ್ರೆ ಕೇಳಿದ. ದೇವಿಯ ಕೃಪೆ ಪಡೆಯಲು ಪ್ರಾರ್ಥನೆ ಮಾಡುವ ಒಬ್ಬ ಭಕ್ತನಂತೆ ಇತ್ತು ಅವನ ವರ್ತನೆ. ಅವನು ಅವಳಿಗೆ ಜೋರ್ಜಿನಾ ಎಂದು ಹೆಸರಿಸಿದ. ಕೆಲವು ದಿನಗಳಲ್ಲಿ ಅವರ ಗೆಳೆತನ ಬೆಳೆಯಿತು.

ಹುಲ್ಲುಗಾವಲಿನಲ್ಲಿ ಬೆಂಕಿ ಹರಡಿದಂತೆ ಈ ಸುದ್ದಿ ಸುತ್ತಲೂ ಹರಡಿತು. ನೆಪೋಲಿಯನ್ ತನ್ನನ್ನು ಪ್ರೀತಿಸುತ್ತಾನೆಂದು ತಿಳಿದು ಜೋರ್ಜಿನಾ ಸಂತೋಷಪಟ್ಟಳು. "ಅವನ ಸಂಗಡ ಇದ್ದಾಗ ಸಮಯ ಹೋಗುವುದು ಗೊತ್ತೇ ಆಗುತ್ತಿರಲಿಲ್ಲ. ರಾತ್ರಿ ಕಳೆದು ದಿನ ಉದಯಿಸಿದಾಗ ಬೇಸರವಾಗುತ್ತಿತ್ತು," ಎಂದು ಅವಳು ಹೇಳುತ್ತಿದ್ದಳು.

ತನಗೆ ಸಮಯ ಸಿಕ್ಕಿದಾಗ ಮತ್ತು ತನಗೆ ಬೇಕಾದಾಗ ನೆಪೋಲಿಯನ್ ಜೋರ್ಜಿನಾಳನ್ನು ಕರೆ ಕಳಿಸುತ್ತಿದ್ದ. ನೆಪೋಲಿಯನ್ನನ ಆಪ್ತ ಸಹಾಯಕನೊಬ್ಬನು ಅರಮನೆಯ ಹಿಂದಿನ ಒಂದು ದ್ವಾರದಿಂದ ಅವಳನ್ನು ಮೆಲ್ಲನೆ ಕರೆದು ತಂದು ಗುಪ್ತಕೋಣೆಯಲ್ಲಿ ಬಿಟ್ಟು, ಮರುದಿನ ಬೆಳಗಾಗುವ ಮೊದಲೇ ಅವಳನ್ನು ಮರಳಿ ಕರೆದುಕೊಂಡು ಹೋಗುತ್ತಿದ್ದ.

ಒಬ್ಬ ಅಪರಿಚಿತ ಯುವತಿ ಗುಟ್ಟಾಗಿ ನೆಪೋಲಿಯನ್ನನಿಗೆ ಭೇಟಿಯಾಗುತ್ತಾಳೆಂದು ಜೋಸೆಫೀನಳಿಗೆ ಸುದ್ದಿ ಮುಟ್ಟಿತು. ಇದನ್ನು ಕೇಳಿ ತನ್ನ ಪತಿ ತನ್ನಿಂದ ದೂರ ಸರಿಯಬಹುದೆಂಬ ಶಂಕೆ ಅವಳಲ್ಲಿ ಮೂಡಿತು. ನೆಪೋಲಿಯನ್ ವಿಶ್ವಾಸದಿಂದ ನಡೆಯುವುದಿಲ್ಲವೆಂದು ಅವಳು ಬೊಬ್ಬೆ ಎಬ್ಬಿಸಿದಳು. ಆ ಕಥೆ ಸತ್ಯವಲ್ಲ ಎಂದು ಹೇಳಿ ನೆಪೋಲಿಯನ್ ಅವಳಿಗೆ ತಾತ್ಕಾಲಿಕ ಧೈರ್ಯ ಕೊಟ್ಟ. ನಂತರ ಜೋಸೆಫೀನಳಿಗೆ ಎಲ್ಲ ಸ್ಪಷ್ಟವಾಯಿತು. ಸಿಕ್ಕಿದಾಗ ಅವಳು ಪುನಃ ಅವನನ್ನು ತರಾಟೆಗೆ ತೆಗೆದುಕೊಂಡಳು. ಆದರೆ ಅವನ ತರ್ಕದ ಎದುರು ಅವಳ ಬಾಯಿ ಮುಚ್ಚಿ

ಹೋಯಿತು.ಜೋರ್ಜಿನಾ ಮತ್ತು ನೆಪೋಲಿಯನ್ನರ ಪ್ರೇಮ ಹಾಗೆಯೇ ಮುಂದುವರೆಯಿತು. ಹಲವು ರಾತ್ರಿ ಅವರು ಒಟ್ಟಿಗೆ ಕಳೆದರು. ಚಿಕ್ಕಮಕ್ಕಳಂತೆ ಅವರು ನಕ್ಕು ಆಡಿ ಕುಣಿದರು. ಕೆಲವು ಸಲ ಪೋಲಿ ಮಕ್ಕಳಂತೆ ವರ್ತಿಸುತ್ತಿದ್ದರು.

ಆದರೆ ನೆಪೋಲಿಯನ್ ಸಾವಕಾಶವಾಗಿ ಜೋರ್ಜಿನಾಳಿಂದ ದೂರ ಸರಿಯತೊಡಗಿದ. ಅವಳಲ್ಲಿಯೂ ಮಕ್ಕಳಾಗುವ ಲಕ್ಷಣ ತೋರದ್ದೇ ಇದಕ್ಕೆ ಕಾರಣ.

ಒಂದು ದಿನ ಅವರ ಪ್ರೇಮದ ಕೊಂಡಿ ಒಮ್ಮೆಲೆ ಕಡಿದುಹೋಯಿತು. ಆ ರಾತ್ರಿ ಜೋರ್ಜಿನಾಳೊಡನೆ ಇದ್ದಾಗ ನೆಪೋಲಿಯನ್ ಅತಿ ಕೋಪದಿಂದ ಕುದಿಯತೊಡಗಿದ. ಹೆದರಿದ ಜೋರ್ಜಿನಾ ಜೋರಾಗಿ ಕಿರುಚಿದಾಗ ಇಡೀ ಅರಮನೆ ಎಚ್ಚರಗೊಂಡಿತು.

ನೆಪೋಲಿಯನ್ ಪ್ರಜ್ಞೆಗೆ ಬಂದಾಗ ಅವನ ಬಾಗಿಲಿನಲ್ಲಿ ಕಾವಲುಗಾರರು ನೌಕರರು ನಿಂತಿದ್ದರು. ಒಂದು ಬದಿಯಲ್ಲಿ ರಾಣಿ ನಿಂತಿದ್ದಳು. ಇನ್ನೊಂದು ಬದಿಯಲ್ಲಿ ಉಪ-ಪತ್ನಿ. ಇಬ್ಬರೂ ರಾತ್ರಿಯ ಉಡುಪಿನಲ್ಲಿದ್ದರು.

ನೆಪೋಲಿಯನ್ ಮತ್ತು ಜೋರ್ಜಿನಾ ಇವರ ನಡುವೆ ಮೊದಲೇ ಕ್ಷೀಣವಾದ ಬಾಂಧವ್ಯ ಈಗ ಸಂಪೂರ್ಣವಾಗಿ ಕಡಿದುಹೋಯಿತು. ಎಳೆ ಪ್ರಾಯದ ಜೋರ್ಜಿನಾ ಪ್ರೇಮದ ರುಚಿ ನೋಡಿದಳು. ಉನ್ನತಿಯ ಶಿಖರಕ್ಕೆ ಮುಟ್ಟಿದಳು ಮತ್ತು ಕಸದಂತೆ ಮೂಲೆಗೆ ಬಿದ್ದಳು. ಅವಳ ಗೌರವದ ದಿನಗಳು ನೀರಿನ ಮೇಲಿನ ಗುಳ್ಳೆಯಂತೆ ಕ್ಷಣದಲ್ಲಿ ಒಡೆದುಹೋದವು.

ಆದರೆ ಅಂತ್ಯದವರೆಗೂ ಜೋರ್ಜಿನಾಳ ಹೃದಯದಲ್ಲಿ ನೆಪೋಲಿಯನ್ ಉಳಿದ. ನೆಪೋಲಿಯನ್ ಪರಾಭವಹೊಂದಿ ಎಲ್ಬಾಕ್ಕೆ ಮತ್ತು ನಂತರ ಸೆಂಟ್ ಹೆಲೆನಾಕ್ಕೆ ಗಡಿಪಾರು ಆದಾಗ ಅವಳಿಗೆ ದುಃಖವಾಯಿತು. ರಶಿಯ ಮತ್ತು ಇಂಗ್ಲೆಂಡಿಗೆ ಹೋಗಿ ಹಲವು ನಾಟಕಗಳಲ್ಲಿ ಪಾತ್ರ ವಹಿಸಿದಳು. ಅವಳದೇ ಪ್ರಭಾವದಿಂದ ಪ್ರಖ್ಯಾತ ಲೇಖಕ ಅಲೆಗ್ಝಾಂಡರ್ ಡ್ಯೂಮಾನು "ನೆಪೋಲಿಯನ್ ಬೊನೊಪಾರ್ಟ್" ಎಂಬ ನಾಟಕವನ್ನು ಬೆಳಕಿಗೆ ತಂದ.

ಜೋರ್ಜಿನಾ ಸಾಯುವ ತನಕವೂ ನೆಪೋಲಿಯನ್ನನ ಪ್ರೇಮದ ಸಿಹಿ ಅನುಭವದ ನೆನಪು ತುಂಬಿಕೊಂಡು ಅವನ ಪ್ರೀತಿಯಲ್ಲೇ ಉಳಿದಳು.

## ಮಾರಿ ವಾಲೆವ್ಸ್ಕ

೧೮೦೭ ರ ಹೊಸ ವರ್ಷದ ದಿನ. ಅದು ನೆಪೋಲಿಯನ್ ಯಶಸ್ಸಿನ ದರ್ಪದಿಂದ ವಾರ್ಸಾದ ಕಡೆಗೆ ಹೆಜ್ಜೆ ಹಾಕುತ್ತಿದ್ದ. ರಶಿಯಾ ಆಸ್ಟ್ರಿಯಾ ಮತ್ತು ಪ್ರಶಿಯ ಕೂಡಿಕೊಂಡು ಹರಿದುಹಾಕಿದ ತಮ್ಮ ದೇಶವನ್ನು ಅವನು ಪುನಃ ಒಂದುಗೂಡಿಸುವನೆಂದು ಪೋಲೆಂಡಿನ ಜನರು ನಂಬಿದ್ದರು.

ನೆಪೋಲಿಯನ್ನನ ತಲೆಯಲ್ಲಿ ಹಲವಾರು ವಿಚಾರಗಳು ತುಂಬಿದ್ದವು. ಉನ್ನತ ಶಿಖರಕ್ಕೆ ಅವನು ಮುಟ್ಟಿದ್ದ. ಚರಿತ್ರೆಯಲ್ಲಿ ತನ್ನ ಹೆಸರು ಸೀಜರ್ ಅಥವಾ ಅಲೆಗ್ಝಾಂಡರನ ಹಾಗೆ ಉಳಿಯಬಹುದೇ ಎಂದು ಯೋಚಿಸಿದ.

ಬ್ರಿಟಿಷರ ಬಲಿಷ್ಠ ನೌಕಾದಳವನ್ನು ಸೋಲಿಸಿ ಅದನ್ನು ಮುಷ್ಟಿಯೊಳಗೆ ತಂದರೆ ಮಾತ್ರ ಪ್ರಪಂಚದಲ್ಲಿ ಏನಾದರೂ ಮಾಡಬಹುದು. ಈ ಆಲೋಚನೆಯಲ್ಲಿದ್ದಾಗ ಒಬ್ಬ ಯುವತಿಯೊಡನೆ ಬಂದ ಗ್ರ್ಯಾಂಡ್ ಮಾರ್ಶೆಲ್ ರಾಜನ ಗಮನ ಸೆಳೆಯಲು ಕುದುರೆ ಗಾಡಿಯ ಬಾಗಿಲು ತಟ್ಟಿದ. ನೆಪೋಲಿಯನ್ ತಲೆ ಎತ್ತಿದಾಗ ಆ ಅಧಿಕಾರಿ ಹೇಳಿದ, "ಸ್ವಾಮಿ, ಈ ಯುವತಿ ನಿಮ್ಮೊಡನೆ ಮಾತಾಡಲು ಬಂದಿದ್ದಾಳೆ. ಅದಕ್ಕಾಗಿ ಅವಳು ಈ ಗುಂಪಿನ ಅಪಾಯಕ್ಕೆ ಎದೆಗೊಟ್ಟಿದ್ದಾಳೆ."

ಆ ಹುಡುಗಿಯ ನಗುಮುಖ, ಮೈಕಟ್ಟು ಇತ್ಯಾದಿ ನೋಡಿ ನೆಪೋಲಿಯನ್ನನ ಹೃದಯದಲ್ಲಿ ಮೋಹ ಹುಟ್ಟಿತು. ಅವಳನ್ನು ತನ್ನ ಸಂಗಾತಿಯನ್ನಾಗಿ ಮಾಡಿಕೊಳ್ಳಲು ಅವನ ಮನಸ್ಸು ಆಶೆಪಟ್ಟಿತು. ಅವಳೊಡನೆ ಅವನಿಗೆ ವಿಚಿತ್ರ ಪ್ರೀತಿ. ಆಗಲೇ ಮಾರೀ ವಾಲೆವ್ಸ್ಕ ಮುಂದೆ ಬಂದಳು. ತಲೆ ತಗ್ಗಿಸಿ ನೆಪೋಲಿಯನ್ನನನ್ನು ಅಭಿನಂದಿಸಿದಳು. ಅವನ ಕೈಹಿಡಿದೆತ್ತಿ ತನ್ನ ತುಟಿಗಳನ್ನು ಒತ್ತಿದಳು. ನೆಪೋಲಿಯನ್ನನಿಗೆ ಮೈಯಲ್ಲಿ ವಿದ್ಯುತ್ ಹರಿದಂತಾಯಿತು. ಮಧುರ ಸ್ವರದಿಂದ ಅವಳು ಆತನನ್ನು ಸ್ವಾಗತಿಸಿದಳು. ಪೋಲೆಂಡನ್ನು ಒಂದುಗೂಡಿಸುವ ಕಾರ್ಯ ಅವನಿಂದ

ಮಾತ್ರ ಸಾಧ್ಯವೆಂದು ಹೊಗಳಿಕೆಯ ಮಾತು-ಗಳನ್ನು ಹೇಳಿದಳು.

ಯುವತಿಯ ದೇಶಭಕ್ತಿಯ ಮಾತುಗಳನ್ನು ಕೇಳಿ ನೆಪೋಲಿಯನ್ನನಿಗೆ ಸಂತೋಷವಾಯಿತು.

ಅವಳನ್ನು ತನ್ನವಳನ್ನಾಗಿಸಿಕೊಳ್ಳಲು, ಅವನು ತವಕಿಸಿದ. ನೆಪೋಲಿಯನ್ ಕಷ್ಟದಿಂದ ತನ್ನ ಮನಸ್ಸನ್ನು ಹತೋಟಿಗೆ ತಂದುಕೊಂಡು ವಾರ್ಸಾದಲ್ಲಿ ತಾನು ಅವಳನ್ನು ಭೇಟಿಯಾಗುವ ಭರವಸೆ ಇತ್ತ.

ಗಾಡಿ ಮುಂದೆ ಹೋಗುವಾಗ ಮಾರಿ ಜನರ ಗುಂಪಿನಲ್ಲಿ ಮಾಯವಾಗುವವನ್ನು ನೆಪೋಲಿಯನ್ ನೋಡಿದ. ನಂತರ ಹಿಂದೆ ಒರಗಿಕೊಂಡು ಚೆಲುವೆಯನ್ನು ಕಣ್ಣು ಮುಂದೆ ಚಿತ್ರಿಸಿಕೊಂಡನು.

ವಾರ್ಸಾಕ್ಕೆ ತಲುಪಿದ ನಂತರ ನೆಪೋಲಿಯನ್ ವಿಚಾರಿಸಿದಾಗ ಆ ಯುವತಿ ಒಂದು ಮರ್ಯಾ-ದಸ್ಥ ಬಡ ಕುಟುಂಬದಲ್ಲಿ ಹುಟ್ಟಿದಳೆಂದೂ ಬಡ-ತನದ ಬೇಗೆಯಿಂದ ಅವಳು ೬೦ ವರ್ಷ ಪ್ರಾಯದ ವಾಲೆವ್ಸ್ಕಿ ಎಂಬವನೊಡನೆ ಮದುವೆಯಾಗಬೇಕಾಯಿತೆಂದೂ ಅವಳಿಗೆ ಒಂದು ಗಂಡುಮಗು ಹುಟ್ಟಿದೆ ಎಂದೂ ತಿಳಿದು ಬಂತು. ಹಾಗಿರುವಾಗ ತನ್ನ ಪ್ರೇಮವನ್ನು ಅವಳು ಆನಂದದಿಂದ ಸ್ವೀಕರಿಸಬಹುದೆಂದು ನೆಪೋಲಿಯನ್ ಭಾವಿಸಿದ.

ಆದರೆ ನೆಪೋಲಿಯನ್ನನನ್ನು ಸ್ವಾಗತಿಸಲು ಅವಳು ಜನರ ಗುಂಪಿನಿಂದ ಮುಂದೆ ಬರಲು ಕಾರಣ ಅವಳ ದೇಶಪ್ರೇಮವಲ್ಲದೆ ಬೇರೆ ಯಾವುದೂ ಅಲ್ಲ. ರಾಜನಲ್ಲಿ ತಾನು ವಿಚಿತ್ರ ಪ್ರಭಾವ ಹಾಕಿದ್ದೇನೆಂಬ ಸಂಶಯ ಕೂಡ ಅವಳಿಗೆ ಇರಲಿಲ್ಲ.

ನೆಪೋಲಿಯನ್ನನ ಮನದಾಶೆಯನ್ನು ತಿಳಿಸಲು ಅವಳಲ್ಲಿಗೆ ಜನ ಹೋಯಿತು. ದೊರೆಗೆ ಖುಶಿ ಮಾಡಿದರ ದೇಶಕ್ಕೆ ಲಾಭವಾಗುವುದೆಂದು ಅವರು ಮಾರೀಗೆ ವಿವರಿಸಿದರು. ಆದರೆ ಅವಳು ಕಿವಿ-ಗೊಡಲಿಲ್ಲ. "ನಾನು ಅವನಲ್ಲಿಗೆ ಹೋಗಲಾರೆ" ಎಂದು ಖಂಡಿತವಾಗಿ ಹೇಳಿದಳು.

ಆದರೂ ನಂತರ ನೆಪೋಲಿಯನ್ ಆಹ್ವಾನಿಸಿದ ಸತ್ಕಾರಕ್ಕೆ ಇತರರ ಒತ್ತಾಯದಿಂದ ಅವಳು ಹೋಗಬೇಕಾಯಿತು. ಆತ ಆಕೆಯನ್ನು ತನ್ನೊ-ಡನೆ ಕುಣಿಯಲು ಕರೆದಾಗ ಅವಳು ನಿರಾ-ಕರಿಸಿದಳು. ಬೇಸರ ಪಟ್ಟ ದೊರೆ ಅವಳೊಡನೆ ಸಿಹಿ ಮಾತಾಡಿ ಮನ ಒಲಿಸಲು ಪ್ರಯತ್ನಿಸಿದ.

ಸತ್ಕಾರ ಮುಗಿದೊಡನೆ ಅವಳು ತನ್ನ ಮನೆಗೆ ತೆರಳಿದಳು. ಇನ್ನು ಮೇಲೆ ನೆಪೋಲಿಯನ್ ತನ್ನ ತಂಟೆಗೆ ಬರಲಾರನೆಂದು ಅವಳು ಭಾವಿಸಿದಳು. ಅವಳು ಮನೆಗೆ ಮುಟ್ಟುವುದೇ ತಡ. ರಾಜ ಸೇವಕ ಬಂದು ಒಂದು ಪತ್ರ ಕೊಟ್ಟ: "ನೀನು ಒಬ್ಬಳನ್ನೇ ನಾನು ನೋಡಿದ್ದು; ನಿನ್ನನ್ನು ಮಾತ್ರ ನಾನು ಪ್ರೀತಿಸುತ್ತೇನೆ; ನೀನು ಒಬ್ಬಳೇ ನನಗೆ ಬೇಕಿರುವುದು; ನನ್ನ ತಾಳ್ಮೆಯಿಲ್ಲದ ಹೃದಯಕ್ಕೆ ಸಮಾಧಾನ ಮಾಡಲು ಬೇಗನೇ ಒಂದು ಉತ್ತರ ಕೊಡು."

ಆ ಪತ್ರವನ್ನು ಮಾರೀ ಕೋಪದಿಂದ ಹರಿದು ಬಿಸಾಡಿದಳು. ತನ್ನ ಪಾತಿವ್ರತ್ಯವನ್ನು ಕಳೆದುಕೊಳ್ಳಲು ಅವಳು ಎಂದಿಗೂ ಸಿದ್ಧಳಿರಲಿಲ್ಲ. ಆದರೆ ನೆಪೋಲಿಯನ್ನನ್ನು ಸಮಾಧಾನಪಡಿಸದಿದ್ದಲ್ಲಿ ಬೇರೆಯವರ ಕೈಗೆ ಹೋದ ಪೋಲೆಂಡಿನ ಭೂಮಿ ಹಿಂದೆ ಪಡೆಯಲು ಅವನು ಕೈ ಎತ್ತಲಿಕ್ಕಿಲ್ಲ, ಜನರ ಕನಸು ನನಸಾಗಲಿಕ್ಕಿಲ್ಲ ಎಂದು ಅವಳಿಗೆ ಹೇಳಲಾಯಿತು.

ಮಾರಿಯ ಮನಸ್ಸು ಹೀಗೆ ಗೊಂದಲದಲ್ಲಿ ಬಿದ್ದು ಒದ್ದಾಡುತ್ತಿದ್ದಾಗ ನೆಪೋಲಿಯನ್ ಹಟ ಬಿಡದೆ ಅವಳಿಗೆ ಕಾಗದಗಳನ್ನು ಬರೆದು ತನ್ನ ಪ್ರೀತಿಯ ಆಳವನ್ನು ವಿವರಿಸುತ್ತಿದ್ದ. ತನ್ನ ಪ್ರೀತಿಗೆ ಪ್ರತಿಯಾಗಿ, ಪ್ರೀತಿಯನ್ನು ಬೇಡುತ್ತಿದ್ದ.

ಬಹಳ ಯೋಚಿಸಿದ ನಂತರ ತನ್ನ ದೇಶಕ್ಕಾಗಿ ನೆಪೋಲಿಯನ್ನನಿಗೆ ಶರಣಾಗತಳಾಗಲು ಅವಳು ಒಪ್ಪಿದಳು. ಇಬ್ಬರನ್ನು ಪ್ರೀತಿಸುವುದು ಸರಿಯಲ್ಲವೆಂದು ಮಾರೀ ಮರಳಿ ಗಂಡನಲ್ಲಿಗೆ ಹೋಗದೆ ನೆಪೋಲಿಯನ್ನನಲ್ಲಿಯೇ ಉಳಿದಳು. ಅವನ ಬರೀ ಉಪ-ಪತ್ನಿ ಮಾತ್ರ ಆಗದೆ ಹೆಂಡತಿಯಂತೆ ವಿಧೇಯತೆಯಿಂದ ಮತ್ತು ನಿಜ ಪ್ರೇಮದಿಂದ ಅವನೊಡನೆ ವಾಸಿಸತೊಡಗಿದಳು . ನೆಪೋಲಿಯನ್ ಆನಂದದ ಸಮುದ್ರದಲ್ಲಿ ಈಜತೊಡಗಿದ.

ಫ್ರೆಂಚ್ ಸೈನ್ಯವನ್ನು ಕೊಂಡು ಹೋಗಿ ಪೋಲೆಂಡಿನಿಂದ ಡಚ್ಚರನ್ನು ಹೊರಗೆ ಹಾಕಿ ನೆಪೋಲಿಯನ್ ತನಗೆ ಕೊಟ್ಟ ಮಾತನ್ನು ಅರ್ಧ ಪಾಲಿಸಿದ ಸುದ್ದಿ ಕೇಳಿ ಮಾರೀ ಸಂತೋಷದಿಂದ ಕುಣಿದಾಡಿದಳು. ತಕ್ಷಣ ಹೋಗಿ ನೆಪೋಲಿಯನ್ನ-ನನ್ನು ಭೇಟಿಯಾಗಲು ಆಶೆಪಟ್ಟಳು.

ಈ ಮಾತು ಮೇ ತಿಂಗಳದ್ದು. ನೆಪೋಲಿಯನ್ನನ ಸಂಗಡ ಅವಳು ನಾಲ್ಕು ತಿಂಗಳು ಕಳೆದಿದ್ದಳು. ಆದರೆ ಈ ಅವಧಿಯಲ್ಲಿ ಅವಳು ಅವನಿಗೆ ಬಹಳ ಒಗ್ಗಿ ಹೋಗಿದ್ದಳು. ನೆಪೋಲಿಯನ್ ಇಲ್ಲದೆ ತನ್ನ ಜೀವನ ಸಾಗಿಸಲು ಅವಳಿಗೆ ಆಗುತ್ತಿರಲಿಲ್ಲ.

ನೆಪೋಲಿಯನ್ ಫ್ರಾನ್ಸಿಗೆ ಮರಳಿ ಹೋಗಿದ್ದಾನೆ ಎಂದು ಯುದ್ಧಭೂಮಿಯಿಂದ ಸುದ್ದಿ ಬಂದಾಗ ಮಾರೀಗೆ ಬಹಳ ದುಃಖವಾಯಿತು. ಸಮಯ ಬಂದಾಗ ಕರೆಕಳಿಸುತ್ತೇನೆಂದು ನೆಪೋಲಿಯನ್ ಭರವಸೆ ಕೊಟ್ಟು ಬರೆದ ಪತ್ರ ಅವಳಿಗೆ ಸಿಕ್ಕಿತು.

ಜನವರಿ ೧೮೦೮ರಲ್ಲಿ ಕರೆ ಬಂತು. ಆ ತಿಂಗಳ ಕಡೆಯ ವಾರದಲ್ಲಿ ಪ್ಯಾರಿಸಿಗೆ ಹೋಗಿ ಅಲ್ಲಿ ಒಂದು ಮನೆ ಮಾಡಿ ನಿಂತಳು. ನೆಪೋಲಿಯನ್ ಗುಟ್ಟಿನಿಂದ ಅವಳಿಗೆ ಭೇಟಿಕೊಡುತ್ತಿದ್ದ. ಅವನು ಒಬ್ಬ ಸಾದಾ ನಾಗರಿಕನ ವೇಷ ಧರಿಸಿ ಅವಳೊಂದಿಗೆ ಪ್ಯಾರಿಸ್ಸಿನ ರಸ್ತೆಗಳನ್ನು ಮೆಟ್ಟಿದ. ಹೊಸದಾಗಿ ಮದುವೆಯಾದ ದಂಪತಿಗಳಂತೆ ಅವರು ತಿರುಗಾಡಿದರು. ಮರಗಳ ಬುಡದಲ್ಲಿ ಕೂತು ತಮಾಷೆಯ ಮಾತುಗಳನ್ನಾಡಿದರು, ಪ್ರೀತಿಯ ಸಾಗರದಲ್ಲಿ ತೇಲಾಡಿದರು.

ಮಾರೀ ದೇಶಕ್ಕಾಗಿ ತನ್ನ ಕರ್ತವ್ಯವನ್ನು ಮರೆತಿರಲಿಲ್ಲ. ಸಂಘಟಿತ ಪೋಲೆಂಡಿನ ವಿಷಯದಲ್ಲಿ ಪ್ರತಿ ಸಲ ಅವಳು ನೆನಪು ಮಾಡಿದಾಗ ನೆಪೋಲಿಯನ್ ಭರವಸೆ ಕೊಡುತ್ತಲೇ ಇರುತ್ತಿದ್ದ. ನೆಪೋಲಿಯನ್ ೧೮೦೮, ಏಪ್ರಿಲ್ ೨ ರಂದು ಮ್ಯಾಡ್ರಿಡ್‌ಗೆ ಹೋದ. ಮಾರೀ ಪೋಲೆಂಡಿಗೆ ಮರಳಿದಳು.

ಎರಡು ತಿಂಗಳ ನಂತರ ಅವರು ಪುನಃ ವಿಯೆನ್ನಾದಲ್ಲಿ ಭೇಟಿಯಾದರು. ಅಕ್ಟೋಬರ್ ತನಕ ಸುಖದಿಂದ ಒಟ್ಟಿಗೆ ಇದ್ದರು. ಮಾರೀಗೆ ಮಗುವಾಗುವ ಲಕ್ಷಣ ಕಂಡು ಬಂದಾಗ ನೆಪೋಲಿಯನ್ ಸಂತೋಷದಿಂದ ನಲಿದಾಡಿದ.

ಮಗುವಿಗೆ ಪೋಲೆಂಡಿನ ನಾಗರಿಕತೆ ಸಿಗುವ ಸಲುವಾಗಿ ಅಲ್ಲಿಯೇ ನೆಲಸಲು ಅವಳು ಪೋಲೆಂಡಿಗೆ ಮರಳಿದಳು. ಹೀಗೆ ಅವರ ಪ್ರೇಮ ಕಥೆ ಮುಕ್ತಾಯವಾಯಿತು. ತನ್ನ ದೇಶದಲ್ಲಿ ಅವಳು ನೆಪೋಲಿಯನ್ನನ ಗಂಡು ಮಗುವಿಗೆ ಜನ್ಮವಿತ್ತಳು. ಆದರೆ ಅವಳ ತ್ಯಾಗ ವ್ಯರ್ಥವಾಯಿತು. ಮಾರೀಗೆ ಕೊಟ್ಟ ವಚನ ಪೂರೈಸಲು ನೆಪೋಲಿಯನ್ನನಿಗೆ ಅವಕಾಶ ಸಿಗಲಿಲ್ಲ.

## ಮಾರೀ ಲುಯಿಸ್ :

ನೆಪೋಲಿಯನ್ನನ ಎರಡನೇ ಮದುವೆ ಆಸ್ಟ್ರಿಯಾದ ಈ ರಾಜಕುಮಾರಿಯೊಡನೆ ಆಗಲು ಕಾರಣ ಪ್ರೀತಿ ಅಲ್ಲ, ರಾಜಕಾರಣವಾಗಿತ್ತು.

ಮಾರೀ ಲುಯಿಜ್ ರಾಜಕಾರಣ ಚದುರಂಗದ ಗೊಂಬೆಯಾದಳು. ಯುರೋಪಿನ ರಾಜಕಾರಣಿಗಳು ನೆಪೋಲಿಯನ್ನನೊಡನೆ ಯುದ್ಧ ತಡೆಯುವ ಉಪಾಯದಿಂದ ಈ ಏರ್ಪಾಡು ಮಾಡಿದ್ದರು.

ಫ್ರೆಂಚ್ ದೊರೆಯನ್ನು ಶಾಂತಗೊಳಿಸಲು ಮತ್ತು ಅವನ ಆಕ್ರಮಣವನ್ನು ತಡೆಗಟ್ಟಲು ಆಸ್ಟ್ರಿಯದ ರಾಜ ಮೊದಲನೇ ಫ್ರಾನ್ಸಿಸ್ ತನ್ನ ಮಗಳನ್ನು ಅವನಿಗೆ ಮದುವೆ ಮಾಡಿಕೊಡಲು ಸಿದ್ಧನಾದ. ಈ ವಿವಾಹ ಸಂಬಂಧದಿಂದ ನೆಪೋಲಿಯನ್ನನ ಆಕ್ರಮಣದಿಂದ ತನ್ನ ದೇಶ ಸುರಕ್ಷಿತ ಉಳಿಯಬಹುದೆಂದು ಆಸ್ಟ್ರಿಯದ ರಾಜನ ಎಣಿಕೆಯಾಗಿತ್ತು.

ಮಾರೀ ನೆಪೋಲಿಯನ್ನನಿಗಿಂತ ೨೨ ವರ್ಷ ಕಿರಿಯಳು. ಅವಳು ಅವನನ್ನು ನೋಡಿರಲೂ ಇಲ್ಲ. ನೆಪೋಲಿಯನ್ ಒಬ್ಬ ರಾಕ್ಷಸನೆಂದು ಅವಳಿಗೆ ಚಿಕ್ಕಂದಿನಲ್ಲಿ ಹೇಳಲಾಗಿತ್ತು. ಆದರೂ ಅವಳ ತಂದೆ ಶಾಂತಿ ಸ್ಥಾಪಿಸುವ ಸಲುವಾಗಿ ಈ ಮದುವೆಗೆ ಒಪ್ಪಿದ.

ನೆಪೋಲಿಯನ್ ಮಗುವಾಗದ ಕಾರಣಕ್ಕಾಗಿ ಜೊಸೆಫಿನಳೊಡನೆ ವಿವಾಹ ವಿಚ್ಛೇದನ ಪಡೆದಿದ್ದ ಮಾತ್ರ. ವಿವಾಹ ವಿಚ್ಛೇದನದ ನಂತರ ನೆಪೋಲಿಯನ್ನನೊಡನೆ ಇದ್ದ ತನ್ನ ಪ್ರಭಾವ ಕಡಿಮೆ ಆಗಬಾರದೆಂಬ ಉದ್ದೇಶದಿಂದ ಜೊಸೆಫಿನ್ ರಾಜನಿಗೊಬ್ಬ ರಾಣಿಯನ್ನು ತರಲು ಯೋಚಿಸಿದಳು. ಹೀಗೆ ಮಾಡಿದರೆ ರಾಜ ತನ್ನ ಬಗ್ಗೆ ಖುಷಿಯಾಗಬಹುದಲ್ಲದೆ ಹೊಸ ರಾಣಿ ತನ್ನನ್ನು ಸ್ಮರಿಸುವಳು ಎಂದು ಜೊಸೆಫಿನಳ ವಿಚಾರವಾಗಿತ್ತು.

ಈ ಸ್ವಾರ್ಥಪೂರಿತ ಉದ್ದೇಶದಿಂದ ಜೊಸೆಫಿನ್ ಮಾರೀ ಲುಯಿಜಳನ್ನು ಆರಿಸಿದಳು. ಹಾಗೆಯೇ

ಆಸ್ಟ್ರಿಯದ ರಾಜ ತನ್ನ ಲಾಭ ನೋಡಿದ.

ಮಾರೀ ಬಾಲೆಯೂ ನಿತ್ರಾಣಳೂ ಮತ್ತು ಜನ್ಮತಃ ಅಲಸಿಯೂ ಆಗಿದ್ದಳು. ಪುರುಷ ಜಾತಿಯಿಂದ ಅವಳನ್ನು ಸಂಪೂರ್ಣವಾಗಿ ದೂರ ಇರಿಸಲಾಗಿತ್ತು. ಅವಳ ಸಾಕುಪ್ರಾಣಿಗಳೂ ಕೂಡ ಸ್ತ್ರೀ ವರ್ಗದವಾಗಿದ್ದವು. ವಿವಾಹದ ಸುದ್ದಿ ತಿಳಿದಾಗ ಅವಳು ಯಾವ ಪ್ರತಿಕ್ರಿಯೆಯನ್ನೂ ತೋರಿಸ ಲಿಲ್ಲ. ಸಂತೋಷವೂ ಇಲ್ಲ, ಬೇಸರವೂ ಇಲ್ಲ. ಅವಳಿಗೆ ಯಾವ ಭಾವನೆಗಳೂ ಇರಲಿಲ್ಲ.

ಲಗ್ನ ಕರಾರಿನ ದಸ್ಕತ್ತು ಫೆಬ್ರುವರಿ ೭, ೧೮೧೦ರಂದು ಆಯಿತು.

ನೆಪೋಲಿಯನ್ನನಿಗೆ ಬಹಳ ಸಂತೋಷವಾಯಿತು. ಮಾರೀ ತನಗೆ ಖಂಡಿತವಾಗಿ ಮಕ್ಕಳನ್ನು ಕೊಡುವಳೆಂದು ಅವನು ನಂಬಿದ ಮತ್ತು ಅವಳು ಕೂಡ ಈ ಹೊಸ ಅನುಭವದಿಂದ ಪ್ರಫುಲ್ಲಿತಳಾದಳು. ನೆಪೋಲಿಯನ್ನನಲ್ಲಿ ಅವಳು ದಯಾಳುತನ, ಪ್ರೀತಿ ಮತ್ತು ಉದಾರ ಮನಸ್ಸು ಕಂಡಳು, ಸಾವಕಾಶವಾಗಿ ಈ ಹೊಸ ಜೀವನಕ್ಕೆ ಹೊಂದಿಕೊಂಡು ರಾಜನಿಗೆ ಪ್ರತಿ ಪ್ರೇಮವನ್ನು ಕೊಡಲು ಶಕ್ತಳಾದಳು.

ವಿಚಾರ ಶಕ್ತಿಯಲ್ಲಿ ಅವಳು ದುರ್ಬಲಳಾದರೂ ಜೋಸೆಫಿನಳನ್ನು ನೆಪೋಲಿಯನ್ನನಿಂದ ಆದಷ್ಟು ದೂರ ಇಡಲು ಅವಳು ಪ್ರಯತ್ನ ಪಟ್ಟಳು. ಪತಿಯ ಹೃದಯದಲ್ಲಿದ್ದ ಜೋಸೆಫಿನಳ ಪ್ರತಿಮೆಯನ್ನು ಸಂಪೂರ್ಣವಾಗಿ ಒರಸಿ ತೆಗೆದು ಆ ಸ್ಥಳದಲ್ಲಿ ತಾನು ಕೂರಲು ಪ್ರಯತ್ನಿಸಿದಳು. ಹಾಗೂ ಅದರಲ್ಲಿ ಅವಳು ಕೆಲ ಮಟ್ಟಿಗೆ ಯಶಸ್ವಿಯೂ ಆದಳು. ಅವಳ ಪ್ರತಿಯೊಂದು ಮಾತನ್ನು ನೆಪೋಲಿಯನ್ ಕೇಳುತ್ತಿದ್ದ.

ಮಾರೀಗೆ ಮಗುವಾಗುವ ಲಕ್ಷಣ ಕಂಡು ಬಂದಾಗ ತಾನು ಭೂಲೋಕದ ತುತ್ತ ತುದಿ ಮುಟ್ಟಿದಂತೆ ನೆಪೋಲಿಯನ್ನನಿಗೆ ಭಾಸವಾಯಿತು. ಅವನು ಬಹಳವಾಗಿ ಪ್ರೀತಿಸತೊಡಗಿದ.

ಮಾರ್ಚ್ ೨೦. ೧೮೧೧ರಂದು ಮಾರೀ ಒಂದು ಗಂಡು ಮಗುವಿಗೆ ಜನ್ಮ ಕೊಟ್ಟಳು. ಜೋಸೆಫಿನ್ ಅಪೂರ್ಣ ಉಳಿದಿದ್ದ ನೆಪೋಲಿಯನ್ನನ ಆಶೆಯನ್ನು ಮಾರೀ ಪೂರೈಸಿದಳು.

ನೆಪೋಲಿಯನ್ನನ ಜೀವನದಲ್ಲಿ ಅದು ಸ್ಮರಣೀಯ ದಿನವಾಗಿತ್ತು. ಅವನು ಯಶಸ್ಸಿನ ಶಿಖರಕ್ಕೆ ಮುಟ್ಟಿದ್ದ. ಇಡೀ ಯುರೋಪಿನ ಒಡೆಯ ಅವನಾಗಿದ್ದ. ಅವನಿಗೆ ರಾಷ್ಟ್ರಗಳು ನಡುಗುತ್ತಿದ್ದವು.

ಯಶಸ್ಸು ಮತ್ತು ಗಂಡು ಮಗು ಹುಟ್ಟಿದ ತೃಪ್ತಿ ಪಡೆದ ಅವನ ಕಣ್ಣುಗಳು ಕುರುಡಾದವು. ಅವನ ಸುತ್ತ ಆಕ್ರಮಿಸಿದ ಕಪ್ಪು ಮೋಡಗಳನ್ನು ಅವನು ಕಾಣದಾದ. ತನ್ನ ಮಗ "ರೋಮಿನ ರಾಜ"ನೆಂದು ಘೋಷಿಸಿದ.

ರಾಜಕುಮಾರನನ್ನು ಮಾರೀ ಜಾಗ್ರತೆಯಿಂದ ನೋಡಿಕೊಂಡಳು. ಜೋಸೆಫಿನ್ ಮಗುವನ್ನು ನೋಡಲು ಆಶೆ ಪಟ್ಟಾಗ ಅವಳು ತೋರಿಸಲು ಒಪ್ಪಲಿಲ್ಲ. ಮಗುವನ್ನು ಜೋಸೆಫಿನಳಿಗೆ ತೋರಿಸ ಬಾರದೆಂದು ದಾಸಿಯರಿಗೆ ಆಜ್ಞೆ ಕೊಟ್ಟಳು.

ಮಗುವನ್ನು ತೋರಿಸಲು ಜೋಸೆಫಿನ್ ನೆಪೋಲಿಯನ್ನನಿಗೆ ಒತ್ತಾಯ ಮಾಡತೊಡಗಿದಳು. ಜೋಸೆಫಿನಳ ಮೇಲೆ ಇನ್ನೂ ಅಭಿಮಾನವಿದ್ದ ನೆಪೋಲಿಯನ್ ಮಗುವನ್ನು ನೋಡಲು ಅವಳಿಗೆ ಅವಕಾಶ ಕೊಟ್ಟನು. ಮಗುವನ್ನು ನೋಡಿ ಜೋಸೆಫಿನ್ ಮೊಣಕಾಲೂರಿ ಚುಂಬಿಸಿ ಹೇಳಿದಳು, "ಪ್ರೀತಿಯ ಮಗುವೆ, ನಿನಗಾಗಿ ನಾನು ಮಾಡಿದ ತ್ಯಾಗದ ಬಗ್ಗೆ ನಿನಗೆ ಒಂದು ದಿನ ತಿಳಿಯಬಹುದು. ಆ ವಿಷಯದಲ್ಲಿ ಗೌರವಿಡಲು ನಿನ್ನ ತಾಯಿ ನಿನಗೆ ಸಹಕಾರ ಮಾಡುವಳೆಂದು ನಾನು ನಂಬುತ್ತೇನೆ."

ನೆಪೋಲಿಯನ್ನನಿಗೆ ನಿಜವಾದ ತೊಂದರೆ ಪ್ರಾರಂಭವಾದದ್ದು ೧೮೧೩ನೇ ಏಪ್ರಿಲಿನಲ್ಲಿ. ಆಗ ಮಗುವಿಗೆ ಎರಡು ವರ್ಷ.

ನೆಪೋಲಿಯನ್ ಜರ್ಮನಿಯ ಗಡಿಗೆ ಹೊರಟಿದ್ದ. ಯುರೋಪಿಯನ್ ದೇಶಗಳ ಸಂಘಟನೆ ನೆಪೋಲಿಯನ್ನನಿಗೆ ಹಾಕಿದ ಸವಾಲಾಗಿತ್ತು. ಅವನ ಮಾವನೂ ವಿರೋಧಪಕ್ಷಕ್ಕೆ ಸೇರಿದ್ದ. ಮಾರೀಯ ಜೀವನದಲ್ಲಿ ಅತಿ ದುಃಖದ ಕಾಲವಾಗಿತ್ತದು.

ಒಂದು ಬದಿಯಲ್ಲಿ ತನ್ನ ಮಗುವಿನ ತಂದೆ ತನ್ನ ಪ್ರಿಯ ಪತಿ ಇದ್ದ. ಇನ್ನೊಂದು ಬದಿಯಲ್ಲಿ ತನಗೆ ಜನ್ಮವಿತ್ತ ತಂದೆ ಇದ್ದ. ಇವರ ನಡುವೆ ಸಿಕ್ಕಿಕೊಂಡು ಒದ್ದಾಡುತ್ತಿದ್ದಳು ದುರ್ಬಲೆ ಮಾರೀ ಲುಯಿಜ್.

ಫ್ರೆಂಚ್ ಸೈನ್ಯ ಪರಾಜಿತವಾದ ಸುದ್ದಿ ಕೇಳಿ ರಾಣಿಯಾದ ಮಾರೀ ಸರಕಾರ ನಡೆಸುವ ಪ್ರಯತ್ನ

ಮಾಡಿದಳು. ಆದರೆ ದುರ್ಬಲ ಸ್ವಭಾವದ ಅವಳಿಗೆ ಕಠಿಣ ನಿರ್ಧಾರಗಳನ್ನು ಕೈಗೊಳ್ಳಲು ಸಾಧ್ಯವಾಗಲಿಲ್ಲ. ಕೈ ಕೆಳಗೆ ಇದ್ದವರ ಹೃದಯದಲ್ಲಿ ಧೈರ್ಯ ತುಂಬುವುದರಲ್ಲಿ ಅವಳು ಸೋತಳು.

ಮಾರ್ಚ್, ೧೮೧೪ರಲ್ಲಿ ನೆಪೋಲಿಯನ್ ಎಲ್ಲವನ್ನೂ ಕಳೆದುಕೊಂಡ. ಎಲ್ಲೆಡೆಯೂ ಸೋಲನ್ನು ಅನುಭವಿಸಿ ತಲೆ ಕೆಡಿಸಿಕೊಂಡು ಪ್ಯಾರಿಸ್ಸಿಗೆ ಬಂದ.

ಕಾದಾಡಲು ಅವನಲ್ಲಿ ಸೈನ್ಯ ಉಳಿದಿರಲಿಲ್ಲ. ಹೀಗಾಗಿ ಅವನು ಶರಣಾಗತನಾಗಬೇಕಾಯಿತು.

ನೆಪೋಲಿಯನ್ ಮನದಲ್ಲಿಯೇ ನಿಶ್ಚಯಿಸಿದ ಒಂದು ದಿನ ದೊಡ್ಡ ಸೈನ್ಯ ತಂದು ಕಳೆದುಕೊಂಡ ರಾಜ್ಯವನ್ನು ಮರಳಿ ಪಡೆಯಬೇಕೆಂದು. ಗಡಿ ಪಾರಾಗಿ ಎಲ್ಬಾಕ್ಕೆ ಹೋಗುವಾಗ ಅವನು ಪತ್ನಿಗೆ ತನ್ನೊಡನೆ ಬರಲು ಹೇಳಿದ. ಆದಾಗದಿದ್ದರೆ ಮಗನನ್ನಾದರೂ ವೈರಿಗಳಿಂದ ದೂರ-ವಿರಿಸಬೇಕೆಂದು ಹೇಳಿದ.

ಆದರೆ ಮಾರೀಗೆ ತನ್ನ ಗಂಡನ ಪರಾಜಯದ ಮತ್ತು ವಿಪತ್ತಿನ ಕಾಲದಲ್ಲಿ ಅವನೊಂದಿಗಿರಲು ಧೈರ್ಯವಿರಲಿಲ್ಲ. ಅವಳ ಹೃದಯ ಭಯದಿಂದ ನಡುಗಿತು. ಪತಿಯನ್ನು ಬಿಟ್ಟು ಅವಳು ತನ್ನ ತೌರು ಮನೆಗೆ ಹೊರಟುಹೋದಳು.

ರಾಜರ ಕುಟುಂಬದಲ್ಲಿ ಜನಿಸಿದ ಸ್ತ್ರೀಯಲ್ಲಿ ಇರಬೇಕಾದ ಉತ್ತಮ ಗುಣಗಳ ಅಭಾವದಿಂದ ಅವಳು ನೆಪೋಲಿಯನ್ನನಿಗೆ ಬೆನ್ನು ಮಾಡಿ ಹೊರಟಳು.

ಆದರೂ ನೆಪೋಲಿಯನ್ನನಿಗೆ ಅವಳ ಮೇಲೆ ಇದ್ದ ಪ್ರೀತಿ ಕಡಿಮೆಯಾಗಲಿಲ್ಲ. ಎಲ್ಬಾಕ್ಕೆ ಗಡಿ ಪಾರಾಗಿ ಒಂದು ವರ್ಷದ ನಂತರ ನೆಪೋಲಿಯನ್ ಒಮ್ಮೆಲೆ ಫ್ರಾನ್ಸಿಗೆ ಮರಳಿ ಬಂದು ಅಧಿಕಾರ ತನ್ನ ಕೈಯಲ್ಲಿ ಮರಳಿ ಪಡೆದ ಶುಭ ಕಾಲದಲ್ಲಿ ಕೂಡ ಮಾರೀ ಉತ್ಸಾಹ ತೋರಲಿಲ್ಲ. ಆದರೆ ನೆಪೋಲಿಯನ್ನನ ಮಾರ್ಗದರ್ಶನವೂ ಇರಲಿಲ್ಲ. ವಾಟರ್ಲೂ ಕಾಳಗದಲ್ಲಿನ ಭೀಕರ ಪರಾಜಯದಿಂದ ಪುನಃ ಪದವಿಗೆ ಬರುವ ಅವಕಾಶ ಸಂಪೂರ್ಣವಾಗಿ ಮಣ್ಣು ಪಾಲಾಯಿತು. ಉಳಿದ ದಿನಗಳನ್ನು ಅವನು ಸೇಂಟ್ ಹೆಲೆನಾದಲ್ಲಿ ಕಳೆದ.

೧೮೧೯ರಲ್ಲಿ ಮಾರೀ ಇನ್ನೊಬ್ಬನೊಡನೆ ಮದುವೆಯಾಗಿ ಮಗುವಿಗೆ ಜನ್ಮವಿತ್ತಳು. ಈ ಸುದ್ದಿ ಕೇಳಿ ನೆಪೋಲಿಯನ್ನನಿಗೆ ಆಘಾತವಾಯಿತು. ಕೋಪದಿಂದ ಅವನು ಬಡಬಡಿಸಿದ, "ಆ ಮದುವೆಯಿಂದಲೇ ನನ್ನ ಸರ್ವನಾಶವಾಯಿತು."

ಮಾರೀ, ಡಿಸೆಂಬರ್ ೧೮, ೧೮೪೭ರಂದು ಸಾಯುವ ತನಕ ಆ ಗಂಡನೊಡನೆ ಉಳಿದಳು.

ನೆಪೋಲಿಯನ್ನನಿಂದ ಜನ್ಮ ಪಡೆದ ಮಗನ ಮೇಲೆ ಸರಿಯಾದ ಪ್ರಭಾವ ಬೀರಲು ಮಾರೀಗೆ ಸಾಧ್ಯವಾಗಲಿಲ್ಲ. ನೆಪೋಲಿಯನ್ನನಿಗೆ ಮಗನ ಮೇಲೆ ಇದ್ದ ಭರವಸೆ ಹಾಗೆಯೆ ಉಳಿಯಿತು.

ಒಂದು ದಿನ ನಿರಾಸೆಯಿಂದ ನೆಪೋಲಿಯನ್ನನ ಮಗ ಹೇಳಿದ, "ಜೊಸೆಫಿನ್ ನನ್ನ ತಾಯಿಯಾಗಿದ್ದರೆ ನನ್ನ ತಂದೆಯನ್ನು ಸೇಂಟ್ ಹೆಲೆನಾಕ್ಕೆ ಕಳಿಸುತ್ತಿರಲಿಲ್ಲ. ಮತ್ತು ನನಗೆ ಇಲ್ಲಿ ವಿಯೆನ್ನಾದಲ್ಲಿ ಕೊಳೆಯುವ ಅಗತ್ಯವಿರುತ್ತಿರಲಿಲ್ಲ."

ಜೊಸೆಫಿನಳ ಗುಣ ಮತ್ತು ಸಾಮರ್ಥ್ಯಗಳನ್ನು ಮಾರೀ ಪಡೆದಿದ್ದರೆ ಚರಿತ್ರೆಯ ದಿಕ್ಕು ಬದಲಾಗುತ್ತಿತ್ತೋ ಏನೋ. ನೆಪೋಲಿಯನ್ನನ ಕೊನೆಯ ದಿನಗಳಲ್ಲಿ ಮಾರೀ ಅವನೊಂದಿಗೆ ಉಳಿದಿದ್ದರೆ ನೆಪೋಲಿಯನ್ನನಿಗೆ ಇಂದು ಸಿಗುವ ಗೌರವದ ಪಾಲು ಅವಳಿಗೂ ದೊರೆಯುತ್ತಿತ್ತು. ✿



"ನಿನ್ನತ್ತೆ ನಿನ್ನನ್ನ ಹೊಡೆದ್ಲು ಅಂದೆಯಲ್ಲ."
"ಹೌದು ಸರ್."
"ನಿನ್ನ ಹೆಂಡ್ತಿ ನಿನ್ನತ್ತ ಸ್ಟೂಲ್ ಎಸೆದ್ಲು ಅಂದೆಯಲ್ಲ."
"ಹೌದು ಸಾರ್."
"ಆದ್ರೆ ಯಾಕೆ?"
"ನಾನು ಇವಳು ಅಂತ ತಿಳಕೊಂಡು ಅವಳ ಹತ್ರ ಹೋದೆ ಸಾರ್..."

# ಜಾಗತಿಕ ಹಸಿವೆ

## ನಾಲ್ಕು ಅಭಿಪ್ರಾಯಗಳು

ಕ. ಚ. ಪಾಟೀಲ

ಹೆಚ್ಚಿನ ಸಹಾಯಕ್ಕಾಗಿ ಮೊರೆಯಿಡುತ್ತಿರುವ ಅನೇಕ ಅನಭಿವೃದ್ಧ ರಾಷ್ಟ್ರಗಳನ್ನು ಆಹಾರದ ಅಭಾವವೆಂಬ ಭೂತ ಬೆನ್ನಟ್ಟಿದೆ. ಇದಕ್ಕೆ ಸ್ಪಷ್ಟ ಪರಿಹಾರವೇನಿದೆ. ಅತಿಯಾದ ಜನಸಂಖ್ಯೆಯ ಹೆಚ್ಚಳವನ್ನು ತಡೆಗಟ್ಟುತ್ತ, ಆಹಾರ ಉತ್ಪಾದನೆಯನ್ನು ಹೆಚ್ಚಿಸುವದು. ಆದರೆ ಇದು ಸಮಸ್ಯೆಯ ಪರಿಹಾರದಲ್ಲಿ ಒಂದು ಭಾಗ ಮಾತ್ರ ಎನ್ನುವುದು 'ಆಹಾರ ಮೊದಲು' (food first) ಎಂಬ ಕುತೂಹಲ ಕೆರಳಿಸುವ ಪುಸ್ತಕ ಬರೆದ ಇಬ್ಬರು ಲೇಖಕರ ಅಭಿಪ್ರಾಯ. ಇಂದು ಹಾಗೂ ಮುಂದೆಯೂ ಜಗತ್ತಿನಲ್ಲಿಯ ಎಲ್ಲ ರಾಷ್ಟ್ರಗಳು ಆಹಾರದ ಅಭಾವದಿಂದ ಮುಕ್ತವಾಗಿ ತಮಗೆ ಬೇಕಾಗುವ ಆಹಾರವನ್ನು ತಾವೇ ಬೆಳೆದುಕೊಳ್ಳಬಲ್ಲವೆಂದು ಅವರು ವಾದಿಸುತ್ತಾರೆ.

### ಒಂದು

ಆಹಾರದ ಅಭಾವದಿಂದಾಗಿ ಜನತೆ ಹಸಿದಿದ್ದಾರೆ, ಹೆಚ್ಚು ಆಹಾರ ಬೆಳೆಯುವ ಸಾಧನೋಪಾಯದ ಮಿತಿಯನ್ನು ಮೀರಿ ಜನಸಂಖ್ಯೆ ಬೆಳೆಯುತ್ತಿದೆ.

೧೯೭೦ ರಲ್ಲಿ ಆಹಾರದ ಅಭಾವ ತಲೆದೋರಿದಾಗ ಪ್ರತಿಯೊಬ್ಬನಿಗೂ ದಿನಕ್ಕೆ ೩೦೦೦ ಕ್ಯಾಲರಿಗಳಷ್ಟು ಶಕ್ತಿ ಉತ್ಪಾದಿಸುವ ಜೀವನ ಸತ್ವವುಳ್ಳ ಧಾನ್ಯಗಳು ಸಂಗ್ರಹವಾಗಿದ್ದ ಬಳಿಕ ಆಹಾರ ಅಭಾವವೆಂಬ ಸಮಸ್ಯೆಯನ್ನು ಗಂಭೀರವಾಗಿ ಅವಲೋಕಿಸಬೇಕಾಗಿದೆ.

ನಮ್ಮ ಈಗಿನ ಜನಸಂಖ್ಯೆ ಭೂಮಿಯ ಮಿತಿಯನ್ನು ಮೀರಿದೆ ಎಂಬ ಪ್ರಚಲಿತ ಅಭಿಪ್ರಾಯವನ್ನು ಹೋಗಲಾಡಿಸಬೇಕು. ಹೆಚ್ಚಾಗಿ ಹಸಿದ ಜನತೆ ಎಲ್ಲಿದೆಯೋ ಅಲ್ಲಿರುವ ಸಾಧನ ಸೌಕರ್ಯಗಳಿಂದಲೇ ಆಹಾರ ಉತ್ಪಾದನೆಯನ್ನು ಹೆಚ್ಚು ಮಾಡಲು ಶಕ್ಯವೇ ಎಂಬುದನ್ನು ಯೋಚಿಸಬೇಕಾಗುತ್ತದೆ.

ಈಗ ಬೆಳೆಯುವ ಬೆಳೆ ಹಾಗೂ ಸುಧಾರಣೆಯಾದ ಬಳಿಕ ಬರುವ ಬೆಳೆಗಳ ಅಂತರವನ್ನು ಎಣಿಕೆ ಮಾಡಿದರೆ ಇನ್ನೂ ಹೆಚ್ಚು ಬೆಳೆಯುವದು ಸಾಧ್ಯವಿದೆಯೆಂದು ಗೊತ್ತಾಗು



289-9

ತ್ತದೆ. ಜಗತ್ತಿನಲ್ಲಿ ಉಳುವ ಸಾಧ್ಯತೆ ಇರುವ ಭೂಮಿಯ ಪ್ರತಿಶತ ೪೪ರಷ್ಟು ಭೂಮಿ ಮಾತ್ರ ಇಂದು ವ್ಯವಸಾಯಕ್ಕೆ ಉಪಯೋಗ ವಾಗುತ್ತದೆ. ಅನಭಿವೃದ್ಧ ರಾಷ್ಟ್ರಗಳ ಸರಾಸರಿ ೧॥ ಪಟ್ಟು ಹೆಚ್ಚು ಬೆಳೆಯನ್ನು ಔದ್ಯೋಗಿಕ ರಾಷ್ಟ್ರಗಳು ಉತ್ಪಾದಿಸುತ್ತವೆ. ಈಗ ಒಂದೇ ಬೆಳೆಯನ್ನು ಕೊಡುವ ಭೂಮಿಯೇ, ನೀರಾವರಿ ಹಾಗೂ ಇತರ ಸುಧಾರಿತ ಕ್ರಮಗಳಿಂದಾಗಿ, ಎರಡು ಸಾರಿ ಅಥವಾ ಅದಕ್ಕಿಂತ ಹೆಚ್ಚಿಗೆ ಬೆಳೆಗಳನ್ನು ಕೊಡಬಲ್ಲದು. ಭೌತಿಕ ಗುಣಕ್ಕಿಂತ, ಸಾಮಾಜಿಕ ಪರಿಸರವೇ, ಅಧಿಕ ಉತ್ಪಾದನೆಗೆ, ಅನಭಿವೃದ್ಧ ರಾಷ್ಟ್ರಗಳಲ್ಲಿ ತಡೆಯೊಡ್ಡಿದೆ. ಆಹಾರ ಉತ್ಪಾದನೆಗೆ ಬೇಕಾಗುವ ಸಾಧನ-ಸೌಕರ್ಯಗಳು ಪ್ರಜಾಪ್ರಭುತ್ವಕ್ಕೆ ತಕ್ಕದಲ್ಲದ ರೀತಿಯಲ್ಲಿ ನಿಯಂತ್ರಿತವಾದದ್ದೇ ಅಭಿವೃದ್ಧಿಗೆ ತಡೆಯುಂಟುಮಾಡಿದೆ.

ಹಸಿದ ಜನತೆ ಹೆಚ್ಚಾಗಿರುವ ಅನೇಕ ರಾಷ್ಟ್ರಗಳಲ್ಲಿ, ದೊಡ್ಡ ಭೂಮಾಲಿಕರು, ಅಲ್ಲಿಯ ಬಹುಪಾಲು ಭೂಮಿಯ ಒಡೆಯರಾಗಿದ್ದಾರೆ. ಜನಸಂಖ್ಯೆಯ ಪ್ರತಿಶತ ೩ ರಷ್ಟು ಇರುವ ಭೂಮಾಲಿಕರು, ಅಲ್ಲಿರುವ ಭೂಮಿಯ ಪ್ರತಿಶತ ೮೦ ರಷ್ಟು ಭೂಮಿಯನ್ನು ಹೊಂದಿದ್ದಾರೆ. ಭೂಮಾಲಿಕರು ೫೦ ಹೆಕ್ಟೇರ್ ಅಥವಾ ಅದಕ್ಕಿಂತ ಹೆಚ್ಚಿಗೆ ಭೂಮಿಯ ಒಡೆಯರಾಗಿದ್ದಾರೆಂದು ೮೩ ರಾಷ್ಟ್ರಗಳ ಅಧ್ಯಯನದಿಂದ ತಿಳಿದುಬಂದಿದೆ. ಆದರೆ ಈ ಭೂಮಾಲಿಕರು ಹೆಕ್ಟೇರ್ ಒಂದಕ್ಕೆ ಚಿಕ್ಕ ಭೂಹಿಡುವಳಿದಾರನಿಗಿಂತ ಕಡಿಮೆ ಪ್ರಮಾಣದಲ್ಲಿ ಬೆಳೆಯುತ್ತಾರೆ.

ಇದರೊಂದಿಗೆ ತೃತೀಯ ರಾಷ್ಟ್ರಗಳ ಚಿಕ್ಕ-ಭೂಹಿಡುವಳಿದಾರರು ತಮಗೆ ಎಷ್ಟು ಬೆಳೆಯಲು ಶಕ್ಯವೋ ಅಷ್ಟನ್ನು ಬೆಳೆಯುತ್ತಿಲ್ಲ. ಕಾಯ್ದೆಬಾಹಿರವಾದ ಲೇವಾದೇವಿ ವ್ಯವಹಾರ, ಸಾರಿಗೆ, ಪೇಟೆಗಳೆಲ್ಲವೂ ದೊಡ್ಡ ಪ್ರಭಾವಿ ಭೂಮಾಲಿಕರ ಏಕಾಧಿಪತ್ಯಕ್ಕೆ ಒಳಗಾಗಿವೆ.

ಯಾವ ರಾಜ್ಯಗಳಲ್ಲಿ ಜನತೆ ಹಸಿವೆಯಿಂದ ಬಳಲುತ್ತಿದೆಯೋ ಅಲ್ಲಿ ಉಳಲು ಯೋಗ್ಯ-ವಿರುವ ಭೂಮಿಯನ್ನು ಸಂಪೂರ್ಣವಾಗಿ ಉಳಲು ಉಪಯೋಗಿಸಿಕೊಂಡಿಲ್ಲ. ಅಲ್ಲದೆ, ಉಳುತ್ತಿದ್ದ ಭೂಮಿಯನ್ನೂ ಸರಿಯಾಗಿ ಉಪಯೋಗಿಸಿಕೊಂ-ಡಿಲ್ಲ. ದಿನನಿತ್ಯದ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವಷ್ಟೂ ಹಣವಿರದ ಬಹುಸಂಖ್ಯಾಕರಿಗೆ, ಹೆಚ್ಚು ಬೆಳೆಯಲು ಬೇಕಾಗುವ ಸಾಧನ-ಸೌಕರ್ಯಗಳನ್ನು ಕೊಳ್ಳಲು ಆಗುವದಿಲ್ಲ. ಹೀಗಾಗಿ ಹೆಚ್ಚಿಗೆ ಹಣ ಕೊಟ್ಟು ಕೊಳ್ಳುವ ಹಾಗೂ ರಫ್ತುಮಾಡುವ ದೊಡ್ಡ ಭೂಮಾಲಿಕರಿಗೆ ಆ ಸೌಕರ್ಯಗಳೆಲ್ಲಾ ದೊರೆಯುತ್ತವೆ. ಆ ಕಾರಣವಾಗಿ ರಫ್ತಾಗುವ ಬೆಳೆಗಳು ಹೆಚ್ಚಾಗುತ್ತವೆ. ಅಲ್ಲದೆ ಆ ರಾಷ್ಟ್ರಗಳ ಜನತೆಗೆ ಅವಶ್ಯವಿರುವ ಆಹಾರ ಬೆಳೆಗಳು ನಿರ್ಲಕ್ಷ್ಯಕ್ಕೆ ಒಳಗಾಗುತ್ತವೆ. ಮಧ್ಯ ಅಮೇರಿಕ ಹಾಗೂ ಕ್ಯಾರಿಬಿಯನ್ ರಾಷ್ಟ್ರಗಳಲ್ಲಿ ಪ್ರತಿಶತ ೭೦ ರಷ್ಟು ಮಕ್ಕಳಿಗೆ ಸತ್ವಯುತ ಆಹಾರದ ಅಭಾವವಿದೆ. ಆದರೂ ಅಲ್ಲಿರುವ ಫಲವತ್ತಾದ ಭೂಮಿಯ ಅರ್ಧ ಭಾಗವನ್ನು ರಫ್ತು ಮಾಡುವ ಬೆಳೆಗಾಗಿಯೇ ಉಪಯೋಗಿಸಲಾಗುತ್ತಿದೆ. ೧೯೭೦ರಲ್ಲಿ ಆಫ್ರಿಕ ಖಂಡದಲ್ಲಿಯ ಸಹಲಿಯನ್ ದೇಶಗಳಲ್ಲಿ ಆಹಾರ ಅಭಾವದಿಂದಾಗಿ ಅನೇಕ ಜನತೆ ಹಸಿವೆ-ಯಿಂದ ಇದ್ದಾಗಲೂ ಆ ದೇಶಗಳು ಪರದೇಶಗಳಿಗೆ ರಫ್ತನ್ನು ಹೆಚ್ಚಿಸಿದವು. ಅಮೇರಿಕದ ಸಂಯುಕ್ತ ಸಂಸ್ಥಾನಗಳಿಗೆ ಆಮದಾಗುವ ಎಲ್ಲಾ ಬೆಳೆಗಳೂ ಆಹಾರ ಅಭಾವವಿರುವ ರಾಷ್ಟ್ರಗಳಿಂದ ಬಂದವುಗಳಾಗಿವೆ.

ಜನಸಂಖ್ಯೆಯ ಹೆಚ್ಚಳವೇ ಹಸಿವೆಗೆ ಕಾರಣವಾದರೆ, ಹೆಚ್ಚಿನ ಜನಸಂಖ್ಯೆ ಇರುವ ರಾಷ್ಟ್ರಗಳಲ್ಲಿ, ಹಸಿದವರು ಹೆಚ್ಚಿನ ಸಂಖ್ಯೆಯಲ್ಲಿರಬಹುದೆಂದು ಭಾವಿಸಬೇಕಾಗುತ್ತದೆ. ಆದರೆ ಈ ರೀತಿಯ ಪರಸ್ಪರ ಸಂಬಂಧ ಕಂಡುಬರುವದಿಲ್ಲ. ಉದಾಹರಣೆಗೆ, ಭಾರತದಲ್ಲಿ ಸಾಗುವಳಿಯಾದ ಪ್ರತಿ ಹೆಕ್ಟೇರ್ ಭೂಮಿಯ ಮೇಲೆ ಅವಲಂಬಿಸಿದ ಜನಕ್ಕಿಂತ ಚೀನದಲ್ಲಿ ಪ್ರತಿಶತ ೫೦ರಷ್ಟು ಹೆಚ್ಚಿಗೆ ಜನ ಅವಲಂಬಿಸಿದ್ದಾರೆ. ಆದರೂ ಚೀನದಲ್ಲಿ ಯಾರೊಬ್ಬರೂ ಹಸಿವೆಯಿಂದ ಬಳಲುತ್ತಿಲ್ಲವಂತೆ. ಬಾಂಗ್ಲಾ ದೇಶದಂತಹ ಚಿಕ್ಕ ರಾಷ್ಟ್ರವನ್ನೊಳಗೊಂಡು

ಕಾರ್ಮಿಕರ ಸಮಸ್ಯೆಗಳಿಂದ ಪರಿಹಾರ ಪಡೆಯಲು. ವ್ಯವಸಾಯದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಯಂತ್ರೋಪಕರಣಗಳನ್ನು ಬಳಸುತ್ತಾರೆ.

ಜನತೆಗೆ ಆಹಾರ ಉತ್ಪಾದಿಸಲು ಅವಕಾಶ ಕೊಡದಿರುವುದು, ಅವರನ್ನು ಹಸಿವೆಯ ದವಡೆಗೆ ಒಡ್ಡಿದಂತೆಯೇ ಸರಿ. "ಭೂಮಿ ಎಷ್ಟೇ ಚೆನ್ನಾಗಿ ಬೆಳೆದರೂ ಭೂರಹಿತನಾದವನು ಎಂದೂ ಸಾಕಷ್ಟು ಊಟ ಮಾಡಲಾರ" ಎಂದು ವಿಚಾರ ರಾಜ್ಯದ. ದಿನಕ್ಕೆ ಮೂರು ರೂಪಾಯಿ ಕೂಲಿ ಪಡೆಯುವ ಕೃಷಿ ಕಾರ್ಮಿಕನೊಬ್ಬನ ಅಭಿಪ್ರಾಯ.

ಜಗತ್ತಿನಾದ್ಯಂತ ಎಲ್ಲ ರಾಷ್ಟ್ರಗಳನ್ನು ಅಭ್ಯಸಿಸಿದ ನಂತರ ತಿಳಿದುಬಂದ ಸಂಗತಿಯೆಂದರೆ ಪ್ರತಿಯೊಬ್ಬನಿಗೂ ಸಾಕಾಗುವಷ್ಟು ಆಹಾರ ಉತ್ಪಾದನೆಯಾಗುತ್ತಿದ್ದರೂ ಹಳ್ಳಿಯ ಜನತೆಯ ಜೀವನ ಕೆಳಮಟ್ಟಕ್ಕೆ ಇಳಿದಿದೆ.ಹಾಗೂ ಅಲ್ಲಿ ಹಸಿವೆ ತಾಂಡವಾಡುತ್ತಿದೆ. ಇನ್ನು ಆಹಾರ ಉತ್ಪಾದಿಸುವಂಥ ತಮ್ಮದೇ ಆದ ಭೂಮಿಯನ್ನು ಪಡೆದ ಜನತೆ ತಮ್ಮ ಜೀವನ ಮಟ್ಟವನ್ನು ಸುಧಾರಿಸಿಕೊಂಡಿಲ್ಲ. ಅಲ್ಲದೆ ಆ ಭೂಮಿಗಳಿಂದ ಅಧಿಕ ಬೆಳೆ ಪಡೆಯುವಂತೆ ಅವುಗಳನ್ನು ಪರಿಷ್ಕರಿಸಿಲ್ಲ. ಮಾನವರ ಎಲ್ಲ ಶಕ್ತಿಯೂ ಸರಿಯಾಗಿ ಹಾಗೂ ಸುಸಂಘಟಿತವಾಗಿ ಕಾರ್ಯೋನ್ಮುಖವಾದಲ್ಲಿ. ಮರುಭೂಮಿಯನ್ನೆ ಫಲವತ್ತಾದ ಭೂಮಿಯನ್ನಾಗಿ ಮಾಡಬಹುದಾಗಿದೆ.

## ಮತ್ತೊಂದು

ಅನಭಿವೃದ್ಧ ರಾಷ್ಟ್ರಗಳಲ್ಲಿ ಯಾವ ಬೆಳೆಗಳು, ನೈಸರ್ಗಿಕವಾಗಿ ಹೆಚ್ಚಾಗಿ ಬೆಳೆಯುತ್ತಿವೆಯೋ ಅಂಥ ಬೆಳೆಗಳನ್ನೇ ಹೆಚ್ಚಾಗಿ ಬೆಳೆದು ಪರದೇಶಗಳಿಗೆ ರಫ್ತು ಮಾಡಬೇಕು. ಮತ್ತು ಅದರಿಂದ ಗಳಿಸಿದ ಹಣದಿಂದ ಆಹಾರ ಹಾಗೂ ಆಧುನಿಕ ಯಂತ್ರಗಳನ್ನು ಕೊಂಡುಕೊಳ್ಳಬೇಕು.

ಸತ್ವಹೀನ ಬೆಳೆಗಳನ್ನು ಬೆಳೆಯಲು ನೈಸರ್ಗಿಕ ವಾತಾವರಣದ ಅನುಕೂಲವಿದ್ದರೂ ಅಂಥ ಬೆಳೆಗಳನ್ನು ಬೆಳೆಯಲು ಹೆಚ್ಚಿನ ಪ್ರಯತ್ನ ಮಾಡುವುದು ಲಾಭದಾಯಕವಾಗಿ ಪರಿಣಮಿಸುವುದಿಲ್ಲ. ಕೊಕೊ, ಚಹಾ, ಕಬ್ಬು ಮುಂತಾದವುಗಳನ್ನು ಬೆಳೆಯದೆ. ಅನೇಕ ವಿಧವಾದ ಸತ್ವಯುತ ಬೆಳೆಗಳನ್ನು ಬೆಳೆಯಬಹುದು. ರಫ್ತು ಬೆಳೆಗಳನ್ನು ಶ್ರಮಪಟ್ಟು ಬೆಳೆದವರಿಗೆ, ಯಾವ ಲಾಭವೂ ಆಗುವುದಿಲ್ಲ. ಒಂದು ಪಕ್ಷ ಲಾಭ ಬಂದರೂ ಬೇರೆ ಜನವೆ ಅದನ್ನು ಬಡೆಯುತ್ತಾರೆ. ಸಂಗ್ರಹವಾದ ವಿದೇಶಿ ವಿನಿಮಯದಿಂದ ಆಮದು ಮಾಡಿಕೊಂಡ ಆಹಾರವು ಸಾಮಾನ್ಯವಾಗಿ ಹಳ್ಳಿಯ ಜನತೆಯ ಉಪಯೋಗಕ್ಕೆ ಬಾರದೇ, ಅದು ಪಟ್ಟಣಿಗರಿಗೆ ಮಾತ್ರ ಪ್ರಯೋಜನಕ್ಕೆ ಬರುತ್ತದೆ.

ಸೆನೆಗಲ್ ರಾಷ್ಟ್ರದ ಬಹುಪಾಲು ಭೂಮಿಯಲ್ಲಿ ಯುರೋಪಿನ ರಾಷ್ಟ್ರಗಳಿಗೆ ರಫ್ತು ಮಾಡಲೆಂದೇ ನೆಲಗಡಲೆಯನ್ನು ಬೆಳೆಯುತ್ತಾರೆ. ಅದರಿಂದ ಸಂಪಾದಿಸಿದ ವಿದೇಶಿವಿನಿಮಯದ ಕೆಲ ಭಾಗದಿಂದ ಗೋಧಿಯನ್ನು ಆಮದು ಮಾಡಿಕೊಂಡು. ಅಲ್ಲಿಯ ಪಟ್ಟಣದಲ್ಲಿ ವಾಸಿಸುವವರಿಗಾಗಿ ಫ್ರೆಂಚ್ ಮಾದರಿಯ ಬ್ರೆಡ್ ತಯಾರಿಸುತ್ತಾರೆ.

ಉಂಟಾಗುವುದೆಂದು ರಫ್ತು ಬೆಳೆಗಳನ್ನು ಅಧಿಕ ಪ್ರಮಾಣದಲ್ಲಿ ಬೆಳೆದರೆ ನಂತರ ಅದರ ಪರಿಣಾಮವಾಗಿ ಹಳ್ಳಿಗಳಲ್ಲಿ ಬಡತನ ಇನ್ನೂ ಹೆಚ್ಚಾಗುತ್ತದೆ. ದಿನನಿತ್ಯ ಉಪಯೋಗಿಸುವ ವಸ್ತುಗಳ ಬೆಲೆ, ಜಾಗತಿಕ ಪೇಟೆಯಲ್ಲಿ ಹೆಚ್ಚಾದಂತೆ, ಕೃಷಿ ಕಾರ್ಮಿಕನ ಆದಾಯ ಕಡಿಮೆಯಾಗುತ್ತದೆ. ಕಳೆದ ಕೆಲವು ವರ್ಷಗಳಲ್ಲಿ ಸಕ್ಕರೆಯ ಬೆಲೆಯು ಜಾಗತಿಕ ಪೇಟೆಯಲ್ಲಿ ಗಮನಾರ್ಹವಾಗಿ ಹೆಚ್ಚಿದರೂ ಡೊಮಿನಿಕನ್ ರಿಪಬ್ಲಿಕ್‌ನಲ್ಲಿ ಕಬ್ಬು ಕೊಯ್ಯುವವರ ಕೂಲಿಯು ಕಡಿಮೆಯಾಯಿತು.

ಕೃಷಿ ಕಾರ್ಮಿಕರ ಅಭ್ಯುದಯಕ್ಕೆ, ಅಲ್ಲಿನ ಸರಕಾರವು ಅವಕಾಶ ಕೊಡದೆ, ಅವರನ್ನು ಹತ್ತಿಕ್ಕುತ್ತದೆ. ಬೇರೆ ರಾಷ್ಟ್ರಗಳಿಗೆ ಸ್ಪರ್ಧಾತ್ಮಕವಾಗಿ ರಫ್ತು ಮಾಡುವ ಅವಕಾಶ ತಪ್ಪಿಹೋಗಬಹುದೆಂದು, ಸರಕಾರವು ಕೃಷಿಕಾರ್ಮಿಕರ ಅಭ್ಯುದಯವನ್ನು ತಳ್ಳಿ ಹಾಕುತ್ತದೆ. ಫಿಲಿಪೈನ್ಸನಂತಹ ಮಲವೊಂದು ರಾಷ್ಟ್ರಗಳಲ್ಲಿ ರಫ್ತು ಬೆಳೆ ಬೆಳೆಯುವ ಭೂಮಿಗಳು, ಭೂಸುಧಾರಣಾ ಕಾನೂನುಗಳಿಂದ ರಿಯಾಯಿತಿ ಪಡೆದಿವೆ. ಇದರಿಂದಾಗಿ ಕೆಲವು ಸರಕಾರಗಳು,

ಕೇವಲ ಪ್ರಯುಕ್ತಿಯು ಭೀಕರತ ಬಡತನವನ್ನು ಮುಂದುವರಿಸುತ್ತವಲ್ಲದೆ. ಅವಶ್ಯವಿರುವ ಆಹಾರ ಧಾನ್ಯಗಳ ಬೆಳೆಯನ್ನು ಕಡಿಮೆ ಮಾಡಿ ರಫ್ತು ಮಾಡುವ ಬೆಳೆಗಳನ್ನು ಹೆಚ್ಚಿಸಿ. ಭೂಮಿಗಳ ಮರುಹಂಚಿಕೆಗಳನ್ನು ತಡೆಯುತ್ತವೆ. ಆಹಾರ ಸ್ವಾವಲಂಬನೆಯ ಯೋಜನೆಗಳು ಜನತೆಯ ಕ್ಷೇಮಾಭಿವೃದ್ಧಿಯ ಬೇಡಿಕೆಗಳನ್ನು ಗಮನಿಸಬೇಕಲ್ಲದೆ. ರಫ್ತಿನಿಂದ ಬರುವ ವಿದೇಶವಿನಿಮಯದ ಆಧಾರ ಕಡೆಗೇ ಹೆಚ್ಚಿನ ಲಕ್ಷ್ಯ ಕೊಡಬಾರದು. ಪ್ರತ್ಯೇಕವಾಗಿ ಆಹಾರದ ಸ್ವಾವಲಂಬನೆಯೊಂದನ್ನೇ ಸಾಧಿಸಲು ಬರುವದಿಲ್ಲ. ವ್ಯಾಪಾರವು ಹೆಚ್ಚಿನ ಅಭಿವೃದ್ಧಿಯನ್ನು ಸಾಧಿಸಲು ಕಾರಣವಾಗುತ್ತದೆ. ಆದರೆ ಜನತೆಯ ಬಡತನವನ್ನು ಹೆಚ್ಚಿಸುವಂಥ ರಫ್ತು ವ್ಯಾಪಾರವನ್ನು ರಾಷ್ಟ್ರಗಳು ಕೈಕೊಳ್ಳಬಾರದು.

## ಮಗುದೊಂದು

ಶ್ರೀಮಂತ ಹಾಗು ಬಡ ರಾಷ್ಟ್ರಗಳ ಮಧ್ಯೆ ಹಸಿವು ಸ್ಪರ್ಧೆಯ ವಿಷಯವಾಗಿದೆ.

ಸ್ಪರ್ಧೆಯಂತಿರುವ ಈ ಹಸಿವು, ಬೇಗೆ ರಾಷ್ಟ್ರಗಳಲ್ಲಿರುವ ಬಹುಸಂಖ್ಯಾತ ಜನಸಾಮಾನ್ಯಕ್ಕೆ ಭಯವನ್ನುಂಟುಮಾಡುತ್ತದೆ. ಅಭಿವೃದ್ಧ ಹಾಗೂ ಅನಭಿವೃದ್ಧ ರಾಷ್ಟ್ರಗಳಲ್ಲಿ ವಾಸಿಸುವ ಬಡವರು, ನಿಜವಾಗಿಯೂ ಹಸಿವೆಯಿಂದ ನೊಂದಿರುತ್ತಾರೆ. ಭೂಮಿಗಳ ಹಾಗೂ ಆಹಾರ ಉತ್ಪಾದನಾ ಸಂಪನ್ಮೂಲಗಳ ಮೇಲಿನ ಕೇಂದ್ರೀಕರಣ ಎರಡೂ ಪ್ರಕಾರದ ರಾಷ್ಟ್ರಗಳಲ್ಲಿ ಬಲವಾಗುತ್ತಿದೆ.

ಅಮೇರಿಕ ಸಂಯುಕ್ತ ರಾಜ್ಯಗಳಲ್ಲಿ ಗುತ್ತಿಗೆಗೆ ತೆಗೆದುಕೊಂಡ ಅರ್ಧಕ್ಕಿಂತ ಹೆಚ್ಚಿನ ಭೂಮಿಗಳಲ್ಲಿ ಕೇವಲ ಪ್ರತಿಶತ ೫.೫ ರಷ್ಟು ಭೂಮಿಗಳ ಸಾಗುವಳಿಯಾಗಿದೆ. ಅಲ್ಲಿ, ಮೇಲ್ಪಟ್ಟದ, ನಾಲ್ವರ ವರ್ತಕ ಮಂಡಳಿಗಳು ಪೇಟೆಯಲ್ಲಿರುವ ಅರ್ಧಕ್ಕಿಂತ ಹೆಚ್ಚು ಹಾಲು ಉತ್ಪಾದನೆಯ ವ್ಯವಹಾರವನ್ನು ನಿಯಂತ್ರಣದಲ್ಲಿಟ್ಟುಕೊಂಡಿವೆ. ಇಂಥ ಮಂಡಳಿಗಳು, ಆಹಾರ ಧಾನ್ಯಗಳನ್ನು ಕಡಿಮೆ ಬೆಲೆಗೆ ಕೊಂಡು. ನಂತರ ಬೆಲೆಯನ್ನು ಕೃತಕವಾಗಿ ಹೆಚ್ಚಿಸುತ್ತವೆ. ಇದು ಅನೇಕರ ಬಡತನ ಹಾಗೂ ಹಸಿವೆಗೆ ಕಾರಣವಾಗಿದೆ.

ಇತ್ತೀಚೆಗೆ ಅನೇಕ ಸಹಕಾರಿ ಸಂಘಗಳು ಬೆಲೆಯುಳ್ಳ ಪದಾರ್ಥಗಳಾದ ತರಕಾರಿಗಳು. ಹಣ್ಣುಗಳು. ಹೂಗಳು ಮತ್ತು ಮಾಂಸ ಮುಂತಾದವುಗಳ ಉತ್ಪಾದನೆಯನ್ನು ಅನಭಿವೃದ್ಧ ರಾಷ್ಟ್ರಗಳಲ್ಲಿ ಉತ್ಪಾದಿಸಲು ಪ್ರಾರಂಭಿಸಿವೆ. ಅಭಿವೃದ್ಧ ರಾಷ್ಟ್ರಗಳಲ್ಲಿ. ಈ ಆಹಾರ ಪದಾರ್ಥಗಳನ್ನು ಉತ್ಪಾದಿಸಲು ತಗಲುವ ಪ್ರಮಾಣ ಹೆಚ್ಚು, ಅಮೇರಿಕದ ಸಂಯುಕ್ತ

"ಈ ಬೋರ್ಡ್‌ನ ಅರ್ಜೆಂಟಾಗಿ ಟ್ರಾನ್ಸ್‌ಲೇಟ್ ಮಾಡಿಸಿ ಚೇಂಜ್ ಮಾಡೂಂತ ಹೇಳಲಿಕ್ಕೇನೋ ಫೂಲ್, ಈಗ ಕನ್ನಡವೇ ರೂಲಿಂಗ್ ಲಾಂಗ್ವೇಜ್ ಎಲ್ಲೆಲ್ಲೂ…"

ರಾಜ್ಯಗಳಲ್ಲಿ ತಗಲುವ ವೆಚ್ಚದ ಪ್ರತಿಶತ ೧೦ರಷ್ಟು ಮಾತ್ರ ಬರುವುದೇ ಇದಕ್ಕೆ ಕಾರಣವಾಗಿದೆ. ಇವರಿಗೆ, ಇಂಥ ಕೆಲಸಗಳಲ್ಲಿ ಸಿದ್ಧಹಸ್ತ ಅನೇಕ ಪಾಲುದಾರರು ಪರದೇಶಗಳಲ್ಲಿ ದೊರಕುತ್ತಾರೆ. ಈ ಕಾರಣದಿಂದಾಗಿ ಆ ಪದಾರ್ಥಗಳನ್ನು ಉತ್ಪಾದಿಸುವ ಸ್ಥಳೀಯ ಜನ ಮತ್ತಷ್ಟು ಬಡವರಾಗುತ್ತಾರೆ. ಸ್ಥಿರವಾದ ಅಂತಾರಾಷ್ಟ್ರೀಯ ಮಾರುಕಟ್ಟೆಯನ್ನು ಆ ಸಂಘಗಳು ಸುಲಭವಾಗಿ ಎದುರಿಸುತ್ತವೆ.

ಆಹಾರ ಪದಾರ್ಥಗಳನ್ನು ವ್ಯಾಪಾರ ಮಾಡುತ್ತಿರುವ ಕೋಟ್ಯಾಧಿಪತಿಗಳು ಜಾಗತಿಕ ಭೂಮಿಯನ್ನು ಗುತ್ತಿಗೆ ಪಡೆದು, ಅಲ್ಲಿ ಬೆಳೆಯುವ ಬೆಳೆಗಳನ್ನು ಜಾಗತಿಕ ಆಹಾರದ ಅಂಗಡಿಗಳಿಗೆ ಕಳುಹಿಸುತ್ತಿದ್ದಾರೆ. ಅಂಥ ಅಂಗಡಿಗಳಿಂದ ಕಡುಬಡವರು, ಆಹಾರ ಧಾನ್ಯಗಳನ್ನು ಹೆಚ್ಚಿನ ಬೆಲೆಕೊಟ್ಟು ಕೊಂಡುಕೊಳ್ಳಬೇಕಾಗುತ್ತದೆ. ಅಂಗಡಿಗಳಲ್ಲಿ ಆಹಾರ ಪದಾರ್ಥಗಳ ಬೆಲೆಗಳು, ಶ್ರೀಮಂತ ಗಿರಾಕಿಗಳನ್ನು ಗಮನದಲ್ಲಿಟ್ಟುಕೊಂಡು, ನಮೂದಿತವಾಗಿರುತ್ತವೆ. ಈ ರೀತಿ ಔದ್ಯೋಗಿಕ ರಾಷ್ಟ್ರಗಳ ಗಿರಾಕಿಗಳು, ಅಲ್ಲದೆ, ಅಭಿವೃದ್ಧ ರಾಷ್ಟ್ರಗಳ ಸ್ಥಳೀಯ ಆಹಾರ ಪದಾರ್ಥಗಳ ಬೇಡಿಕೆಗಳನ್ನು ತಳ್ಳಿಹಾಕಿ, ಅಂಥ ಆಹಾರ ಪದಾರ್ಥಗಳನ್ನು ತಮ್ಮೆಡೆಗೆ ಸೆಳೆದುಕೊಳ್ಳುತ್ತವೆ.

ಪರಸ್ಪರ ಅಂತರಿಕ ಅವಲಂಬನವು ಈ ಜಾಗತಿಕ ದಾಸ್ತಾನುಗಳ ಒಂದು ವಿಧಾನವಾಗಿದೆ. ಇದರಿಂದಾಗಿ ಬಡತನ ಹೆಚ್ಚುತ್ತಿದೆ. ಈ ರೀತಿ, ಕೇವಲ ಕೆಲವರಿಗಾಗಿ, ಕೇವಲ ಕೆಲವರು ಆಹಾರ ಧಾನ್ಯಗಳನ್ನು ಇತರರಿಂದ ವಶಪಡಿಸಿಕೊಂಡು, ಅಂತರಿಕ ಅವಲಂಬನೆಯಲ್ಲಿರುವ ಶಕ್ತಿಸಂಪನ್ನ ರಾಷ್ಟ್ರಗಳು ಅಸಮಾನತೆಯನ್ನು ಇನ್ನೂ ಹೆಚ್ಚಿಸುತ್ತಿವೆ. ಇದರಿಂದಾಗಿ ಜಗತ್ತಿನಲ್ಲಿ ವೈಮನಸ್ಸು ಬೆಳೆಯುತ್ತಿದೆ. ✡

## ಉಪಯೋಗ

**ಈಶ್ವರಚಂದ್ರ ವಿದ್ಯಾಸಾಗರರ ಬಳಿ, ಒಮ್ಮೆ ಖುದಿರಾಮ ಬೋಸ್ ಬಂದರು. ವಿದ್ಯಾಸಾಗರ ಅವರಿಗೆ ಕಿತ್ತಳೆ ಹಣ್ಣುಗಳನ್ನು ನೀಡಿದರು. ಖುದಿರಾಮ ತೊಳೆಗಳನ್ನು ತಿಂದು, ಸಿಪ್ಪೆ, ಬೀಜಗಳನ್ನು ಎಸೆಯತೊಡಗಿದರು. ಇದನ್ನು ನೋಡಿ ವಿದ್ಯಾಸಾಗರರು "ಇದನ್ನು ಎಸೆಯಬೇಡಿ. ಇದೂ ಕೆಲಸಕ್ಕೆ ಬರಬಹುದು" ಎಂದಾಗ, ಖುದಿರಾಮ ಕೇಳಿದರು. "ಇದನ್ನು ತಾವು ಯಾರಿಗೆ ಕೊಡುವಿರಿ?"**

**ವಿದ್ಯಾಸಾಗರ ನಗುತ್ತಾ ಹೇಳಿದರು, "ತಾವು ಇದನ್ನು ಕಿಟಕಿಯ ಹೊರಗಿಟ್ಟು, ಸ್ವಲ್ಪ ಕಾಲ ಇಲ್ಲಿಂದ ನಿರ್ಗಮಿಸಿದರೆ ತಮಗೇ ಅದರ ಬಗ್ಗೆ ಅರಿವಾಗುವುದು."**

**ಆ ಸಿಪ್ಪೆ ಇತ್ಯಾದಿಗಳನ್ನು ಕಿಟಕಿಯ ಹೊರಗಿಡಲು ಕೆಲವು ಕಾಗೆಗಳು ಅದನ್ನು ಕೊಂಡೊಯ್ದುವು. "ಕಾಗೆಗಳಿಗೆ ನೀವು ಬಿಸುಡುತ್ತಿದ್ದ ವಸ್ತುಗಳು ಉಪಯೋಗವಾದವು. ಯಾವುದನ್ನೇ ಆಗಲಿ ಎಸೆದು ಧೂಳಿಗೆ ಸೇರುವಂತೆ ಮಾಡದೆ, ಹಾಗೆಯೇ ಇಟ್ಟಲ್ಲಿ ಯಾವುದಾದರೂ ಜೀವಿಗೆ ಉಪಯೋಗವಾಗುತ್ತದೆ," ಎಂದರು ವಿದ್ಯಾಸಾಗರ.**

**ಸಂಗ್ರಹ: ಎನ್. ಕೆ. ನರಸಿಂಹಮೂರ್ತಿ**

# ಒಂದು ಸಿನಿಮಾ ಪ್ರಸಂಗ

* 'ಶಾಂತಭಾರತಿ'

ಒಂದು ದಿವಸ ಅಡುಗೆ ಮನೆಯಿಂದ ನನ್ನ ಮನದನ್ನೆ ಭಾರತಿ– 'ಸಿನಿಮಾಕ್ಕೆ ಹೋಗೋಣವೇ–ನಾಳೆ?' ಎಂದು ಕೇಳಿದಳು. ನಾನು ಹೊರ ಕೋಣೆಯಿಂದಲೇ 'ಬೇಡ'ವೆಂದೆ. ಇಷ್ಟೇ ಆದದ್ದು ಸಂಭಾಷಣೆ. ನಂತರ ಸ್ವಯಂಪಾಕದ ಮನೆಯಿಂದ ಪಾತ್ರೆ-ಪಗಡಿಗಳು ಅವಶ್ಯಕ್ಕಿಂತ ಹೆಚ್ಚು ಸಪ್ಪಳ ಮಾಡತೊಡಗಿದವು. ಆಫೀಸಿಗೆ ಹೊತ್ತಾಗುತ್ತ ಬಂದಿದ್ದರೂ ನಿತ್ಯದಂತೆ ಊಟಕ್ಕೆ ಕರೆ ಬರಲಿಲ್ಲ. ನಾನೇ ಒಳಗೆ ಹೋದೆ. ತಾಟು ರೆಡಿ ಇತ್ತು. ಆದರೆ ಸ್ವಾಗತ ಇರಲಿಲ್ಲ. ಅಡುಗೆಗೆ ಉಪ್ಪು ಖಾರದ ಪ್ರಮಾಣ ಜಾಸ್ತಿಯಾಗಿತ್ತು. ಮಾತೂ ಇರಲಿಲ್ಲ. ಊಟವೂ ಹೋಗಲಿಲ್ಲ. ಸಂಜೆ ಆಫೀಸಿನಿಂದ ಬಂದು 'ಹೂಂ–ನಾಳೆ ಸಿನಿಮಾಕ್ಕೆ ಹೋಗೋಣ' ಎಂದೆ. ಮನೆಯಲ್ಲಿ ಮೌನದ, ಅಶಾಂತಿಯ ಹೊಗೆ ಮಾಯವಾಗಿ ಭಾರತಿಯ ಮುಖದಲ್ಲಿ ನಗೆ ಅರಳಿತು. ಬಳೆಗಳ ನಿನಾದ ಕರ್ಣಪ್ರಿಯವಾಯಿತು. ಸಂಜೆಯ ಅಡುಗೆಯಲ್ಲಿ ರುಚಿ ಮೆರೆದಾಡಿತು!

ಮರುದಿನ ಮಧ್ಯಾಹ್ನ ನಾಲ್ಕು ಗಂಟೆಗೆ ಮನೆಗೆ ಬಂದೆ. ಬರುಬರುತ್ತಲೇ ಭಾರತಿ ಅಂದಳು– 'ನಾ ರೆಡಿ ಆಗ್ತೇನಿ–ನೀವು ಚಹಾಕ್ಕೆ ಅಷ್ಟು ಎಸರು ಇಡ್ರಿ' ಎಂದು. ನಾನು ಸ್ಟೊವ್ ಹೊತ್ತಿಸಿ ಎಸರು ಇಟ್ಟು 'ನೀರಿಗೆ ಸಕ್ಕರೆ ಹಾಕು ಬಾ' ಅಂದೆ. 'ಆಯ್ತು ಬಂದುಬಿಟ್ಟೆ' ಅಂದಳು. ಶೃಂಗಾರ ಮಾಡಿಕೊಳ್ಳಲು ಕುಳಿತ ಹೆಣ್ಣಿನ ನಿರೀಕ್ಷೆ ಕುದಿಯುವ ನೀರಿಗೆ ಮಾಡಲಾದೀತೆ? ಉಗಿ ಆಗಿ ಹಾರಿ ಹೋಗತೊಡಗಿತು. ನಾನು 'ಬಂದಿಯೇನೆ?' ಅಂದೆ. 'ಇನ್ನೇನು ಹೆರಳು ಹಾಕ್ಕೊಂಡಾಯ್ತು, ಮುಖಾ ಅಷ್ಟು ತೊಳಕೊಂಡುಬಿಟ್ಟೇನಿ. ಕುಂಕುಮ ಹಚ್ಚಿಕೊಂಡರ ಮುಗಿದ್ಹಾಂಗ ಅಷ್ಟ' ಎಂದು ಅನ್ನುತ್ತಲೇ ಇದ್ದಳು.

'ಸೀರೆ ಯಾವುದು ಉಟ್ಟುಕೊಳ್ಳಿ ಇವತ್ತು ನಿಮ್ಮದೇ ಚಾಯ್ಸ್' ಅಂದಳು. ನಾನು 'ತಿಳಿ ಗುಲಾಬಿ ನೈಲಾನ್ ಉಟ್ಟುಕೊ' ಅಂದೆ. 'ತಿಳಿ ಗುಲಾಬಿ ಬೇಡಪ್ಪಾ, ಬೇರೊಂದು ಹೇಳಿ' ಎಂದಳು. 'ಹಾಗಾದ್ರೆ ಡಿಸೈನಿನ ರೇಶ್ಮೆ ಸೀರೆ ಉಟ್ಟುಕೋ' ಅಂದೆ. 'ಅಯ್ಯೋ ರೇಷ್ಮೆ- ಸೀರೇನೆ ನಿನ್ನಿನ್ನೂ ಡ್ರೈಕ್ಲೀನಿಂಗ್‌ದಿಂದ ಬಂದಿಲ್ರಿ ಅದು. ಷಿಫಾನ್ ಉಟ್ಟುಕೊಳ್ಳಲೇ?' ಎಂದನ್ನುತ್ತ ಷಿಫಾನ್

ಉಟ್ಟುಕೊಂಡಳು. ಅದನ್ನು ಕಂಡು– ಇದು ನನ್ನ ಚಾಯಿಸೇ–ಆಕೆಯ ಚಾಯಿಸೇ ? ಎಂಬ ವಿಚಾರ ದಲ್ಲಿ ಬಿದ್ದೆ.

ಕಪಾಟಿನ ಕನ್ನಡಿ ಇದಿರಿಗೆ ನಿಂತುಕೊಂಡು ಸೀರೆ ಸೆರಗು ಪೂರ್ತಿಯಾಗಿ ಹೊತ್ತುಕೊಂಡು ನೋಡಿಕೊಂಡಳು. ತುಂಬ ಸೆರಗು ಮನಸ್ಸಿಗೆ ಒಪ್ಪಲಿಲ್ಲವೇನೊ. ಅರ್ಧ ಸೆರಗು ಹೊದ್ದುಕೊಂಡಳು. ಅದು ಚಂದ ಕಾಣಿಸಲಿಲ್ಲವೇನೋ–ಮತ್ತೆ ಫುಲ್ಲಾಗಿ ಹೊದ್ದುಕೊಂಡು ನೆರಿಗೆ ತಿದ್ದಿಕೊಂಡಳು. ಹೀಗೆ ಮಾಡುವಾಗ ಕುಂಕುಮ ಅಳಿಸಿತು. ಮತ್ತೆ ಕುಂಕುಮ ಹಚ್ಚಿಕೊಳ್ಳಹೋದಾಗ– ಹಣೆಯಲ್ಲಿ ಕರ್ರಗೇ ಆಯಿತು. ಹಣೆಗೆ ಪೌಡರು ಹಚ್ಚಿದಳು– ಆಗ ಹಣೆ ಹೆಚ್ಚು ಬೆಳ್ಳಗೆ ಕಾಣಿಸಲು–ಮತ್ತೆ ಅರಿವೆಯಿಂದ ಒರೆಸಿಕೊಂಡು– ಮತ್ತೆ ಪೌಡರು ಹಚ್ಚಿಕೊಂಡು– ಮತ್ತೆ ಒರೆಸಿಕೊಂಡು ಮತ್ತೆ ಕುಂಕುಮ ಹಚ್ಚಿಕೊಂಡು…

ನನಗೆ ತಾಳ್ಮೆ ತಪ್ಪತೊಡಗಿತ್ತು.

"ನಿಂದು ಅಲಂಕಾರ ಮುಗೀತೋ ಇಲ್ಲೊ ? ನಿಂದು ಮುಗಿಯೋದ್ರೊಳಗ– ಸಿನಿಮಾದ ೨ನೇ ಆಟ ಸುದ್ದಾ ಮುಗಿದುಹೋಗ್ತದೋ ಏನೊ?"

"ತ ಡೀ ರಿ–ಮುಗಿದೇಹೋತು–ನಾ–ಅಲಂಕಾರ ಮಾಡಿಕೊಳ್ಳೋದು ಎಲ್ಲಾ ನಿಮ್ಮ ಸಲವಾಗೀನ ಅಲ್ಲೇನು?"

"ಅಲ್ಲ ನಾವೀಗ ಸಿನಿಮಾಕ್ಕ ಹೊಂಟೇವಲ್ಲ. ಸಿನಿಮಾದಾಗ–ನಿನ್ನ್ಯಾರು ನೋಡ್ತಾರ?"

"ಯಾಕ? ಸಿನಿಮಾದಾಗಿನ–ಪರದೆ ಮ್ಯಾಲಿನ ಪಾತ್ರಗಳು– ನನ್ನ ನೋಡ್ತ್ವಂಗಿಲ್ಲೇನು?…"

ಹೆಂಡತಿಯ ಜೊತೆಗೆ ವಾದ ಹಾಕಿ, ಗಂಡ ಎಂಬ ಪ್ರಾಣಿ ಎಂದಾದರೂ ಗೆದ್ದಿದ್ದಾನೆಯೆ !

ಅಂತೂ ಕೊನೆಗೊಮ್ಮೆ ೫॥ ಗಂಟೆಗೆ ಭಾರತಿ ಹೊರಟೊರಟಳು. ಸಪ್ತಪದ ಕಾಲಮಾನದಂತೆ ಆಕೆಯ ಹಿಂದೆ ನಾನು. ನಮ್ಮಿಬ್ಬರ ಅಂತರ ದೂರ ಇರಲಿಲ್ಲ–ಕೇವಲ ೨ ಫರ್ಲಾಂಗ್ ಅಂತರವಷ್ಟಿತ್ತು.

ಒಂದರ್ಧ ದಾರಿ ಬಂದಿರಬಹುದು.

'ಏ… ಭಾರತಿ…' ಯಾರೋ ಕೂಗಿದ ಶಬ್ದ. ಭಾರತಿ ಧ್ವನಿ ಬಂದತ್ತ ತಿರುಗಿ ನೋಡಿದಳು.

"ಏನೇ ಆರತಿ… ಎಷ್ಟು ವರ್ಷವಾತವಾ–ನಿನ್ನ ಭೆಟ್ಟಿಯಾಗಿ ! ನಿನ್ನ ಅಕ್ಕನ ನಾದಿನಿ ಮಗನ ಮಗಳ ಲಗ್ನದಾಗ ಅಲ್ಲ ನೀನು ಭೆಟ್ಟಿ ಯಾದದ್ದು? ಹೇಗಿದ್ದಾರs ನಿಮ್ಮ ಮಿಸ್ಟರು? ಅವರು ಪರ್‌ಫೆಕ್ಟ್ ಆಗ್ಯಾರೋ. ನೀನೇ ಗಂಡ– ಪೆಕ್ಡ್ ಆಗಿಯೊ ? ಮಕ್ಕಳು ಎಷ್ಟು ? ಸ್ನ್ಯಾಪ್‌ಷಾಟೋ… ಕಟಿನ್ಯೂಡೊ…?

"ಏ…ಏ… ಬ್ಯೂಟಿಕ್ವೀನ್ ಭಾರತಿ… ತಡಿಯೇ… ಎಷ್ಟು ಪ್ರಶ್ನೆ ಕೇಳ್ತಿ? ಯಾಕ, ಎಲ್ಲಾ ಪ್ರಶ್ನೆ ೨ ನಿಮಿಷದಾಗ ಕೇಳಿ ಮುಗಿಸಿ ಹೋಗಿಬಿಡೋಣ ಅಂತಿಯೇನು?"

ಮದುವೆಗೆ ಮುಂಚೆ ಕಾಲೇಜಿನಲ್ಲಿ 'ಬ್ಯೂಟಿ ಕ್ವೀನ್' ಎಂದು ಹೆಸರಾಗಿದ್ದಳಂತೆ ಭಾರತಿ. ಭಾರ ತಿಯ ಇದಿರಿಗೆ ಆರತಿಯ ಸೌಂದರ್ಯ ಹೇಳಿಕೊಳ್ಳು ವಂಥದೇನೂ ಕಾಣಿಸಲಿಲ್ಲ ನನಗೆ–ಇಷ್ಟಾದರೂ– ಆರತಿಯನ್ನು ಸ್ಥೂಲವಾಗಿ ನೋಡಿದ್ದೆ ಅಷ್ಟೆ!

"ಹಂಗೇನಿಲ್ಲವಾ…" ಭಾರತಿ ಅಂದಳು.

"ಹಾ… ಹಂಗ ಬಾ ಹಾದಿಗೆ… ಹತ್ತು ವರ್ಷ ಆಗಿರ್ಬೇಕಲ್ಲಾ ನಮ್ಮಿಬ್ರು ಭೆಟ್ಟಿಯಾಗಿ. ನೀ ಹೇಳಿ ದ್ಹಂಗ–ನಮ್ಮ ಅಕ್ಕನ ನಾದಿನಿ ಮಗನ ಮಗಳ ಲಗ್ನದಾಗ– ಅಲ್ಲಾ, ನಾವಿಬ್ರೂ ಕೂಡಿದ್ವಿ– ತಿಳಿತೇನು ?"

"ತಿಳೀತವಾ…"

"…………"

"…………"

ನಾನು ಮೂಕಪ್ರೇಕ್ಷಕನಂತೆ ಸುಮ್ಮನೆ ನಿಂತಿದ್ದೆ, ಭಾರತಿಯ ಹಿಂದೆ. 'ಹೊತ್ತಾಯಿತು' ಎಂದು ಸಂಕೇತ ಕೊಡಲು ಕ್ಯಾಕರಿಸಿದೆ. ಆದರೆ ಆರತಿ– ಭಾರತಿಯರ ಸಂಭಾಷಣೆ ಮುಗಿಯುವ ಲಕ್ಷಣ ಕಾಣಿಸಲಿಲ್ಲ. ನನ್ನ ಅಸ್ತಿತ್ವವನ್ನೇ ಅವರು ಮರೆ ತಿದ್ದರೇನೊ?

"ನೀ ಮಾತಾಡಿಕೋತ ನಿಂತಿರು–ನಾ ಟಿಕೇಟು ತೆಗೆಸಿಕೊಂಡು ಬರ್‍ತೇನಿ"–ಎಂದೆ, ಬೇಸತ್ತು.

"ಹೂಂ" ಎಂದು ನನ್ನ ಕಡೆ ನೋಡದೇ ಅಂದಳು.–"ಅಲ್ಲ ಆರತಿ… ಆ ಶೈಲಾ ಈಗೆಲ್ಲಿ ಇರ್ತಾಳ ? ಮತ್ತ ಆಕಿದೋ ಏನೋ ನಡೀತಿತ್ತಲ್ಲಾ– ಆ ಪ್ರೊಫೆಸರನ ಜೋಡಿ."

"ನಿನಗ ಗೊತ್ತಿಲ್ಲೇನು ? ಅವರ್ದು ಲವ್

ನೋಡಿದಾಗ–ಆಕೆ ಭಾರತಿಗಿಂತ ಚೆನ್ನಾಗಿದ್ದಾಳೆ ಸುಂದರಿಯಾಗಿದ್ದಾಳೆ ಎಂದೆನಿಸಿತು. ಭಾರತಿ ಸಪ್ಪೆ ಅನ್ನಿಸಿದಳು. ಆರತಿಯ ಸುಂದರ ಮುಖ, ಬಟ್ಟಲುಗಣ್ಣುಗಳು... ಆಕೆ ಮಾತನಾಡುವಾಗ ಮೂಡಿ ಬರುವ ತುಟಿಯ ಸ್ಟೈಲು...

"ನೀನು ಮನ್ಯಾಗಿಂದ ಮನ್ಯಾಗ ಹೇಳ್ತಿದ್ದಿಯಲ್ಲಾ– ಆರತಿ ಕುಲ್ಕರ್ಣಿ ಅಂದ್ರ ಇವರs ಏನು? ಆಕಾಶವಾಣಿಯೊಳಗ ಇವರ ಹಾಡು ಒಂದು ಸಲ ಪ್ರಸಾರಾಗಿತ್ತಲ್ಲಾ...?" ಆರತಿಯ ಕಡೆಗೇನೇ ನೋಡುತ್ತ ಭಾರತಿಗೆ ಕೇಳಿದೆ.

"ನೀವು ಭಾಳ ಚೆನ್ನಾಗಿ ಹಾಡ್ತೀರಿ" ಅಂದೆ.

"ಹೌದ್ರಿ–ನಾ ನಮ್ಮ ಮಹಿಳಾ ಮಂಡಳದ ತರ್ಫೆ ಸಮೂಹಗಾನದಾಗ ಧ್ವನಿ ಕೂಡಿಸಿದ್ದೆ"– ಆರತಿ ಪ್ರಫುಲ್ಲವದನೆಯಾಗಿ ಹೇಳಿದಳು.

"ನಮ್ಮನೀಗೆ ಬಂದು ಹೋಗ್ರೆಲ್ಲಾ" ಅಂದೆ– ಭಾರತಿಯ ಇರುವಿಕೆಯ ಅರಿವನ್ನೂ ಲಕ್ಷಿಸದೇ!

ಭಾರತಿ ಪಕಾಪಕಿ ನನ್ನ ಕೈ ಹಿಡಿದು ಎಳೆದು ಅಂದಳು– "ಇನ್ನು ಹೋಗೋಣವೆ ?"

"ಪಾಪ... ಆರತಿ ಅವರೂ ಪಿಕ್ಚರಿಗೆ ಬರ್ತಾರೇನೋ ಕೇಳು?" ಎಂದೆ.

"ತಿಕೀಟು ಸಿಗ್ಲಿಕ್ಕಿಲ್ಲ– ಸಿನೀಮಾ ಸುರು ಆಗಿ ಹೋಗೇದ ಏನೋ!... ಆರತಿ ನಾಳೆ ಭೆಟ್ಟಿಯಾಗೋಣ–ನಿಮ್ಮ ತಾಯೀ ಮನೆಗೆ ನಾನs ಬರ್ತೇನಿ ಟಾ ಟಾ" ಎಂದು ಒಂದು ಕೈಯಿಂದ 'ಟಾ ಟಾ' ಮಾಡಿ, ಇನ್ನೊಂದು ಕೈಯಿಂದ ನನ್ನನ್ನು ಎಳಕೊಂಡು ಹೊರಟಳು ಭಾರತಿ.

ಸ್ವಲ್ಪ ದೂರ ಹೋದ ನಂತರ–

"ಗಂಡ್ಸರಿಗೆ–ಹೆಂಗ್ಸರ ಹತ್ರ ಹೆಂಗ ನಡಕೊ ಬೇಕೆಂಬೋದು ಗೊತ್ತ ಇರೂದಿಲ್ಲಾ" ಸಿಡುಕಿದಳು ಭಾರತಿ.

"ನಾ– ಏನ ಮಾಡಿದೆ?"

"ಅಲ್ಲಾ... ಆ ಆರತಿ ಏನ ಚಂದ ಇದ್ದಾಳಂತ. ಆಕೀನ್ನ ನೀವ್ಯಾಕ ಅಷ್ಟ ದಿಟ್ಟಿಸಿ ನೋಡ್ತಿದ್ರಿ– ನಾ ಆಕೀಗಿಂತ ಚೆಂದ ಇಲ್ಲೇನು? ನನಗೇನು ಹಾಡು ಬರ್ಹಂಗಿಲ್ಲಾ ಅಂತೀರೇನು?" ತೋಳು ಚಿವುಟಿದಳು. ನೋವಿನಿಂದ ನರಳಿದೆ.

"ಅಲ್ಲ, ನೀವಿಬ್ರೂ ಒಂದು ತಾಸು ಮಾತಾಡಿದ್ರಿ. ನಾನೂ ಒಂದೆರಡು ಮಾತಾಡೋಣವೆಂದು ಆಡಿದೆ..." –ಆರತಿಯ ರೂಪ ಇನ್ನೂ ಕಣ್ಣ ಮುಂದೆ ಇತ್ತು.

"ನೋಡ್ರಿ–ಭಾಳ ದೊಡ್ಡ ಇಂಜನೀಯರನ್ನ ಲಗ್ನಾದ ಅಂತಿದ್ಳು. ಈಗ ಆಕೀಗೆ ನಾಲಕ ಮೂರು ಹಣ್ಣು... ಇನ್ನೂ 'ಸ್ನ್ಯಾಪ್' ಮಾಡಿಲ್ಲಂತ... ನಾಲ್ಕನೇದೂ ಆಕೀಗೆ ಹೆಣ್ಣs ಆಗಲಿ."

"ಹೋಗ್ಲಿ–ಬಿಡು. ಅಲ್ಲಾ ಭಾರತಿ–ಯಾಕೋ ಅಳ್ಲಿಕ್ಕೆ ಹತ್ತಿದ್ದೆಲ್ಲಾ...?"

"ಹೆಂಗಸರು ಅಳೋದಕ್ಕೆ ಕಾರಣ ಬೇಕೇನು? ಮತ್ತ ಕಾರಣ ಇದ್ರ ಅವನ್ನ ಗಂಡಸರ ಮುಂದ ಹೇಳ್ಲೇಬೇಕೇನು ?"

"ಅಲ್ಲಾ... ನೀ ಅತ್ತದ್ದಕ್ಕ ನಿನ್ನ ಮೇಕಪ್ ಹಾಳಾತೂ ಅಂದೆ. ನಿನ್ನ ಕಣ್ಣ ಸುತ್ತರದೂ ಕಪ್ಪ ಆಗೇದ."

"ಏನಂದ್ರಿ?"

"ನಿನ್ನ ಮೇಕಪ್ಪಿನ ಥಾಳ ಸ್ವಲ್ಪ ಕಡಿಮೆ ಆಗೇದ. ಹೋಗ್ಲಿ ಬಿಡು– ಕತ್ತಲೀನು ಆಗೇದ. ಸಿನಿಮಾ ಟಾಕೀಜಿನ್ಯಾಗ ಕತ್ತಲೀನೂ ಇರ್ತದ..."

"ನಡ್ರಿ, ಈಗ ಮನೀಗೆ ತಿರುಗಿ ಹೋಗೋಣು..." ಭಾರತಿ ಅಂದಳು.

"ಅಲ್ಲಾ– ಪಿಕ್ಚರು ?"

"ಪಿಕ್ಚರು– ನಾಳಿನ ಭಾನುವಾರ ನೋಡಿದ್ರಾತಲ್ಲ..."

"ಅಲ್ಲ...ಈಗ ಈ ತಿಕೀಟು ಹಾಳಾಗ್ತಾವಲ್ಲ..."

"ನಾ ಮನೀಗೆ ಹೊಗ್ತೀನಿ, ನೀವು ತಿರಗಿ ಕೊಟ್ಟ ಬರ್ರಿ... ಬ್ಯಾಡಾ... ಆರತಿ ಇನ್ನೂ ಮನಿ ಮುಟ್ಟಿರಲಿಕ್ಕಿಲ್ಲ... ಆ ತಿಕೀಟಿನ ರೊಕ್ಕ ಹಾಳಾದ್ರೂ ಚಿಂತಿ ಇಲ್ಲ. ಈಗ ಮನೀಗೆ ಹೋಗೋಣು..." ಎಂದು ಬಿರಬಿರನೇ ನಡೆದು ಬಿಟ್ಟಳು. ✡



ಶರೀರದ ನಗ್ನತೆಯನ್ನು ನೋಡಬಯಸುವ ನಗ್ನಮಸ್ತಿಷ್ಕರೇ ಹೆಚ್ಚಾಗಿರುವ ಇದು 'ನಗ್ನಯುಗ.'

– ಎಬ್ಬಂಕ

# JOHNSON® ವಾಟರ್ ಹೀಟರ್

## ಇದರ ಮುಂದೆ ಎಲ್ಲ ವಾಟರ್ ಹೀಟರ್‌ಗಳು ಥಂಡ!

ಇದೀ ಭಾರತದಲ್ಲೇ ತಾಪಮಾಪಕ ಹೊಂದಿರುವ ಏಕೈಕ ವಾಟರ್‌ಹೀಟರ್

ರೂ. 350
ಗಳಷ್ಟು ಅತ್ಯದ್ಭುತ
ಉಳಿತಾಯ

ಸೇಫ್ಟಿ ವಾಲ್ವ್‌ಗಳೆಲ್ಲವೂ ವಾಟರ್ ಹೀಟರಿನೊಂದಿಗೆ ಉಚಿತ. ...ಂಟ್ ವೈಪ್‌ನ ಅಗತ್ಯವಿಲ್ಲ. ...ದರಿಂದ ರೂ. 200ಕ್ಕೂ ಹೆಚ್ಚು ಉಳಿತಾಯ. ರೂ. 150 ಗಳಷ್ಟು ...ಲೆಯ ಹೆಚ್ಚಿನ ಸೌಲಭ್ಯಗಳು ಹೆಚ್ಚಿನ ಖರ್ಚಿಲ್ಲದೆಯೇ. ಒಟ್ಟಾರೆ ರೂ. 350 ಗಳಷ್ಟು ಉಳಿತಾಯ.

ಸುರಕ್ಷತೆಯ ಬಿಡಿ ಭಾಗಗಳ
ಸಂಪೂರ್ಣ ಶ್ರೇಣಿ
### ಹೆಚ್ಚಿನ ಖರ್ಚಿಲ್ಲದೆಯೇ

ಸೇಫ್ಟಿ ಪ್ರೆಷರ್ ರಿಲೀಸ್ ವಾಲ್ವ್ ಮತ್ತು ನಾನ್-ರಿಟರ್ನ್ ವಾಲ್ವ್‌ಗಳನ್ನು ಇದು ಒಳಗೊಂಡಿರುವುದರಿಂದ ಎಲ್ಲ ರೀತಿಯಲ್ಲೂ ಸುರಕ್ಷಿತ.

ಮೂರು ಪ್ರಮುಖ
### ಹೊಸತಾದ ಗುಣಗಳು

ಹೆಚ್ಚು ಸುರಕ್ಷತೆ, ಅನುಕೂಲ, ವಿದ್ಯುಚ್ಛಕ್ತಿಯ ಉಳಿತಾಯ — ಮೊಟ್ಟ ಮೊದಲ ಬಾರಿಗೆ ಮೂರು ಪ್ರಯೋಜನಕಾರಿ ಸೌಲಭ್ಯಗಳ ಕೊಡುಗೆ. ಒಳಗಣ ನೀರಿನ ತಾಪವನ್ನು ಸೂಚಿಸಲು ವಿಶಿಷ್ಟ ತಾಪಮಾಪಕ. ಹೆಚ್ಚು ಸುರಕ್ಷಿತಗಾಗಿ ವ್ಯಾಕ್ಯೂಂ ರಿಲೀಸ್ ವಾಲ್ವ್. ತುಕ್ಕು ಹಿಡಿಯದ, ವಾಟರ್-ಪ್ರೂಫ್ ಆದ ಬೇಕ್‌ಲೈಟಿನ ಬೇಸ್ ಪ್ಲೇಟ್.




ಡಿಲಕ್ಸ್ ಎಲಿಗೆಂಟ್

- ವರ್ಟಿಕಲ್ ಮತ್ತು ಹಾರಿಜಾಂಟಲ್ ಮಾದರಿಗಳಲ್ಲಿ ದೊರೆಯುವುದು.
- ವಿವಿಧ ಬಣ್ಣಗಳ ವಿಸ್ತಾರ ಶ್ರೇಣಿ.
- ತಾಪಮಾಪಕವಿಲ್ಲದೆಯೇ ಸ್ವಲ್ಪ ಕಡಿಮೆ ಬೆಲೆಗೆ ದೊರೆಯುವುದು.

JOHNSON — ಗೃಹೋಪಕರಣಗಳಲ್ಲಿ 25 ವರ್ಷಗಳ ಪ್ರಾವೀಣ್ಯತೆ

ASP-BE-8012

ಇದು ದೇಶ(ದ್ವೀಪ)ದ್ರಾಕ್ಷಿ ಎಂದೂ ಕರೆಯಲ್ಪಡುತ್ತದೆ

# ಒಣ ದ್ರಾಕ್ಷಿ

**ಎಸ್. ಬಲರಾಂ**

ಆರೋಗ್ಯಕರವೂ ಪುಷ್ಟಿಕರವೂ ಆದುದೆಂದು ಒಣ ದ್ರಾಕ್ಷಿಗೆ ಯಾವಾಗಲೂ ಹೆಚ್ಚು ಬೆಲೆಯಿದೆ. ಬಹಳ ಹಿಂದಿನ ಕಾಲದಿಂದಲೂ ದ್ರಾಕ್ಷಿಯನ್ನು ಮಾನವ ಉಪಯೋಗಿಸುತ್ತಿದ್ದಾನೆ. ಗ್ರೀಕ್ ಹಾಗೂ ರೋಮನ್ನರ ಕಾಲದಲ್ಲೂ ಭೂಮಧ್ಯಸಾಗರದ ಅಕ್ಕಪಕ್ಕದ ರಾಷ್ಟ್ರಗಳಲ್ಲೂ ಒಣ ದ್ರಾಕ್ಷಿ ಒಂದು ಅತ್ಯಗತ್ಯ ಪದಾರ್ಥವೆಂದು ಪರಿಗಣಿಸಲ್ಪಟ್ಟಿತ್ತು. ಗ್ರೀಸಿನ ಮಹಾಮಲ್ಲರು ವಿಶೇಷ ಶಕ್ತಿಗಾಗಿ ದಿನವೂ ಒಣ ದ್ರಾಕ್ಷಿಯನ್ನು ತಿನ್ನುತ್ತಿದ್ದರು.

ದ್ರಾಕ್ಷಿ ಬೆಳೆಯುವ ಕಡೆಯಲ್ಲೆಲ್ಲಾ ಒಣ ದ್ರಾಕ್ಷಿ ಸಿಗುವುದೆಂದೇನೂ ಇಲ್ಲ. ದ್ರಾಕ್ಷಿ ಹಣ್ಣಾಗುವ ವೇಳೆ ಮಳೆ ಬೀಳದ ಪ್ರದೇಶಗಳಲ್ಲಿ ಮಾತ್ರ ಒಣ ದ್ರಾಕ್ಷಿಯನ್ನು ಉತ್ಪತ್ತಿ ಮಾಡಬಹುದು. ಹೀಗಾಗಿ ಪ್ರಪಂಚದ ಒಣ ದ್ರಾಕ್ಷಿಯೆಲ್ಲ ಇಟಲಿ. ಫ್ರಾನ್ಸ್. ದಕ್ಷಿಣ ಆಸ್ಟ್ರೇಲಿಯಾ. ಅಮೇರಿಕದ ಕ್ಯಾಲಿಫೋರ್ನಿಯಾ. ದಕ್ಷಿಣ ಆಫ್ರಿಕ. ಸ್ಪೇನ್. ಟರ್ಕಿ. ಇರಾನ್. ಅಫಘಾನಿಸ್ತಾನ ಹಾಗೂ ಬಲೂಚಿಸ್ತಾನಗಳಿಂದ ಬರುತ್ತದೆ. ನಮ್ಮ ದೇಶದಲ್ಲಿ ಹೆಚ್ಚು ದ್ರಾಕ್ಷಿ ಬೆಳೆಯುವ ಬೆಂಗಳೂರಿನಲ್ಲಿ, ದ್ರಾಕ್ಷಿಯನ್ನು ಸಂಸ್ಕರಿಸಿ ಒಣ ದ್ರಾಕ್ಷಿಯನ್ನು ಮಾಡುವ ಪ್ರಯೋಗ ತೀವ್ರವಾಗಿ ಮುಂದುವರಿದಿದೆ.

ದ್ರಾಕ್ಷಿ ಹಣ್ಣಾದ ಬಳಿಕ ಅವರ ಗೊಂಚಲುಗಳನ್ನು ಬಳ್ಳಿಯಿಂದ ಕತ್ತರಿಸಿ ಮರದ ಪಾತ್ರೆ (vat)ಗಳಲ್ಲಿ ಒಣಗಿಸಿ ಇಡಲಾಗುತ್ತದೆ. ಒಣಗಿದ ಮೇಲೆ ದ್ರಾಕ್ಷಿಯ ಭಾರ ತುಂಬಾ ಕಡಿಮೆಯಾಗುತ್ತದೆ. ೫೦ ಕಿಲೋಗ್ರಾಂ ಹಣ್ಣಿನಿಂದ ಕೇವಲ ಹತ್ತು ಹನ್ನೆರಡು ಕೆ. ಜಿ. ಒಣ ದ್ರಾಕ್ಷಿ ಸಿಗುತ್ತದೆ.

ಒಣ ದ್ರಾಕ್ಷಿಯಲ್ಲಿ ಸಾಧಾರಣವಾಗಿ ಮೂರು ತರನಾದ ಜಾತಿಗಳುಂಟು. ಬೀಜವಿಲ್ಲದ ದ್ರಾಕ್ಷಿಯು ಉತ್ತಮ; ಅದು ಪೌಷ್ಟಿಕವೂ ಹೌದು. ಇದನ್ನು ಇಂಗ್ಲೀಷಿನಲ್ಲಿ 'ಸುಲ್ತಾನ' (sultana) ಎಂದು ಕರೆಯುತ್ತಾರೆ. ಬೀಜವಿರುವ ದೊಡ್ಡ ಒಣ ದ್ರಾಕ್ಷಿಯನ್ನು 'ಮುನಕ್ಕಾ' ಎಂದು ಕರೆಯುತ್ತಾರೆ. ಇವೆರಡಲ್ಲದೆ ಕಪ್ಪಗಿರುವ 'ಕರೆಂಟ್' (current) ಎಂಬುದು ಇನ್ನೊಂದು ಜಾತಿ. ಇದು 'ಕರಿಂಥ್' ಎಂಬುದರ ಅಪಭ್ರಂಶ. ಬಹುಕಾಲದ ಹಿಂದೆ 'ಕಂಥ್' ಎಂಬ ನಗರವು ಗ್ರೀಸಿನ ಬಹು ದೊಡ್ಡ ನಗರವಾಗಿದ್ದು ಅಲ್ಲಿಂದಲೇ ಎಲ್ಲ ಕಡೆಗೂ ಒಣ ದ್ರಾಕ್ಷಿಯು ಬರುತ್ತಿದ್ದುದರಿಂದ ಆ ಹೆಸರು ಬಂದಿರಬೇಕು.

ಒಣ ದ್ರಾಕ್ಷಿಯಲ್ಲಿ ಅಮೂಲ್ಯ ಪೋಷಕಾಂಶಗಳು ಹೇರಳವಾಗಿವೆ. ಮುಖ್ಯವಾಗಿ ಸಕ್ಕರೆಯಿದೆ. ದ್ರಾಕ್ಷಿಯಲ್ಲಿ ಶೇಕಡಾ ೨೦ ರಷ್ಟು ಸಕ್ಕರೆಯ ಅಂಶ ಇದ್ದರೆ ಒಣ ದ್ರಾಕ್ಷಿಯಲ್ಲಿ ಅದು ಶೇಕಡಾ ೮೫ ಇರುತ್ತದೆ. ಒಣ ದ್ರಾಕ್ಷಿಯಲ್ಲಿರುವ ಸಕ್ಕರೆಯು ನಾವು ದಿನವೂ ಉಪಯೋಗಿಸುವ ಬೆಲ್ಲ. ಬೇರೆ ಸಕ್ಕರೆಗಳಿಗಿಂತ ಎಲ್ಲ ವಿಧದಲ್ಲೂ ಮೇಲು. ಆರೋಗ್ಯದ ದೃಷ್ಟಿಯಿಂದ ಬಹಳ ಒಳ್ಳೆಯದು. ದೇಹದ ದೌರ್ಬಲ್ಯವನ್ನು ದೂರಗೊಳಿಸುವುದರಲ್ಲಿ ಈ ಸಕ್ಕರೆಯು ಅತ್ಯಂತ ಸಹಕಾರಿಯಾಗಿದೆ. ಆದುದರಿಂದ ಕ್ಷಯರೋಗಿಗಳಿಗೂ ಇನ್ನಿತರ ರೋಗಗಳ ಬಾಧೆಯ ವೇಳೆಯಲ್ಲೂ ಒಣ ದ್ರಾಕ್ಷಿಯನ್ನು ತಿನ್ನಲು ಕೊಡುವುದು ಒಳ್ಳೆಯದು. ಇದರಿಂದ ಶಕ್ತಿ ಸಂಚಯವಾಗುತ್ತದೆ. ಅಲ್ಲದೇ ರೋಗಿಯು ಬೇಗ

ಗುಣಮುಖರಾಗುತ್ತಾರೆ. ಒಣ ದ್ರಾಕ್ಷಿಯಲ್ಲಿರುವ ಮತ್ತೆರಡು ಗುಣಗಳೆಂದರೆ ಜೀರ್ಣಶಕ್ತಿಯನ್ನು ಹೆಚ್ಚಿಸುವುದು ಮತ್ತು ಮಲಬದ್ಧತೆಯನ್ನು ನಿವಾರಿಸುವುದು. ಮಲಬದ್ಧತೆಯಿರುವವರು ದಿನಾಲು ಕೊಂಚ ಒಣದ್ರಾಕ್ಷಿಯನ್ನು ತಿನ್ನುವ ಅಭ್ಯಾಸ ಮಾಡಿಕೊಂಡರೆ ಆಶ್ಚರ್ಯಕರವಾದ ಫಲಿತಾಂಶವನ್ನು ಕೆಲವೇ ದಿನಗಳಲ್ಲಿ ಕಾಣಬಹುದು.

ಒಣದ್ರಾಕ್ಷಿಯಲ್ಲಿ ಸಕ್ಕರೆಯಲ್ಲದೇ ಶೇ. ೨ ಸಸಾರಜನಕ, ಶೇ. ೦.೨ ಕೊಬ್ಬು, ಶೇ. ೦.೧ ಕ್ಯಾಲ್ಸಿಯಂ (ಸುಣ್ಣ). ಶೇ. ೦.೧೮ ರಂಜಕ ಹಾಗೂ ಶೇ. ೦.೩ ಕಬ್ಬಿಣ ಇದೆ. ಅಲ್ಲದೆ ಸಾಕಷ್ಟು ಪ್ರಮಾಣದಲ್ಲಿ ವಿಟಮಿನ್ ಬಿ ಹಾಗೂ ಶೇ. ೧೦ ನಿಕೊಟನಿಕ್ ಆಮ್ಲವೂ ಇರುತ್ತದೆ.

ರಕ್ತವರ್ಧಕ ಗುಣವೂ ಒಣ ದ್ರಾಕ್ಷಿಗಿದೆ. ಮಿಕ್ಕ ಅನೇಕ ಪದಾರ್ಥಗಳಲ್ಲಿರುವುದಕ್ಕಿಂತ ಹೆಚ್ಚು ಪಾಲು ಕಬ್ಬಿಣ ಒಣ ದ್ರಾಕ್ಷಿಯಲ್ಲಿರುವುದರಿಂದ ಇದನ್ನು ತಿನ್ನುವವರಿಗೆ ರಕ್ತಹೀನತೆ ಉಂಟಾಗುವುದಿಲ್ಲ. ಇದು ಕ್ಷಾರಯುಕ್ತವೂ ಹೌದು. ಇದನ್ನು ತಿನ್ನುವುದರಿಂದ ದೇಹದಲ್ಲಿ ಕ್ಷಾರಾಂಶವುಂಟಾಗಿ ರೋಗ ನಿರೋಧಕ ಶಕ್ತಿ ಹೆಚ್ಚುತ್ತದೆ.

ಚರಕ ಮುನಿಗಳ ಪ್ರಕಾರ ಫಲಗಳಲ್ಲಿ ಒಣ ದ್ರಾಕ್ಷಿಯೇ ಶ್ರೇಷ್ಠವಾದುದು. ಅವರ ಕಾಲದಿಂದಲೂ ವಿಭಿನ್ನ ರೋಗಗಳ ಚಿಕಿತ್ಸೆ ಹಾಗೂ ಪಥ್ಯದಲ್ಲಿ ಒಣ ದ್ರಾಕ್ಷಿಯನ್ನು ಬಳಸಲಾಗುತ್ತಿದೆ. ಯುರೋಪಿನ ಕೆಲವು ರಾಷ್ಟ್ರಗಳಲ್ಲಿ ಕೇವಲ ಒಣ ದ್ರಾಕ್ಷಿಯನ್ನು ಕೊಟ್ಟು ಹಳೆಯ ಖಾಯಿಲೆಗಳನ್ನು ಗುಣ ಪಡಿಸುವ ಪದ್ಧತಿಯಿದೆ. ಅದನ್ನು ಇಂಗ್ಲೀಷಿನಲ್ಲಿ 'Raision Cure' ಎಂದು ಕರೆಯುತ್ತಾರೆ. ಕೇವಲ ಒಣ ದ್ರಾಕ್ಷಿಯನ್ನೆ ಎರಡು ತಿಂಗಳವರೆಗೆ ಸೇವಿಸುತ್ತಿದ್ದರೆ ಅನೇಕ ಗುಣಮುಖವಾಗದ ರೋಗಗಳೂ ಗುಣವಾಗಿ ದೇಹವು ಮತ್ತೆ ಸ್ವಸ್ಥ ಸ್ಥಿತಿಗೆ ಬಂದಿರುವ ಘಟನೆಗಳಿಗೇನೂ ಕಡಿಮೆಯಿಲ್ಲ.

ಒಣ ದ್ರಾಕ್ಷಿಯನ್ನು ಸೇವಿಸುವುದರಲ್ಲಿ ಹಲವಾರು ರೀತಿಗಳುಂಟು. ರಾತ್ರಿ ತಣ್ಣೀರಿನಲ್ಲಿ ಒಣ ದ್ರಾಕ್ಷಿಯನ್ನು ನೆನೆ ಹಾಕಿ ಮಾರನೆಯ ದಿನ ಬೆಳಗ್ಗೆ ಆ ನೀರಿನ ಸಮೇತ ದ್ರಾಕ್ಷಿಯನ್ನು ಸೇವಿಸುವುದು ಉತ್ತಮ ರೀತಿ. ಹೀಗೆ ಮಾಡುವುದರಿಂದ ದ್ರಾಕ್ಷಿಗಳು ಉಬ್ಬಿ ನಾಲ್ಕರಷ್ಟಾಗುವವು. ಅಲ್ಲದೇ ಅವು ಹಸಿ ದ್ರಾಕ್ಷಿಗಿಂತ ಬೆಲೆಯಲ್ಲಿ ಹೆಚ್ಚಿಲ್ಲವೆಂದು ಗೊತ್ತಾಗುವುದು. ಈ ರೀತಿ ತಿನ್ನುವುದರಿಂದ ಜೀರ್ಣಶಕ್ತಿ ಹೆಚ್ಚುತ್ತದೆ.

ಹಾಲು ಇಲ್ಲವೇ ಮೊಸರಿನಲ್ಲಿ ಬೇಕಾದರೂ ಒಣ ದ್ರಾಕ್ಷಿಯನ್ನು ನೆನಸಿ ಸೇವಿಸಬಹುದು. ಹಾಲಿನಲ್ಲಿ ಪ್ರೋಟೀನ್ ಇದ್ದು ಒಣ ದ್ರಾಕ್ಷಿಯಲ್ಲಿ ಸಕ್ಕರೆಯಿರುವುದರಿಂದ ಇವೆರಡನ್ನು ಒಟ್ಟಾಗಿ ಸೇವಿಸಿದಾಗ ದೇಹಕ್ಕೆ ಒಳ್ಳೆಯ ಪೌಷ್ಟಿಕ ಆಹಾರ ಸಿಕ್ಕಿದ ಹಾಗಾಗುತ್ತದೆ. ಹೀಗೆ ಸೇವಿಸುವವರು ಅದು ಒಂದು ಪೂರ್ಣ ಆಹಾರಕ್ಕೆ ಸಮ ಎಂದು ತಿಳಿಯಬೇಕು.

ಒಣ ದ್ರಾಕ್ಷಿಯನ್ನು ಬೇಕಾದರೆ ಹಾಲಿನಲ್ಲಿ ಕುದಿಸಿಯೂ ಸೇವಿಸಬಹುದು. ಹಾಗೆ ಮಾಡುವಾಗ ಅದನ್ನು ಮೊದಲು ಹಾಲಿನಲ್ಲಿ ನೆನೆಸ ಬೇಕಾಗಿಲ್ಲ. ಆದರೆ ಹಾಗೆ ಸೇವಿಸುವವರು ತಮ್ಮ ಜೀರ್ಣಶಕ್ತಿ ಚೆನ್ನಾಗಿದೆಯೋ ಎಂದು ಮೊದಲು ತಿಳಿದಿರಬೇಕು.

ಇತರ ಆಹಾರಗಳೊಡನೆ ಒಣ ದ್ರಾಕ್ಷಿಯನ್ನು ಯನ್ನು ಸೇವಿಸಿದಾಗ ಆಹಾರವು ಅತ್ಯಂತ ಪೌಷ್ಟಿಕವಾಗುತ್ತದೆ. ಅನೇಕ ಸಿಹಿ ತಿಂಡಿಗಳನ್ನು ತಯಾರಿಸುವಾಗ ಒಣ ದ್ರಾಕ್ಷಿಯನ್ನು ಸೇರಿಸುತ್ತಾರೆ. ಹೀಗೆ ಮಾಡುವುದರಿಂದ ಅವುಗಳ ರುಚಿ ದ್ವಿಗುಣವಾಗುತ್ತದೆ. ಒಟ್ಟಿನಲ್ಲಿ ಒಣ ದ್ರಾಕ್ಷಿಯು ಕೇವಲ ರುಚಿಕರವಷ್ಟೇ ಅಲ್ಲ ದೇಹಕ್ಕೆ ಹಿತಕರವೂ ಆರೋಗ್ಯಕರವೂ ಹೌದು. ಆದುದರಿಂದ ದಿನವೂ ಕೊಂಚ ಒಣ ದ್ರಾಕ್ಷಿಯನ್ನು ತಿನ್ನುವುದು ಒಳ್ಳೆಯದು. ✡

**ಪುರುಷರ ಮನಸ್ಸು, ಶರದೃತುವಿನ ಮೋಡ— ಒಂದಕ್ಕಿಂತ ಇನ್ನೊಂದು ಚಂಚಲ.**

**—ಜಪಾನಿ ಗಾದೆ**

೧. **ಒಕ್ಕಣಿಕೆ** (ಈ) ವಿವರಣೆ; ಬರವಣಿಗೆ ಅಥವಾ ಮಾತಿನ ಕ್ರಮ. ಉದಾ:— ಅವನ ಪತ್ರದ ಒಕ್ಕಣಿಕೆ ಕೆರಳಿಸುವಂತಿತ್ತು. [ಪ್ರಾಕೃತ, ವಖ್ಖಾಣ = (ಸಂ.) ವ್ಯಾಖ್ಯಾನ, ವಿವರಣೆ]

೨ **ತೃಣಪ್ರಾಯ** (ಅ) ಹುಲ್ಲುಕಡ್ಡಿಗೆ ಸಮಾನ; ಬೆಲೆಯಿಲ್ಲದ. ಉದಾ:— ತೃಣಪ್ರಾಯವಾಗಿ ಬಗೆದನು. [ಸಂ. ತೃಣ = ಹುಲ್ಲು + ಪ್ರಾಯ = ಸುಮಾರು]

೩. **ತಡವು** (ಅ) ಪೂಸು, ಕೈಯಿಂದ ಸವರು, ಮುಟ್ಟಿ ನೋಡು; ತಟ್ಟು; ಕೆರಳಿಸು. ಉದಾ:— ಅವನ ಮನಸ್ಸನ್ನು ತಡವಿ ನೋಡಿದ. [ದೇಶ್ಯ]

೪. **ದಸಕು** (ಈ) ಹೊಟ್ಟು, ಉಯ್ಯಿ, ಉಮ್ಮಿ, ಕಾಳಿನ ಸಿಪ್ಪೆ. ಉದಾ:—ದಸಕು ತುಂಬಿದ ಚೀಲ. [ಸಂ. ದಶನ=ಕವಚ-ದಿಂದ? ಅಥವಾ ಇಂಗ್ಲೀಷ್ husk?]

೫. **ಧಿಷಣ** (ಅ) ಬುದ್ಧಿಶಾಲಿ, ಜಾಣ, ಪಂಡಿತ, ಜ್ಞಾನಿ. ಉದಾ:—ಧಿಷಣನಾದ ಗುರು. [ಸಂ.]

೬ **ದಣಪೆ** (ಇ) ತಡೆ, ಅಡ್ಡಿ, ಪ್ರತಿಬಂಧ; ತಡಮೆ. ಉದಾ:— ಬೇಲಿಯ ದಣಪೆ ತೆಗೆದು ಒಳಗೆ ಬಂದ. [ಕನ್ನಡ, ತಡಮೆ-ಯಿಂದ]

೭. **ತುಳಿಲಾಳು** (ಅ) ಶೂರ, ಸಾಹಸಿ, ವೀರ; ವೀರ ಸೇವಕ. ಉದಾ:—ಕನ್ನಡಿಗರ ತುಳಿಲಾಳು ನಾನು [ಕನ್ನಡ. ತುಳಿಲ್= ಸೇವೆ. ಪೂಜೆ; ಸಾಹಸ + ಆಳು]

೮. **ಖುಬಿ** (ಈ) ಒಳ್ಳೇತನ, ಔಚಿತ್ಯ, ಅತಿಶಯ, ಚೆಲುವು; ಸುಂದರ. ಉದಾ:— ಖುಬಿಯಾದ ಹೆಣ್ಣು. [ಮರಾಠಿ, ಖುಬಿ= ಉರ್ದು, ಫಾರಸಿ, ಖೂಬಿ=ಒಳ್ಳೇತನ]

೯. **ದಗ್ಧಹಸ್ತ** (ಈ) ದುರದೃಷ್ಟಶಾಲಿ, ಅದೃಷ್ಟಹೀನ, ದುರ್ದೈವಿ; ಬರಿಗೈ. ಉದಾ:— ಈ ದಗ್ಧಹಸ್ತನು ಮುಟ್ಟಿದ್ದೆಲ್ಲ ಕೆಟ್ಟಿತು. [ಸಂ. ದಗ್ಧ = ಸುಟ್ಟ + ಹಸ್ತ = ಕೈ]

೧೦. **ಖಲ್ವಾಟ** (ಇ) ಬೋಳು ತಲೆಯವ, ತಲೆಯ ಕೂದಲು ಉದುರಿದವ. ಉದಾ:— ಖಲ್ವಾಟರು ಬಡವರಾಗಿರುವುದಿಲ್ಲವಂತೆ. [ಸಂ.]

೧೧. **ಕೋಟಿ** (ಆ) ದೋಷಾರೋಪಣೆ, ದೂರು, ತಪ್ಪು ಹೊರಿಸುವಿಕೆ; ಎದುರು-ವಾದ. ಉದಾ:— ನನ್ನ ಮೇಲೆ ಇವಳ ಕೋಟಿ. [ಸಂ. ಕೋಟಿ=ವಾದದ ಒಂದು ಪಕ್ಷ]

೧೨. **ಜೇವಣಿಗೆ** (ಅ) ಸವಿ ತಿಂಡಿ, ಸಿಹಿ-ಯಾದದ್ದು; ತಿನಿಸು, ಭೋಜನ. ಉದಾ:— ಜೇವಣಿಗೆಯ ನಂತರ. [ಪ್ರಾಕೃತ, ಜೇಮಣ=ಸಂ. ಜೇಮನ]

## ನಿಮ್ಮ ಶಬ್ದಶಕ್ತಿಯ ತರಗತಿ

**ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿ-ಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿ-ನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.**

| | | | |
|---|---|---|---|
| ೬—೮ | ಸರಿಯಿದ್ದರೆ | ... | ಸಾಧಾರಣ |
| ೯—೧೦ | ,, | ... | ಉತ್ತಮ |
| ೧೧—೧೨ | ,, | ... | ಅತ್ಯುತ್ತಮ |

ಆತ ಲಂಡನ್ನಿನ ರಾಯಲ್ ಸೊಸೈಟಿಯ ಜನಕರಲ್ಲೊಬ್ಬ

# ಜಾನ್ ವಿಲ್‌ಕಿನ್ಸ್

**ಕೆ. ವಿ. ನರಸಿಂಹಸ್ವಾಮಿ**

ನಮ್ಮಲ್ಲಿ ಅನೇಕರಿಗೆ ಇತರರಲ್ಲಿ ವಿಶಿಷ್ಟ ಗುಣಗಳನ್ನು ಕಾಣುವುದೆಂದರೆ ಕಷ್ಟಸಾಧ್ಯ. ಇತರರ ವೈಶಿಷ್ಟ್ಯವನ್ನು ಕಡೆಗಣಿಸುತ್ತೇವೆ ನಾವು. ಅಲ್ಲದೇ ಅವರನ್ನು ವರ್ಗೀಕರಿಸುವುದೆಂದರೆ ಬಹಳ ತೃಪ್ತಿಕೊಡುವ ಕೆಲಸ ಅವರಿಗೆ. "ಇವರು ಅಧಮರು." ಇವರು ಸಾಮಾನ್ಯ," "ಬಹಳ ಚೊಕ್ಕ ಜನ ಇವರು" ಹೀಗೆ ನಮ್ಮದೇ ಆದ ಮಾನಸಿಕ ಕಪಾಟುಗಳಲ್ಲಿ ಇತರರನ್ನು ತುರುಕಿ ಬೀಗ ಜಡಿಯುತ್ತೇವೆ. ಜೊತೆಗೆ, ಇಂತಹವರು ಹೀಗೆಯೇ ಇರಬೇಕು ಎಂದು ಎಣಿಸುತ್ತೇವಷ್ಟೇ ಅಲ್ಲ. ಆಶಿಸುತ್ತೇವೆ ಕೂಡ. ಉದಾಹರಣೆಗೆ. ವಿಜ್ಞಾನಿಗಳನ್ನು ಎರಡು ಬಣ್ಣಗಳಿಗೆ ಸೇರಿಸುತ್ತೇವೆ: ಒಂದು ವಿಚಾರವಾದಿಗಳು. ತತ್ವಜ್ಞರು, ದಾರ್ಶನಿಕರು ಎರಡು, ಅತ್ಯಂತ ಉಪಯುಕ್ತ ತಾಂತ್ರಿಕ ತಜ್ಞರು.

ಈ ಎರಡೂ ಪರಮಾವಧಿಗಳಲ್ಲಿ ಸೇರಿಸಬಹುದಾದ ವಿಜ್ಞಾನಿಗಳು ಇದ್ದರು ಹಾಗೂ ಇದ್ದಾರೆ ಎನ್ನುವುದು ಸತ್ಯ. ಆಲ್ಬರ್ಟ್ ಐನ್‌ಸ್ಟೈನ್ ಅಂತಹವರು ಎಲ್ಲರ ಆದರ್ಶ: "Absent minded Professer." ಇಂತಹ ವಿಜ್ಞಾನಿಗಳು ಒಮ್ಮೆಲೇ ಚಮತ್ಕಾರಗಳನ್ನು ಮಾಡುತ್ತಾರೆ ಎಂದು ಎಲ್ಲರೂ ಆಲೋಚಿಸುತ್ತಾರೆ. ಆದರೆ, ಪಕ್ವ ವಿಜ್ಞಾನಿಗಳು ದಾರ್ಶನಿಕ ಹಾಗೂ ತಾಂತ್ರಿಕ ತಜ್ಞ ಎರಡೂ ಆಗಿರುತ್ತಾರೆ ಎಂಬುದನ್ನು ಬಹಳ ಜನ ತಿಳಿದಿರಲಾರರು. ಕಾರಣ, ಈ ವಿಜ್ಞಾನಿಗಳು ಯಾವುದೇ ಸುಲಭ ವಿಶ್ಲೇಷಣೆಗೆ ಸಿಕ್ಕುವುದಿಲ್ಲ.

ಜಾನ್ ವಿಲ್‌ಕಿನ್ಸ್ ಅಂತಹ ವಿಜ್ಞಾನಿಗಳಲ್ಲಿ ಒಬ್ಬ. ಸಾವಿರದ ಆರುನೂರು ಹದಿನಾಲ್ಕರಲ್ಲಿ ಜನಿಸಿದ ವಿಲ್‌ಕಿನ್ಸ್. ಚೆಸ್ಟರಿನ ಬಿಶಪ್ ಆದನಲ್ಲದೇ, ರಾಯಲ್ ಸೊಸೈಟಿಯ ಸ್ಥಾಪಕರಲ್ಲಿ ಒಬ್ಬ. ಲಿಯೋನಾರ್ಡೋ ದಾ ವಿಂಚಿಗಿಂತ ೧೫೦ ವರ್ಷಗಳಷ್ಟು ಹಿಂದೆಯೇ ಈತ ಆಕಾಶಯಾನ, ಅಂತರ್ಜಲಯಾನ, ಯಂತ್ರಮಾನವರು, ವಾಯು ಹಾರಾಟ ಇಂತಹ ವಿವಿಧ ವಿಷಯಗಳ ಮೇಲೆ ಪುಸ್ತಕ ಬರೆದಿದ್ದನೆಂದರೆ ವಿಲ್‌ಕಿನ್ಸನ ಪ್ರತಿಭೆಯನ್ನು ನೀವೇ ಊಹಿಸಿಕೊಳ್ಳಬಹುದು. ದಾರ್ಶನಿಕವಾಗಿಯೂ ವಿಲ್‌ಕಿನ್ಸ್ ವಿಂಚಿಯಷ್ಟೇ ಪ್ರತಿಭಾವಂತ ಎನ್ನಬಹುದು. ಜೊತೆಗೇ ವಿಂಚಿಯಂತೆಯೇ ಈತನೂ ದಿನಬಳಕೆಯ ಉಪಯುಕ್ತ ವಸ್ತುಗಳಲ್ಲೇ ಹೆಚ್ಚು ಆಸಕ್ತನಾಗಿದ್ದ. ಇದರಿಂದಾಗಿ ವಿಲ್‌ಕಿನ್ಸ್ ಎಯರ್ ಗನ್‌ಗಳು ವಾಯುಶಕ್ತಿ, ಸೂಕ್ಷ್ಮ ತಕ್ಕಡಿಗಳ ತಯಾರಿಕೆ ಇಂತಹ ಸಮಸ್ಯೆಗಳಲ್ಲೇ ತಲ್ಲೀನನಾಗಿದ್ದ.

ವಿಲ್‌ಕಿನ್ಸ್‌ನ ಈ ಗುಣ ಅವನಿಗೆ ಬಹುಶಃ ಅವನ ತಂದೆಯಿಂದ ಬಂದಿರಬೇಕು. ಈ ಪಿತೃವಿನ ಬಗ್ಗೆ ಒಬ್ಬ ಚರಿತ್ರಕಾರ ಹೀಗೆ ಬರೆಯುತ್ತಾನೆ: "ಆಕ್ಸಫರ್ಡನಲ್ಲಿ ಅಕ್ಕಸಾಲಿಗನಾಗಿದ್ದ ಇವನು ಸದಾ ಪ್ರಯೋಗನಿರತನಾಗಿರುತ್ತಿದ್ದ. ಅವನ ತಲೆ ಯಾವಾಗಲೂ ಓಡುತ್ತಿತ್ತು" ಆಕ್ಸಫರ್ಡಿನಲ್ಲಿ ಶಾಲೆ ಸೇರಿದ ಯುವಕ ಜಾನ್ ಮುಂದೆ ಮ್ಯಾಗ್ಡಲಿನ್ ಕಾಲೇಜು ಸೇರಿ ತನ್ನ ಇಪ್ಪತ್ತನೇ ವಯ

ಸ್ನಿನಲ್ಲಿ ಮಾಸ್ಟರ್ ಆಫ್ ಆರ್ಟ್ಸ್ ಪದವೀಧರನಾದ. ಪದವಿಯ ನಂತರ "ಮಠ" ಸೇರಿದ ಜಾನ್, ಕ್ರಿ. ಶ. ೧೬೩೭ನೇ ಇಸವಿಯಲ್ಲಿ ನಾರ್ತ್‌ಹ್ಯಾಂಪ್ಟನ್ ಶೈರಿನ ಫಾಸಲೆಯಲ್ಲಿ 'ವಿಕಾರ್' ಆಗಿ ನೇಮಕಗೊಂಡ. ಆದರೆ ಒಂದು ಮಾತು, ಹದಿನೇಳನೇ ಶತಮಾನದಲ್ಲಿ ಚರ್ಚ್ ಸೇರುವವ ಬಹಳ ಧಾರ್ಮಿಕ ಮನೋಭಾವದವನು ಎಂಬ ನಿಯಮವೇನೂ ಇರಲಿಲ್ಲ.ಒಬ್ಬ ಪುರುಷ ಆಶಾವಾದಿ ಬಡ ಯುವಕನಿಗೆ ಹೇಳಿ ಮಾಡಿಸಿದ ಕೆಲಸವಾಗಿತ್ತಷ್ಟೇ.

## ಆಶ್ಚರ್ಯಕರ ವಾದಗಳು

'ವಿಕಾರ್' ಆಗಿ ಮಾಡುವುದು ಹೆಚ್ಚೇನೂ ಇರಲಿಲ್ಲವಾದ್ದರಿಂದ ವಿಲ್‌ಕಿನ್ಸ್‌ಗೆ ಯೋಚಿಸಲು, ಪ್ರಯೋಗಗಳನ್ನು ನಡೆಸಲು ಸಾಕಷ್ಟು ವೇಳೆ ಇರುತ್ತಿತ್ತು. ಇದರ ಫಲವೇ ಆತನ ಮೊದಲ ಪುಸ್ತಕ "ಹೊಸ ಜಗತ್ತು ಹಾಗೂ ಇನ್ನೊಂದು ಗ್ರಹದ ಕುರಿತು ಒಂದು ತತ್ವ (೧೬೪೦)."

ಇಂದು ಈ ಪುಸ್ತಕವನ್ನೋದುವವರಿಗೆ ಅದರಲ್ಲಿನ ಬಹಳಷ್ಟು ವಿಚಾರಗಳು ಗೌಣ ಎನಿಸಬಹುದು. ಆದರೆ ಆಗಿನ ಕಾಲದಲ್ಲಿ ವಿಜ್ಞಾನ ಎಷ್ಟು ಮುಂದುವರೆದಿತ್ತು ಎನ್ನುವುದನ್ನು ನಾವು ಗಮನಿಸಿದಾಗ ವಿಲ್‌ಕಿನ್ಸ್‌ನ ಪ್ರತಿಭೆ ಅರಿವಾಗುತ್ತದೆ. ಉದಾಹರಣೆಗೆ, ಭೂಮಿ ವಿಶ್ವದ ಕೇಂದ್ರ ಅಲ್ಲ. ಸೂರ್ಯನ ಸುತ್ತುಸುತ್ತುವ ಅನೇಕ ಗ್ರಹಗಳಲ್ಲಿ ಒಂದು ಎಂದ. ಈಗ ಇದು ಹಳಸಿದ ಸುದ್ದಿ. ಆದರೆ ಗೆಲಿಲಿಯೋನ ವಾದ ಕೇವಲ ಎಂಟು ವರ್ಷಗಳ ಹಿಂದೆ ಮಾತ್ರ ಪ್ರಕಟವಾಗಿತ್ತಷ್ಟೇ ಅಲ್ಲ, ಈ ವಾದ ಬಹಳ ವಿನಾಶಕಾರಿ, ನಂಬಲನರ್ಹ ಎಂಬ ಭಾವನೆ ಆಗಿನ ಜನರಲ್ಲಿ ಅತ್ಯಂತ ಆಳವಾಗಿ ಬೇರೂರಿತ್ತು ಎಂಬುದನ್ನು ಮರೆಯಬಾರದು. ಇದೇ ಪುಸ್ತಕದ ಇತರ ಭಾಗಗಳೂ ಇಷ್ಟೇ ಸ್ವಂತಿಕೆಯಿಂದ ಕೂಡಿವೆ. ಚಂದ್ರ ಮತ್ತಿತರ ಗ್ರಹಗಳಲ್ಲಿ ಜನರು ಇರಬಹುದು ಎಂದು ಹೇಳಿದ. ಆದರೆ ಈ 'ಜನ' ಮನುಷ್ಯರೇ ಆಗಿರಬೇಕೆಂದಿಲ್ಲ. ವಿಲ್‌ಕಿನ್ಸ್‌ನ ಮಾತಿನಲ್ಲೇ ಹೇಳುವುದಾದರೆ, "ಇವು ನಮ್ಮ ಕಲ್ಪನೆಯಲ್ಲೇ ಇಲ್ಲದ, ಕಲ್ಪನೆಗೂ ಸಿಲುಕದ ಯಾವುದೋ ತರಹದ ಜೀವಿ"ಗಳೂ ಆಗಿರಬಹುದು.

ಚಂದ್ರನ ಹೊಳೆಯುವ ಭಾಗಗಳು ನೆಲ ಹಾಗೂ ಕಪ್ಪು ಛಾಯಾ ಭಾಗಗಳು ಸಮುದ್ರವೂ ಆಗಿರಬೇಕು ಎಂದು ಆತ ತರ್ಕಿಸಿದ. ನಿಖರದ ದೂರದರ್ಶಕಗಳ ಸೃಷ್ಟಿ ಆಗಿರದಿದ್ದರೆ ಇಂದಿಗೂ ವಿಜ್ಞಾನಿಗಳು ಇದನ್ನೇ ನಂಬಿರುತ್ತಿದ್ದರು ಎಂದರೆ ತಪ್ಪಾಗಲಾರದು. ದೂರದರ್ಶಕದಲ್ಲಿನ ಕೆಲವು ದೋಷಗಳಿಂದಾಗಿ ವಿಲ್‌ಕಿನ್ಸ್‌ನಂತಹವರು ಚಂದ್ರನಲ್ಲಿ ತೇಲುವ ಮೋಡಗಳನ್ನು ಕಂಡೆವು ಎಂದು ನಂಬಿ, ಅದರಿಂದ "ಅಲ್ಲಿ ವಾತಾವರಣ ಇರಲೇಬೇಕು" ಎಂಬ ತೀರ್ಪನ್ನಿತ್ತರು. ಈ ತೀರ್ಮಾನ ಚಂದ್ರ ಯಾವುದೋ ಒಂದು ರೂಪದಲ್ಲಿರುವ 'ಜೀವ'ಕ್ಕೆ ಆಧಾರವಾಗಿರಬೇಕು ಎಂಬ ನಂಬುಗೆಗೆ ಪುಷ್ಟಿ ಕೊಟ್ಟಿತು.

ಈ ಪುಸ್ತಕದ ಹದಿನಾಲ್ಕನೇ ಸಿದ್ಧಾಂತವೇ ಬಹುಶಃ ಅತ್ಯಂತ ಮಹತ್ವದ್ದು: "ನಮ್ಮ ಮುಂದಿನ ಜನಾಂಗ ಇಂತಹ ಸ್ಥಳಗಳಿಗೆ ಹೋಗಲು ಯಾವುದಾದರೂ ವಾಹನವನ್ನು ಕಂಡುಹಿಡಿಯಬಹುದು. ಅಂತಹ ಗ್ರಹಗಳಲ್ಲಿ ಯಾವುದಾದರೂ ಒಂದು ರೀತಿಯ ಜೀವಿಗಳಿದ್ದರೆ ಅವರೊಡನೆ ವ್ಯವಹಾರವನ್ನಿರಿಸಿಕೊಳ್ಳಲೂ ಸಾಧ್ಯ!" ವಿಲ್‌ಕಿನ್ಸ್‌ನಿಗೆ ಈ ವಾಹನ ಹೇಗೆ ಕೆಲಸ ಮಾಡುವುದು ಎಂಬುದರ ಬಗ್ಗೆ ಖಚಿತ ಅಭಿಪ್ರಾಯ ಇರಲಿಲ್ಲ. ಆದರೆ, ರೇನಿ ಮಾಂಟ್‌ಜಾನ್ಸ್‌ನ 'ಕಟದ ಹಕ್ಕಿನ' ಮಾದರಿಯಲ್ಲಿ ದೊಡ್ಡ ವಾಹನ ತಯಾರಿಸುವುದೇ ವಿಲ್‌ಕಿನ್ಸ್‌ನ ಆಸೆಯಾಗಿತ್ತು.ವಿಜ್ಞಾನಿ ವಿಲ್‌ಕಿನ್ಸ್‌ನಿಗೆ ಈ ರೀತಿಯ ವಾಹನ ಎದುರಿಸಬೇಕಾದ ಸಮಸ್ಯೆಗಳ ಸ್ಪಷ್ಟ ಕಲ್ಪನೆ ಇತ್ತು.' ಎತ್ತರ ಸ್ಥಳಗಳಲ್ಲಿ ವಾಯು ಬಹಳ ವಿರಳವಾಗುವುದರಿಂದ ಸಾಕಷ್ಟು ಗಾಳಿಯನ್ನು ಜೊತೆಗೇ ತೆಗೆದುಕೊಂಡು ಹೋಗಬೇಕು. ಪೃಥ್ವಿಯ ಆಕರ್ಷಣೆಯಿಂದ ತಪ್ಪಿಸಿಕೊಳ್ಳಲು ಸಾಕಷ್ಟು ವೇಗ ಇರಬೇಕು. ನಂತರದ ಪ್ರಯಾಣ ಸುಲಭವಾಗಿರಬಹುದು ಎಂದ ವಿಲ್‌ಕಿನ್ಸ್ escape velocity ಎಂಬ ಶಬ್ದವನ್ನು ಉಪಯೋಗಿಸಲಿಲ್ಲ ನಿಜ, ಆದರೆ, ನ್ಯೂಟನ್ ಹುಟ್ಟುವುದಕ್ಕೆ ಎರಡು ವರ್ಷಗಳಷ್ಟು ಹಿಂದೆಯೇ 'ಆಕರ್ಷಣೆ' ದೂರ ಹೆಚ್ಚಿದಂತೆ, ಕಡಿಮೆಯಾಗುತ್ತದೆ ಎಂದು ಅವನಿಗೆ ತಿಳಿದಿತ್ತು! ಚಾಂದ್ರವ್ಯೂಹ ವಸ್ತುಗಳಲ್ಲಿ ತಮ್ಮ ನಡುವಿನ ಅಂತರ ಹೆಚ್ಚಿದಂತೆಲ್ಲ

ಒಂದಾಗುವ ಆಸೆ ಕಡಿಮೆಯಾಗುತ್ತದೆ ಎಂಬ ವಿಲ್‌ಕಿನ್ಸ್‌ನ ಪ್ರತಿಭೆ ನಿಜಕ್ಕೂ ದೊಡ್ಡದು.

ಆಡಳಿತಗಾರನಾಗಿಯೂ ವಿಲ್‌ಕಿನ್ಸ್ ಯಶಸ್ವಿಯಾದ. ಸ್ವಲ್ಪ ದಿನಗಳಲ್ಲೇ ತನ್ನ ಗ್ರಾಮದ ವಿಕಾರ್ ಆದ. ದೊರೆ ಒಂದನೇ ಚಾರ್ಲ್ಸ್‌ನ ಸೋದರಳಿಯ ಚಾರ್ಲ್ಸ್ ಲೂಯಿಸನ ಚಾಪ್ಲಿನ್ ಕೂಡ ಆದ. ಈ ಕೆಲಸದಲ್ಲಿದ್ದಾಗ ವಿಲ್‌ಕಿನ್ಸ್‌ಗೆ ತನ್ನ ಪ್ರಯೋಗಗಳನ್ನು ಮುಂದುವರಿಸಿಕೊಂಡು ಹೋಗುವುದು ಇನ್ನೂ ಸುಲಭವಾಯಿತು. ಈ ಪ್ರಯೋಗಗಳ ವಿವರವನ್ನೆಲ್ಲ "ಗಣಿತ ಇಂದ್ರಜಾಲ" ಅಥವಾ "ಯಾಂತ್ರಿಕ ರೇಖಾಗಣಿತದಿಂದ ಸಾಧಿಸಬಲ್ಲ ಅದ್ಭುತಗಳು" ಎಂಬ ಪುಸ್ತಕದಲ್ಲಿ ಬರೆದು ಈ ಪುಸ್ತಕವನ್ನು ರಾಜಕುಮಾರನಿಗೆ ಅರ್ಪಿಸಿದ. (೧೬೪೮).

## ತತ್ವ ಮತ್ತು ಆಚರಣೆ

ಮೇಲಿನ ಪುಸ್ತಕದ ಉದ್ದೇಶ ವಿಲ್‌ಕಿನ್ಸ್‌ನ ಸತತ ಕುತೂಹಲಕ್ಕೆ ಪುಷ್ಟಿ ಕೊಡುವುದಷ್ಟೇ ಅಲ್ಲ. ಕೆಲವು ಉಪಯುಕ್ತ ಸಾಮಗ್ರಿಗಳನ್ನು ಇಂಗ್ಲೆಂಡಿನ ಮೆಕ್ಯಾನಿಕ್‌ಗಳು ಹಾಗೂ ಕುಶಲ ಕರ್ಮಿಗಳ ಗಮನಕ್ಕೆ ತರುವುದೂ ಆಗಿತ್ತು. ಉದಾಹರಣೆಗೆ ಈ ಪುಸ್ತಕದ ಮೂಲಕ ಸನ್ನೆಕೋಲು ರಾಟೆ, ಬೆಣೆ ಮುಂತಾದವುಗಳ ತತ್ವ ಹಾಗೂ ಉಪಯೋಗಗಳನ್ನು ತಿಳಿಸಿದ. Worm drive ಅಥವಾ Low ratio Screw ಯೂರೋಪಿನಲ್ಲಿ ಪ್ರಚಲಿತವಾಗಿದ್ದರೂ ಇಂಗ್ಲೆಂಡಿನ ಜನತೆಗೆ ಅವು ತಿಳಿದಿರಲಿಲ್ಲ. ವಿಲ್‌ಕಿನ್ಸ್ ಮೊದಲ ಬಾರಿಗೆ ಅವರ ತತ್ವವನ್ನು ಸ್ಪಷ್ಟವಾಗಿ ವಿವರಿಸಿ, ಅವರ ರಚನೆಯಲ್ಲಿ ಮಾಡಬೇಕಾದ ಬದಲಾವಣೆಯನ್ನು ಸೂಚಿಸಿದ.

ಈತ ತಯಾರಿಸಿದ ವಹಿ ನಿಯಂತ್ರಿತ" air blastಗಳು ಆಗತಾನೆ ಉನ್ನತಾವಸ್ಥೆಗೇರುತ್ತಿದ್ದ ಇಂಗ್ಲೆಂಡಿನ ಲೋಹ ಹಾಗೂ ಗಾಜಿನ ಉದ್ಯಮಗಳಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನುಂಟು ಮಾಡಿತು. ಈ ಹೊಸ ರೀತಿಯ air blast ಆಧುನಿಕ ಟುಯರ್‌ಗಳ (ಕುಲುಮೆ ಮೊದಲಾದವಕ್ಕೆ ಗಾಳಿ ನುಗ್ಗಿಸುವ ಕೊಳವೆಮೂತಿ) ಮೂಲವನ್ನು ಒದಗಿಸಿತು. ಇವುಗಳನ್ನಾತ ಈಲೋ ಪೈಲ್ಸ್ ಎಂದು ಕರೆದ. ನೀರು ತುಂಬಿದ ಈ ಪಾತ್ರೆಗಳನ್ನು "ಚಲನೆಯ ಶಕ್ತಿ"ಯನ್ನು ಹೆಚ್ಚಿಸುವ ಸಾಮಗ್ರಿ ಎಂದವನ್ನು ವಿವರಿಸಿದ. "ಈ ಪಾತ್ರೆಗಳನ್ನು ಕುಲುಮೆಯ ಬಳಿ ಇಟ್ಟರೆ ನೀರು ಕುದಿದು ಗಾಳಿ ಹೆಚ್ಚು ವೇಗದಿಂದ ಹಾಗೂ ಕಡಿಮೆಯಾಗದ ಶಕ್ತಿಯೊಡನೆ ಹೊರಬರುತ್ತ. ಈ ಪಾತ್ರೆಗಳನ್ನು ತಿರುಗುತ್ತಿರುವ ಗಾಜು ಲೋಹಗಳ ಉಷ್ಣಾಂಶವನ್ನು "ಹೆಚ್ಚಿಸಲು" ಅಥವಾ "ತಗ್ಗಿಸಲು" ಉಪಯೋಗಿಸಬಹುದು ಎಂದ.

ಈಗ ತಯಾರಿಸಿದ ಗಾಳಿಕೋವಿ ಆಧುನಿಕ ಬಂದೂಕಿಗೆ ಸಮವಲ್ಲದಿದ್ದರೂ ಸೀಸದ ಗುಂಡುಗಳನ್ನು ೨೦ ಹೆಜ್ಜೆ ದೂರದಲ್ಲಿದ್ದ ಗೋಡೆಗೆ ಅಪ್ಪಳಿಸಿ ಅವು ಚಪ್ಪಟೆಯಾಗುವಷ್ಟು ವೇಗದಿಂದ ಎಸೆಯಬಲ್ಲವಾಗಿದ್ದವು. ವಿಲ್‌ಕಿನ್ಸನ ಹೆಚ್ಚು 'ತಾತ್ವಿಕ' ಕಲ್ಪನೆಗಳಲ್ಲಿ 'ನೆಲ–ದೋಣಿ' ಒಂದು "ಹೆಚ್ಚು ಕಡಿಮೆ ದೋಣಿಯ ಆಕಾರವುಳ್ಳ ಇದು ನಾಲ್ಕು ಚಕ್ರಗಳ ಮೇಲೆ ನಿಂತಿರುತ್ತೆ. ಹಡಗುಗಳಲ್ಲಿ ಕಾಣುವಂತಹ ಹಾಯಿಯ ಸಹಾಯದಿಂದ ಸಂಚರಿಸುತ್ತದೆ ಎಂದು ಹೇಳಿದ (ಇಲ್ಲಿ ಆಧುನಿಕ ಹೋವರ್‌ಕ್ರಾಫ್ಟ್ ನೆನಪಿಗೆ ಬರುವದು ಸಹಜ) ಗಾಳಿಯಂತ್ರದ (ವಿಂಡ್‌ಮಿಲ್) ತಂತ್ರವನ್ನು ಆಧರಿಸಿದ ಗಾಡಿಗಳ ಚಕ್ರಗಳನ್ನು ತಿರುಗಿಸುವುದಕ್ಕೆ ವಾಯುಶಕ್ತಿಯನ್ನು ಉಪಯೋಗಿಸಬಹುದು ಎಂದ. ನಾವು ಯಾವುದಕ್ಕೆ ಹಣ ತೆರಬೇಕಾಗಿಲ್ಲವೊ ಯಾವುದು ಏನನ್ನೂ ತಿನ್ನುವುದಿಲ್ಲವೋ ಅಂತಹ ವಾಯುವನ್ನು ಉಪಯೋಗಿಸುವದು ಕುದುರೆಗಳನ್ನು ಉಪಯೋಗಿಸುವುದಕ್ಕಿಂತ ಹೆಚ್ಚು ಆಹ್ಲಾದಕರ ಹಾಗೂ ಒಳ್ಳೆಯ ಆರ್ಥಿಕ ನಿರ್ವಹಣೆ ಅಲ್ಲವೆ? ಎಂದು ಪ್ರಶ್ನಿಸಿದ.

## ಸಮುದ್ರದಡಿಯ ಸಾಮ್ರಾಜ್ಯಗಳು

ಜಲಾಂತರ್ಗಾಮಿಗಳ ವಿನ್ಯಾಸವನ್ನು ರಚಿಸಿದ ಕೀರ್ತಿ ಇವನಿಗೆ ಸಲ್ಲುತ್ತದೆ. ಅವನ ಮಾತಿನಲ್ಲಿ ಇವು ಸಮುದ್ರದಡಿಯ ಪ್ರಯಾಣಕ್ಕಾಗಿ ತಯಾರಿಸಿದ ಇವು ಮೇಲಕ್ಕೇಳಲು ಅಥವಾ ಆಳಕ್ಕಿಳಿಯಲು ಉದ್ದವಾದ ಹಗ್ಗದ ತುದಿಗೆ ಕಟ್ಟಿದ ಕೂತವನ್ನು ಉಪಯೋಗಿಸುತ್ತೇವೆ ಎಂದು ವಿವರಿಸಿದ. ಸಾಗರ ತಳದ ನೆಲಕ್ಕೆ ತಾಕುವಂತೆ ಕೂತವನ್ನು ಕೆಳಕ್ಕಿಳಿಸಿದಾಗ ನೌಕೆ ಮೇಲಕ್ಕೇರು

ವ್ರದು: ನೌಕಗೆ ಹತ್ತಿರವಾಗಿ ಕೂತವನ್ನೇವಾಗ ಅಷ್ಟೇ ಆಳಕ್ಕೆ ನೌಕೆ ಇಳಿಯುವುದು. ಆಹಾರವನ್ನು ರಕ್ಷಿಸುವ ಬಗೆ, ಕ್ಯಾಬಿನ್ನುಗಳ ರಚನೆ, ಜಲಾಭೇದ್ಯ ಕ್ಯಾಬಿನ್ನುಗಳ ನಿರ್ಮಾಣ ಮಲವನ್ನು ಹೊರಕ್ಕೆ ಸಾಗಿಸುವ ವ್ಯವಸ್ಥೆ ಇವುಗಳ ಬಗ್ಗೆ ಸಹ ನಿಖರವಾಗಿ ಬರೆದನಲ್ಲದೇ ನೌಕರವರ್ಗಕ್ಕಾಗಿ ಗಾಳಿಯನ್ನು ಎಷ್ಟು ಪ್ರಮಾಣದಲ್ಲಿ ಬೇಯಿಸಬೇಕು ಎಂಬುದನ್ನೂ ಅಂದಾಜು ಮಾಡಿದ್ದ. ಈ ವಿವರಗಳು ಈಗ ಹಾಸ್ಯಾಸ್ಪದವಾಗಿ ಕಂಡರೂ ಆಮ್ಲಜನಕ ಪ್ರಾಣ ಸಹಾಯಕ ಎಂದು ತಿಳಿಯಲು ಇನ್ನೂ ಒಂದು ಶತಮಾನದ ಬೇಕಾಯಿತು ಎಂಬುದನ್ನು ಗಮನಿಸಿದರೆ ವಿಲ್‌ಕಿನ್ಸನ ಶ್ರೇಷ್ಠತೆಯ ಅರಿವಾಗುತ್ತದೆ. ತಂಪಾಗಿಸಿದರೆ ಈ ಗಾಳಿಯನ್ನು (ಶೇಖರಿಸಿಟ್ಟ ಗಾಳಿ) ಮತ್ತೆ ಉಪಯೋಗಿಸಬಹುದು ಎಂದಾತ ತಿಳಿದಿದ್ದ. ಹೊರಗಿನ ಸೌರವ್ಯೂಹದಲ್ಲಿ ಕಾಲೋನಿಗಳನ್ನು ಕಟ್ಟಿ ಭೂಮಿಯ ಮೇಲಿನ ಜನಸಾಂದ್ರತೆಯನ್ನು ಕಡಿಮೆಮಾಡಬಹುದು ಎಂಬುದು ಇತ್ತೀಚಿನ ಕಲ್ಪನೆ. ಆದರೆ ಇದರೊಂದಿಗೆ ಇವನ ಜಲದಡಿಯ "ಸಾಗರ ಸಾಮ್ರಾಜ್ಯದ ಕಲ್ಪನೆಯನ್ನು ಹೋಲಿಸಿದಾಗ ವಿಲ್‌ಕಿನ್ಸನ ಕಲ್ಪನೆ "ಅತಿ" ಯಾಯಿತು ಎನ್ನಿಸುವುದಿಲ್ಲ. ಅಷ್ಟೇ ಅಲ್ಲ. ಇಂತಹ ಪ್ರಯತ್ನಗಳನ್ನು ಆಧುನಿಕ ವಿಜ್ಞಾನಿಗಳು ನಡೆಸಿದರು ಎಂಬುದನ್ನೂ ನಾವು ಮರೆಯಬಾರದು.

ತಾಂತ್ರಿಕ ವಿಜ್ಞಾನದ ಭದ್ರತಳಹದಿಯೇ ಇಂಗ್ಲೆಂಡಿನ ಉದ್ಯಮಗಳ ಪ್ರಗತಿಗೆ ಸರಿಯಾದ ದಾರಿ ಎಂದು ನಂಬಿದ್ದ ವಿಲ್‌ಕಿನ್ಸನಿಗೆ ಕ್ರಿ. ಶ. ೧೬೪೨ರಿಂದ ಕ್ರಿ. ಶ. ೧೬೫೨ರ ವರೆಗಿನ ಒಳಯುದ್ಧ ದೊಡ್ಡ ಪೆಟ್ಟು ಕೊಟ್ಟಿತು. ಇನ್ನು ವಿಜ್ಞಾನ ಜನಪ್ರಿಯವಾಗುವುದ ಕಷ್ಟ ಎಂಬುದನ್ನಾತ ಮನಗಂಡ. ಕ್ರಿ. ಶ. ೧೬೪೮ರಲ್ಲಿ ಈತ ಆಕ್ಸ್‌ಫರ್ಡಿನ ವ್ಯಾಡ್‌ಹ್ಯಾಮ್ ಕಾಲೇಜಿನ ವಾರ್ಡನ್ ಆಗಿ ನೇಮಕಗೊಂಡ. ಕೆಲವೇ ದಿನಗಳಲ್ಲಿ ವಿಲ್‌ಕಿನ್ಸ್ "ಫಿಲಾಸಫಿಕಲ್ ಕ್ಲಬ್" ಒಂದನ್ನು ಪ್ರಾರಂಭಿಸಿದ. ಇಲ್ಲಿ ಆಗಿನ ವಿಜ್ಞಾನಿಗಳು ತಮ್ಮ ಪ್ರಯೋಗಗಳನ್ನು ಚರ್ಚಿಸಲು ಸೇರುತ್ತಿದ್ದರು. ಇವರಲ್ಲಿ ಅನಿಲ ನಿಯಮಗಳನ್ನು ಕಂಡು ಹಿಡಿದ ರಾಬರ್ಟ್ ಬಾಯ್ಲ್, ವೈಜ್ಞಾನಿಕ ಉಪಕರಣಗಳನ್ನು ತಯಾರಿಸಿದ ರಾಬರ್ಟ್ ಹುಕ್ ಸಹ ಸೇರಿದ್ದಾರೆ. ವಿಲ್‌ಕಿನ್ಸ್ ಬರ್ತ್ ಹೊಂದಿ ಲಂಡನಗೆ ಹೋದಾಗ ಈ ಕ್ಲಬ್ ಸಹ ಅಲ್ಲಿಗೆ ಸ್ಥಳಾಂತರಿಸಲ್ಪಟ್ಟಿತು. ಇದರ ಜನಪ್ರಿಯತೆ ಎಷ್ಟಾಯಿತೆಂದರೆ ಚೀಪ್ ಸೈಡನ್ ಬುಲ್ಸ್‌ಹೆಡ್ ಬ್ಯಾವರ್ನನಲ್ಲಿ ಸಭೆ ಸೇರುತ್ತಿದ್ದ ಇವರು ಜಾಗ ಸಾಲದೇ ಗ್ರೆಶ್‌ಹ್ಯಾಮ್ ಕಾಲೇಜಿನಲ್ಲೂ ಕೊಠಡಿಗಳನ್ನು ಬಾಡಿಗೆಗೆ ತೆಗೆದು ಕೊಳ್ಳಬೇಕಾಯಿತು.

ಎರಡನೇ ಚಾರ್ಲ್ಸ್ ಮತ್ತೆ ರಾಜನಾದ ನಂತರ ಈ ಸಭೆಗಳಲ್ಲಿ ಭಾಗವಹಿಸುವ ಆಸೆಯನ್ನು ವಿಲ್‌ಕಿನ್ಸ್‌ಗೆ ತಿಳಿಸಿದ. ರಾಜನ ಭಾಗವಹಿಸುವಿಕೆಯಿಂದ ಇನ್ನೂ ಹೆಚ್ಚು ಗೌರವಾನ್ವಿತವಾದ ಈ ಕ್ಲಬ್ ಬಲುಬೇಗನೇ ಇಂದು ಪ್ರಪಂಚದಲ್ಲಿ ಅತ್ಯಂತ ಪ್ರತಿಷ್ಠಿತ ವೈಜ್ಞಾನಿಕ ಅಂಗಗಳಲ್ಲಿ ಒಂದಾದ ರಾಯಲ್ ಸೊಸೈಟಿಯಾಗಿ ಪರಿವರ್ತನೆಗೊಂಡಿತು.

ಇಂದು ಬದುಕಿದ್ದರೆ ವಿಲ್‌ಕಿನ್ಸ್ ರಾಯಲ್ ಸೊಸೈಟಿಯ ಪ್ರಗತಿಯನ್ನು ಕಂಡು ನಿಜಕ್ಕೂ ಹರ್ಷಿಸುತ್ತಿದ್ದ. ಪ್ರಪಂಚದ ಮೂಲೆ ಮೂಲೆಗೂ ವೈಜ್ಞಾನಿಕ ವಿಷಯಗಳನ್ನು ಪ್ರಸಾರ ಮಾಡಲು ಈ ಸಂಸ್ಥೆ ಮಾಡುತ್ತಿರುವ ಪ್ರಯತ್ನ ವಿಲ್‌ಕಿನ್ಸನಿಗೆ ಖಂಡಿತ ಪ್ರಿಯವಾಗುತ್ತಿದ್ದವು. ಜನಸಾಮಾನ್ಯರ ಒಳಿತಿಗಾಗಿ ಅವರ ಜೀವನ ಹೆಚ್ಚು ಸುಖಮಯವಾಗಿರುವುದಕ್ಕೆ ದಿನನಿತ್ಯದ ಜೀವನದಲ್ಲಿ ಉಪಯುಕ್ತವಾದ ವಿಷಯಗಳನ್ನು ಎಷ್ಟು ಸಾಧ್ಯವೋ ಅಷ್ಟು ಹರಡಬೇಕು ಎಂದು ದೃಢವಾಗಿ ನಂಬಿದ್ದ ವಿಲ್‌ಕಿನ್ಸ್ ಬ್ರಿಟನ್ನಿನ ದಾ ವಿಂಚಿ ಅಲ್ಲದಿದ್ದರೂ, ಆ ದೇಶದ ಅತ್ಯಂತ ಶ್ರೇಷ್ಠ ಸಂಸ್ಥೆಯೊಂದನ್ನು ಸ್ಥಾಪಿಸುವುದಕ್ಕೆ ಯೋಗ್ಯ ಮನುಷ್ಯನಾಗಿದ್ದ ಎನ್ನಬಹುದು. ✡

(ಆಧಾರ – ಸ್ಪೆಕ್ಟ್ರಮ್)






"ನೀನು ತಡವಾಗಿ ಮನೆಗೆ ಹೋದಾಗ ಹೆಂಡತಿಗೆ ಏನು ಕಾರಣ ಕೊಡುತ್ತಿ?"

"ನನಗೆ ಆಕೆ ಮಾತಾಡಲು ಬಿಟ್ಟರೆ ತಾನೆ ನಾನು ಕಾರಣ ಕೊಡುವುದು.."

*

ಗಂಡ ಆಫೀಸಿನಿಂದ ತಡವಾಗಿ ಬಂದ. ಕೂಡಲೇ ಆಕೆ, "ತೊಗೊಳ್ರಿ. ಇದು ಒಳ್ಳೆ ಹೇರ್ ಟಾನಿಕ್. ಕೂದಲು ಉದುರೋದಿಲ್ಲ" ಎಂದಳು.

"ಅರೆ, ನನ್ನ ಕೂದಲೆಲ್ಲಿ ಉದುರತ್ತಿವೆ?"

"ನಿಮ್ಮವಲ್ಲ. ಅದು ನಿಮ್ಮ ಪ್ರೈವೇಟ್ ಸೆಕ್ರೆಟರಿಗೆ. ದಿನವೂ ನಾಕು-ನಾಕು ಕೂದಲು ನಿಮ್ಮ ಶರ್ಟಿಗೆ ಅಂಟಿಕೊಂಡಿರ್ತವಲ್ಲ. ಅದಕ್ಕೇ ಆಕೆಗೆ ಕೊಡಿ."

*

"ನಮ್ಮ ಮದುವೆ ವಿಷಯ ಸ್ವಲ್ಪ ದಿನಾ ಗುಟ್ಟಾಗಿಡು."

"ನನ್ನ ಗೆಳತಿ ಸುಶೀಲಾಳಿಗೆ ಮಾತ್ರ ಹೇಳ್ತೇನೆ. ಆಗಬಹುದಾ?"

"ಯಾಕೆ?"

"ಆಕೆ- ನಿನ್ನ ಯಾರು ಮದುವೆ ಆಗ್ತಾರೆ? ಆಗೋನು ಮೂರ್ಖ- ಅಂತಿದ್ಲು. ಅದಕ್ಕೆ."

*

ತಮ್ಮ ಸರದಿ ಬರುವವರೆಗೂ ನಿಂತು ನಿಂತು ಕಾಲು ಜೋಮು ಹಿಡಿದಾಗ ಆ ವೃದ್ಧನಿಗೆ ಕರೆ ಬಂತು. ಕುಂಟುತ್ತ ಒಳ ಹೋದ. ಡಾಕ್ಟರಿಗೆ ತೊಂದರೆ ಹೇಳಿಕೊಂಡು ಚೀಟಿ ಪಡೆದು ಹೊರಬರುವಾಗ ಜೋಮು ಹಿಡಿದ ಕಾಲು ಸರಿಯಾಗಿತ್ತು. ಸರಿಯಾಗಿಯೇ ನಡೆದು ಹೋದ.

"ಈ ಡಾಕ್ಟರು ಎಷ್ಟು ಶ್ಯಾಣ್ಯಾರೋ ಮಾರಾಯಾ. ಅಕಾ, ಆ ಮುದುಕಾ ಒಳಗ ಹೋಗಿ ಹೊರಬರೂದ್ರಾಗs ಆರಾಮಾದ ನೋಡು!"-ಮಾತಾಡಿಕೊಂಡರು ಇಬ್ಬರು.

*

ಜಜ್ ಸಾಹೇಬರು ಆ ಲಾರಿ ಡ್ರೈವರನಿಗೆ, "ನಿನ್ನ ಲೈಸೆನ್ಸ್ ಎರಡು ವರ್ಷದ ವರೆಗೆ ರದ್ದು ಮಾಡಲಾಗಿದೆ," ಎಂದರು.

"ಬೇಡ ಸಾರ್. ನನ್ನ ಜೀವನವೇ ಅದನ್ನವಲಂಬಿಸಿದೆ," ಆತ ಗೋಗರೆದ.

"ದಾರಿಹೋಕರ ಜೀವನವೂ ಅದನ್ನವಲಂಬಿಸಿದೆ. ಆದ್ದರಿಂದ," ಎನ್ನುತ್ತ ಎದ್ದುಬಿಟ್ಟರು.

*

ಕಣ್ಣಾಸ್ಪತ್ರೆಗೆ ಹೋಗಿ ಮನೆಗೆ ಬರುತ್ತಲೆ ಹೆಂಡತಿ ಅಳತೊಡಗಿದಳು.

"ಯಾಕೇ? ಏನಾಯ್ತು?"

"ಏನಾಗತ್ತೆ. ಒಮ್ಮೆಯಾದ್ರೂ ನನ್ನ, ಆ ಡಾಕ್ಟರಿಣಿಯ ಕಣ್ಣಲ್ಲಿ ಕಣ್ಣಿಟ್ಟು ನೋಡಿದ ಹಾಗೆ, ನೋಡಿದೀರಾ? ಥೂ, ಈ ಗಂಡಸ್ರೇ ಇಷ್ಟು" ಎಂದು ಮತ್ತೆ ಮುಸುಮುಸುಗರೆದಳು.

*

ಕಾಳರಾತ್ರಿಯಲ್ಲಿ ವಡವೆಗಳ ಅಂಗಡಿಗೆ ಕನ್ನ ಹಾಕುತ್ತಿದ್ದವನನ್ನು ಹಿಡಿದು ಪೋಲೀಸನ, "ರೆಡ್ ಹ್ಯಾಂಡ್ ಸಿಕ್ಕುಬಿಟ್ಟೆ. ಎರಡೊರ್ಷ ಕಂಬಿ ಎಣಿಸೋವಂತೆ ನಡೆ" ಎಂದ.

ಕಳ್ಳ, "ನೋಡ್ರಿ, ನಾನು ವಕೀಲರನ್ನು ಕಾಣಬೇಕು. ಅವರೊಂದಿಗೆ ಫೋನಿನಲ್ಲಿ ಮಾತಾಡೋಕೆ ಇಲ್ಲಿಲ್ಲೀತಿದ್ದೆ," ಅಂದ. ಅವರು ಆತನನ್ನು ಒಳಹೋಗಬಿಟ್ಟರು. ಆತ ಅಲ್ಲಿಂದ ಪಾರಾಗಿ ಓಡಿಬಿಟ್ಟ.

ಆರು ತಿಂಗಳ ನಂತರ ಅದೇ ಕಳ್ಳನನ್ನು ಆತ ಮತ್ತೊಂದು ವಡವೆ ಅಂಗಡಿಯಿಂದ ಕೈ ತುಂಬ ಒಡವೆಗಳನ್ನು ಕದ್ದು ತರುವಾಗ ಹಿಡಿದುಬಿಟ್ಟರು. "ವಾಹ್, ಈ ಸಲ ಮುದ್ದೆ ಮಾಲು ಸಹಿತ ಸಿಕ್ಕುಬಿಟ್ಟೆಯಲ್ಲ. ನಡೆ ಸ್ಟೇಶನ್ನಿಗೆ," ಎಂದಾಗ ಕಳ್ಳ ಮತ್ತೆ ಮೊದಲಿನದೇ ನೆಪ ಹೂಡಿದ.

"ನಾನು ಮೂರ್ಖ ಅಂತಿಳದೀಯಾ? ಈ ಸಲ ನಿನ್ನ ಬಿಡಲ್ಲ. ತಡಿ, ನಾನೇ ಫೋನು ಮಾಡಿ ಬರ್ತೀನಿ," ಎನ್ನುತ್ತ ಓಡಿದ ಪೋಲೀಸ.

■

ಬೇಸಗೆಸುಯು ಆತ, "ದೇವರೆ, ನನ್ನ ಶತ್ರುವನ್ನು ನಾಶಮಾಡು," ಎಂದು ಪ್ರಾರ್ಥಿಸುತ್ತಿರುವಂತೆಯೇ, "ನೀವು ನೂರು ಸಲ ತಲೆ ಚಚ್ಚಿಕೊಂಡು ಕೇಳಿಕೊಂಡರೂ ನನ್ನ ಒಂದು ಕೂದಲನ್ನೂ ಕೊಂಕಿಸೋಕಾಗಲ್ಲ," ಎಂದಳು ಹೆಂಡತಿ.

■

"ಅಬ್ಬಾ, ಹಲ್ಲುನೋವು. ತಡೆಯೋಕಾಗೋದಿಲ್ಲ. ಏನಾದ್ರೂ ಔಷಧ ಹೇಳಯ್ಯಾ," ಆತ ಮಿತ್ರನಿಗೆ ಕೇಳಿದ.

"ನನಗೆ ಹಲ್ಲುನೋವು ಬಂದಾಗೆಲ್ಲಾ ನಾನು ನನ್ನ ಹೆಂಡ್ತಿ ಹತ್ರ ಹೋಗ್ತೀನೆ. ಆಕೆ ಒಮ್ಮೆ ಅಪ್ಪಿಕೊಂಡು ಮುದ್ದಿಟ್ಟುಬಿಡುತ್ತಾಳೆ. ಹಲ್ಲುನೋವು ಹೊರಟು ಹೋಗಿ ಬಿಡತ್ತೆ."

"ಹೌದಾ? ಅದ್ಭುತ! ಈಗ ಮನೇಲಿದಾಳಾ?"

■

ತಂದೆ: ಏ ಕತ್ತೆ, ಅಮಿತಾಬ್ ಬಚ್ಚನ್ನನ ಹಾಗೆ ಹೇರ್ ಸ್ಟೈಲ್ ಮಾಡಬೇಡ್ವೋ. ಎಷ್ಟು ಸಲಾ ಹೇಳಬೇಕು ನಿನಗೆ?

ಮಗ: ಮತ್ತೆ ನೀನಾದ್ರೆ ಮನಸ್ಸಿಗೆ ಬಂದ್ಹಾಗೆ ಮಾಡಬಹುದಾ?

ತಂದೆ: ಏನ್ಮಾಡಿದೆ?

ಮಗ: ಯೂಲ್ ಬ್ರೈನರ್ ಹಾಗೆ ಸ್ಟೈಲ್ ಮಾಡ್ತಿದೀಯಲ್ಲ?

■

ಯುದ್ಧದ ದೃಶ್ಯದ ಚಿತ್ರೀಕರಣಕ್ಕಾಗಿ ೧೦ ಸಾವಿರ ಎಕ್ಸ್‌ಟ್ರಾಗಳನ್ನು ನಿರ್ಮಾಪಕ ಕರೆಸಿದ. ಆತನ ಹೆಂಡತಿಗೆ ಗಾಬರಿ. "ಒಂದು ದಿನದ ಶೂಟಿಂಗಿಗೇ ಲಕ್ಷಾಂತರ ಹಣವನ್ನು ಅವರಿಗೆ ಕೊಡಬೇಕು. ಹ್ಯಾಗೆ ಮಾಡ್ತೀರಿ?" ಕೇಳಿದಳು ಗಂಡನಿಗೆ.

"ಚಿಂತೆ ಬೇಡ. ಮೂರು ದಿನ ಶೂಟಿಂಗು. ನಂತರವೇ ಅವರಿಗೆ ಅವರಿಗೆ ಹಣ ಕೊಡೋದು."

"ಆದ್ರೆ ಅಷ್ಟು ಹಣ ಒಮ್ಮೆಲೆ..?"

"ಶೂಟಿಂಗಿನಲ್ಲಿ ನಿಜವಾದ ಗುಂಡು ಬಳಸ್ಬೇಕು – ನೈಜತೆಗಾಗಿ ಅಂದಿದಾರೆ ಡೈರೆಕ್ಟ್ರು.."

■

ಹೊಸ ಶೂ ಕಂಪನಿಯ ಇಬ್ಬರು ಏಜೆಂಟರು ಟೂರಿಗೆ ಹೋದರು, ಬೇರೆ ಬೇರೆ ಕಡೆ.

ಆದಿವಾಸಿ ಪ್ರದೇಶಕ್ಕೆ ಹೋದವ ಕಂಪನಿಗೆ ತಂತಿ ಕೊಟ್ಟ. "ಇಲ್ಲಿ ಎಲ್ಲಾ ಬರಿಗಾಲಿನ ಜನ. ಶೂ ಅಂದರೇ ಗೊತ್ತಿಲ್ಲ. ಸಂಜೆ ಗಾಡಿಗೆ ಮರಳುತ್ತೇನೆ."

ಮತ್ತೊಬ್ಬ ಕೊಟ್ಟ ತಂತಿಯಲ್ಲಿ,

"ಇಲ್ಲಿನವರು ಶೂಗಳೇ ಇಲ್ಲದ್ದರಿಂದ ಬರಿಗಾಲಿನಿಂದಿದ್ದಾರೆ. ಕೂಡಲೇ ಒಂದು ಸಾವಿರ ಜತೆ ಶೂಗಳನ್ನು ಪಾರ್ಸಲ್ ಮಾಡಿ" ಎಂದಿತ್ತು.

■

ಆತ: ನಿನ್ನ ಹೆಂಡ್ತಿ ಬಹಳ ಜಾಣೆ ಅಂತಿಯಲ್ಲ, ಹ್ಯಾಗೆ?

ಈತ: ನಾ ಹೇಳಿದ್ದಕ್ಕೆಲ್ಲ ಬೇಗ ಒಪ್ಪಿಕೊಂಡುಬಿಡ್ತಾಳೆ.

*

ವಿಮಾ ಏಜಂಟ್ ನವವಿವಾಹಿತನ ಬಳಿ ಬಂದ. "ನೀನೀಗ ವಿವಾಹಿತ. ಇನ್ಶೂರ್ ಮಾಡಿಸೋದು ಅವಶ್ಯ ಅನಿಸ್ತದೆ..."

"ನನ್ನ ಹೆಂಡ್ತಿ ಅಷ್ಟು ಡೇಂಜರಸ್ಸಾ? ಇನ್ಶೂರಿನಷ್ಟು?" ನಡುವೇ ಕೇಳಿದ ನವ ವಿವಾಹಿತ.

✡

★★★★★★★★★★★★★★★



# ಮಧು ಚುಂಬನ

ಜಿ. ಎನ್. ಅಶೋಕವರ್ಧನ

ನನ್ನ ಪರ್ವತಾರೋಹಣದ ಸುಂದರ ಅನುಭವಗಳನ್ನು ಮಾತ್ರ ಕೇಳಿದ ಮೂರು ಮಿತ್ರರನ್ನು ಕರೆದುಕೊಂಡು ಒಮ್ಮೆ ಕೊಡಂಜೆಕಲ್ಲಿಗೆ ಹೊರಟೆ. ಜೊತೆಗೆ ಅನುಭವಿಗಳಾದ ಕುಲಕರ್ಣಿ, ಪ್ರಕಾಶರೂ ಇದ್ದರು. ನಾಲ್ಕು ಮೋಟಾರು ಸೈಕಲ್ಲು, ಒಂದು ಸ್ಕೂಟರ್ ನಮ್ಮ ವಾಹನ ಸೌಕರ್ಯ. ಬೆಳಿಗ್ಗೆ ಮಂಗಳೂರು ಬಿಟ್ಟು ಮೂಡಬಿದ್ರೆ ದಾಟಿ ನಾಲ್ಕು ಮೈಲು ಮುಂದಿನ ಹಳ್ಳಿ ಕೊಡಂಜೆಕಲ್ಲು ಸೇರಿದೆವು. ದಾರಿಕರೆಯಲ್ಲಿ ವಾಹನ ಬಿಟ್ಟು, ನೀರು ತಿಂಡಿಗಳ ಹೊರೆಹೊತ್ತು ಮಣ್ಣುದಾರಿ ತುಳಿದೆವು.

ಕಾಡುಕಲ್ಲು ಹಾಸಿದ ದಾರಿ, ಮೆಟ್ಟಿಲುದಾರಿಗಳನ್ನು ಸುಮಾರು ಅರ್ಧಮೈಲು ನಡಿಗೆಯಲ್ಲಿ ತುಳಿದು ತೀರ ಒರಟಾದ ಹಾಸುಬಂಡೆ ಏರಿ ಕುರುಚಲು ಕಾಡಿನೆಡೆಯಲ್ಲಿ ನುಸುಳು ದಾರಿ ಹಿಡಿದು ಸಾಗಿ ಮುಖ್ಯ ಶಿಖರ, ಅಂದರೆ ಸುಮಾರು ನಾನೂರು ಅಡಿ ಎತ್ತರದ ಕೋಡುಗಲ್ಲಿನ ಬುಡ ಸೇರಿದೆವು. ಅಲ್ಲೇ ಕಾಡಿನಿಂದ ಹೊರಚಾಚಿದ್ದ ಮಟ್ಟಸ ಬಂಡೆಯೊಂದನ್ನು ಸುಲಭವಾಗಿ ಏರಿ ಪ್ರಥಮ ವಿಶ್ರಾಂತಿ ಪಡೆದೆವು.

ಅಲ್ಲಿಂದ ಕಾಣುತ್ತಿದ್ದಂತೆ ಶಿಖರದ ಮೈ ನಾಲ್ಕೈದು ಬೃಹದಾಕಾರದ ಬಂಡೆಗಳ ಸೇರಬಟ್ಟಣೆ. ಇದರಲ್ಲಿ ಅಸಂಖ್ಯ ಸಂದುಗಳು, ಗುಹೆಗಳು ಮತ್ತು ಮುಂಚಾಚಿಕೆಗಳು. ಹತ್ತೆಂಟು ಹೆಜ್ಜೇನಿನ ಹುಟ್ಟು ಜೋತಾಡುತ್ತಿದ್ದವು. ಶಿಖರ ಏರಲು ಎಲ್ಲರೂ ಬಳಸುತ್ತಿದ್ದ ಸುಲಭ ಮೈ ಎಂದರೆ ಅವರ ಎದುರು ಮೈ. ನಾವಾದರೋ ಕಠಿಣ ಮೈ ಏರುವ ಛಲ ಹೊತ್ತು ಬಂದವರು. ಎಂದೇ ನಾವು ಕೂತಿದ್ದ ಬಂಡೆಯ ಸಂದಿನಲ್ಲಿ ಮತ್ತು ಇನ್ನೊಂದು ಬಂಡೆಯ ಮೈಯಲ್ಲಿ ಪೂರ್ವಭಾವಿಯಾಗಿ ನೈಜ ಶಿಲಾರೋಹಣದ ಕೆಲವು ತಂತ್ರಗಳನ್ನು ಪರಿಚಯಿಸಿಕೊಳ್ಳುವುದು ಅಗತ್ಯವಾಯಿತು.

ಎಂಟು ಗಂಟೆಯ ಸುಮಾರಿಗೆ ಕೋಡುಗಲ್ಲಿನ ನೇರ ಸಂದು ಒಂದನ್ನು ಹಿಡಿದೆವು. ಅಲ್ಲಿ ಎರಡು ಬಂಡೆಗಳು ಒತ್ತೊತ್ತಾಗಿ ಮೇಲಕ್ಕೆ ಚಾಚಿಕೊಂಡು ಎಪ್ಪತ್ತಡಿವರೆಗೆ ಚಿಮಣಿಯಂಥ ರಚನೆಯಿತ್ತು. ಅದನ್ನೇರುವ ವಿಶೇಷ ತಂತ್ರವನ್ನು ತೋರಿಸಿಕೊಟ್ಟೆ. ಉಳಿದವರು ಸರದಿಯ ಮೇಲೆ ಇದನ್ನು ಪ್ರಯೋಗಿಸಿದರು. ಐದಾರು ಜನ ಯಶಸ್ವಿಯಾಗಿ ಮೇಲೆ ಹೋದರು. ಚಿಮಣಿಯು ಬಂಡೆಯನ್ನು ನಿಧಾನವಾಗಿ ಬಳಸುತ್ತ ಏರುವ ಓಣಿಗೆ ಎರಡೂ ಬದಿಗೆ ಅಗಾಧ ಬಂಡೆಗೋಡೆ ಉಂಟು. ಓಣಿಯ ಕೊನೆಯಲ್ಲಿ ಎಡಕೊಳ್ಳದಿಂದ ಚಿಮಣಿ ಬರುತ್ತದೆ. ಎದುರಿಗೆ ಮತ್ತೊಂದು ಇಕ್ಕಟ್ಟಿನ ಚಿಮಣಿ. ಇದನ್ನು ಎಲ್ಲರೂ ಏರಲೇಬೇಕಿತ್ತು. ಅನುಭವಿಗಳಾದ ಕುಲಕರ್ಣಿ, ಪ್ರಕಾಶರು ಸ್ವತಂತ್ರವಾಗಿ ಮೇಲೇರಿ ತಮ್ಮೊಡನೆ ಒಯ್ದಿದ್ದ ನೈಲಾನ್ ಹಗ್ಗದ ತುದಿಯೊಂದನ್ನು ಕೆಳಗಿಳಿಬಿಟ್ಟರು. ರಕ್ಷಣೆಗೆ ಮಾತ್ರ ಈ ಹಗ್ಗ. ಆರೋಹಣ ಸ್ವತಂತ್ರವಾಗಿಯೇ ಆಗಬೇಕಾದ ಕ್ರಿಯೆ. ಮಂಜಪ್ಪ ಏರಿದರು. ಶ್ರೀನಾಥ



ಹಿಂಬಾಲಿಸಿ ಮಧ್ಯೆ ಸಿಕ್ಕಿಕೊಂಡರು. ಪಣಿಗಿ ಮೇಲೆ ಬಿದ್ದರು. ಭಟ್ಕೋಟಿಯನ್ನು ಮೇಲೆ ಎಳೆದು ಹಾಕಿಕೊಂಡರು. ಏರುವ ಹುರುಪಿನಲ್ಲಿ ತೊಡಗುವ ಮುನ್ನ ಹೆಜ್ಜೆ ಮರೆತರು ಹೆಗ್ಡೆ. ಬಂಡೆಯ ಸಂದೊಂದರಲ್ಲಿ ಬೂಟುಗಾಲು ಸಿಕ್ಕಿಕೊಂಡಿತು. ಬಿಡಿಸಿಕೊಳ್ಳಲು ಪ್ರಯತ್ನಿಸಿ ಸೋತರು. ವಿಧಿಯಿಲ್ಲದೆ ಲೇಸು ಸಡಲಿಸಿ ಬೂಟಿನಿಂದ ಕಾಲು ಸೆಳೆದು ಮತ್ತೆ ಕೈಯಲ್ಲಿ ಬೂಟನ್ನು ಎಳೆದು ತೆಗೆದರು. ಏರುವ ಸರದಿಯಲ್ಲಿ ಮಾತ್ರ ಹಿಂದೆ ಬಿದ್ದರು. ಮುಂದೊತ್ತಿದ ಬಸವರಾಜ, ಸುಬ್ಬನ್ ಕಡಿಮೆ ಒದ್ದಾಡಲಿಲ್ಲ. ಯೋಗನಿಗೆ ಹೊಸ ದಿಕ್ಕು ಸೂಚಿಸಿದೆ. ಅದು ಸ್ವಲ್ಪ ಸುಲಭವಿತ್ತು. ಹಿಂಬಾಲಿಸಿದರು ಹೆಗ್ಡೆ. ಕೊನೆಯವನಾಗಿ ನಾನು. ಗಂಟುಮೂಟೆಗಳನ್ನೆಲ್ಲ ಹಗ್ಗಕ್ಕೆ ಕಟ್ಟಿ ಮೇಲೆ ಕಳಿಸಿ ನಾನೂ ಏರಿದೆ.

ಅದೊಂದು ಗುಹೆಯಂಥ ಓಣಿ. ಅದರ ಇನ್ನೊಂದು ಕೊನೆ ಮೂಡಬಿದ್ರೆಯ ದಿಕ್ಕಿಗೆ ತೆರೆದುಕೊಂಡಿತ್ತು. ಹಾಗೆಂದು ಇಳಿಯ ಹೋದರೆ ಸುಮಾರು ಮುನ್ನೂರಡಿಯ ನೇರ ಕೊಳ್ಳ. ಈ ಮುಖದಲ್ಲಿಯ ಪುಡಿ ಬಂಡೆಯ ಒಟ್ಟಣೆಯನ್ನು ನೇರವಾಗಿ ಹುಶಾರಾಗಿ ಏರಿದೆವು. ಅಲ್ಲಿ ಇನ್ನೊಂದು ಗುಹೆಯಂಥ ರಚನೆ. ಅದರ ಪ್ರವೇಶ ವಿಶಾಲವಾಗಿತ್ತು. ಅಲ್ಲಿಂದ ಕೆಳಗಿನ ದೃಶ್ಯ ಸುಂದರ. ಅಲ್ಲಿಯೇ ದ್ವಿತೀಯ ವಿಶ್ರಾಂತಿ.

ಎರಡನೆಯ ಗುಹೆಯೂ ಓಣಿಯೆ. ಆದರೆ ವಿಸ್ತಾರ ಕಡಿಮೆ. ಒಬ್ಬರ ಹಿಂದೆ ಒಬ್ಬರಂತೆ ತೆವಳಿದೆವು. ಚೀಲಗಳನ್ನು ಕೈ ಕೈ ಕೊಟ್ಟು ದಾಟಿಸಿದೆವು. ಇನ್ನೊಂದು ಕೊನೆಯಲ್ಲಿ ನಮ್ಮನ್ನು ನುಂಗಲು ಬಾಯಿತೆರೆದಿರುವ ಪ್ರಪಾತ, [illegible]. ಅದರ ಎಡ ಮೂಲೆಯಲ್ಲಿ ಅನುಭವಿಗಳು ಬಳಸಬಹುದಾದಷ್ಟು ಸಪೂರ ಓಣಿಯಿತ್ತು. ಮೂವರು ಅನುಭವಿಗಳು ಹೊಸಬರಿಗೆ ಕೈಯಾಸರೆ ಕೊಟ್ಟೆವು. ದಾಟಿದಾಗಲೇ ಎಡಕ್ಕೊಂದು ನೀರಚಿಮಣಿ ತೋರುತ್ತದೆ. ಅದನ್ನು ಸೇರಲೊಂದು ಮೆಟ್ಟುಗಲ್ಲೂ ಇತ್ತು. ಕಲ್ಲಿನ ಬುಡದಲ್ಲಿ ಎಲ್ಲ ಚೀಲಗಳನ್ನೂ ರಾಶಿ ಹಾಕಿದೆವು. ಯೋಗ, ಶ್ರೀನಾಥ ಗುಹೆಯೊಳಗೆ ಮೈಚಾಚಿ ಶಿಖರ ತಲುಪುವ ಈ ಅಂತಿಮ ಕಾರ್ಯಭಾರವನ್ನು

ನೋಡುತ್ತಿದ್ದರು. ಕುಲಕರ್ಣಿ, ಪ್ರಕಾಶರು ಹಗ್ಗ ಹಿಡಿದುಕೊಂಡಾಗ ಸರಾಗ ಚಿಮಣಿ ಮುಗಿಸಿ ಮೇಲೆ ಅಣಿಯಾದರು. ಕೆಳಗುಳಿದ ಏಳು ಹೊಸ ಬರಿಗೆ ಈ ಚಿಮಣಿ ಮುಂದಾಳು ಸುಬ್ಬನ್.

ಸುಬ್ಬನ್ ಸೊಂಟಕ್ಕೆ ಇಳಿಬಿದ್ದ ಹಗ್ಗದ ಕೊನೆ ಕಟ್ಟಿ ಕುಲಕರ್ಣಿಗೆ ಸೂಚನೆ ಕೊಟ್ಟೆ. ಸೂತ್ರಧಾರಿ. "ರೆಡಿಪಾ" ಎಂದರು. ಹಿಂದಿನವರು ಇದನ್ನು ಹತ್ತಿದ್ದು ನೋಡಿದ್ದ ಸುಬ್ಬನ್ ಮೆಟ್ಟುಗಲ್ಲಿನಲ್ಲಿ ನಿಂತು ಮೈ ಕೈ ಚಾಚಿ. ಒಂದು ಕಾಲು ಮುಂದೆತ್ತಿ. ಇನ್ನೊಂದು ಕಾಲನ್ನು ತುದಿಗಾಲಿಗೆ ಚಿಮ್ಮಿದರು. ಎದುರು ಬಂಡೆಯನ್ನು ಭದ್ರವಾಗಿ ಸುತ್ತುವರಿದ ಬೇರನ್ನು ಚುರುಕಾಗಿ ಹಿಡಿದು, ಮುಂದೊತ್ತಿದ ಕಾಲಿನಿಂದ ಬಂಡೆ ಒದ್ದು ದೇಹವನ್ನು ಎಳೆದುಕೊಂಡರು. ಹಾಗೆ ಇನ್ನೊಂದು ಕಾಲಿನಲ್ಲಿ ಬಂಡೆಯ ಇನ್ನೂ ಒಳಮೈಯನ್ನು ತುಳಿದು ಸೊಂಟ ತಿರುಚಿ ಇನ್ನೊಂದು ಬಂಡೆಗೆ ಬೆನ್ನು ಆನಿಸಿದರು. ಮತ್ತೆ ಚಿಮಣಿ ಹತ್ತುವ ತಂತ್ರ ತಿಳಿದಿದ್ದುದರಿಂದ ಸುಬ್ಬನ್‌ಗೆ ಸುಲಭ. ಮೇಲೆ ಮೇಲೇರಿದರು. ಮಂಜಪ್ಪ, ಹೆಗ್ಡೆ ಸರದಿ ಕಾಯುವವರು. ಮೆಟ್ಟುಗಲ್ಲಿನಲ್ಲಿ ನನ್ನ ಪಕ್ಕದಲ್ಲಿ ಕುಳಿತು ಕತ್ತು ಮೇಲೆ ಕೀಲಿಸಿದ್ದರು. ಮೆಟ್ಟುಗಲ್ಲಿನ ಕೆಳಗೆ ಸಣ್ಣ ಅವಕಾಶದಲ್ಲಿ ಬಸವರಾಜ ನಿಂತು ಅನಾಸಕ್ತಿಯಿಂದ ಮೇಲೆ ನೋಡುತ್ತಿದ್ದರು. ಭಟ್ಕೋಟಿ ಜೊತೆಯಲ್ಲೇ ನಿಂತಿದ್ದರೂ ಎತ್ತಲೋ ನೋಡುತ್ತ ಸಿಗರೇಟು ಕಚ್ಚಿ ಕಡ್ಡಿ ಗೀರಿದರು. ಸುಬ್ಬನ್ ಕಣ್ಮರೆಯಾಗುತ್ತಲೂ ಯೋಗ ಶ್ರೀನಾಥ ಬಳಿ ಹಳೆ ರಾಗ ಕೊಯ್ಯ ತೊಡಗಿದರು. "ಮುಂದಿನ್ನೂ ಏಕಲಾಟದಿಂದ ಬೆಳಿಗ್ಗೆ ಸರಿಯಾಗಿ ತಿನ್ನಲಿಲ್ಲ, ಬಿಡಿ. ವಿಶೇಷ ತರ್ಲಿಲ್ಲಾಂತ" ಅಷ್ಟರಲ್ಲಿ ಯಾರೋ ಕೂಗಿದರು. "ಏ ಭಟ್ಟಾ ಸಿಗ್ರೇಟು ಆರಿಸೋ. ಜೇನು ಜೇನು!"

ಬೀಸುತ್ತಿದ್ದ ತಿಳಿಗಾಳಿ. ಹತ್ತದವರ ಬಿರುಸಿನ, ಹತ್ತಿಸಿಕೊಳ್ಳುವವರ ಕ್ರಮಪಾಠ, ಎಲ್ಲ ಮೌನ. ಇವೆಲ್ಲವನ್ನೂ ಮುಸುಕಿ ಬಂತು ಝೇಂಕಾರ–ಕರಿ ಮೋಡ ಬಂದಂತೆ. ಪ್ರಪಾತದಾಳದಿಂದ ಎದ್ದು ಬಂದು ಮುತ್ತಿತು ಜೇನ್ನೊಣದ ಹಿಂಡು. ಸಿಗರೇಟು ಕ್ಷಣಾರ್ಧದಲ್ಲಿ ತಣ್ಣಗಾಗಿತ್ತು. ಜೀವರು ಸ್ತಬ್ಧರಾದರು. ನೊಣ ಸಣ್ಣದಲ್ಲ– ಹೆಜ್ಜೇನು. ಮಿತ್ರರು ಇದಕ್ಕೆ ಹೊಸಬರು. ಒಬ್ಬೊಬ್ಬರನ್ನು ನೂರು ಸಾವಿರ ನೊಣ ಮುತ್ತಿ, ತಿಕ ಉರಿ ಮುಳ್ಳು ಕುಟುಕಲು ತೊಡಗಿದಾಗ ಗುಲ್ಲೆದ್ದಿತು. ಬಿಸಾಥ್ನರಿಂದ ತೊಡಗಿ ಯೋಗನ ಕಿರುಚಾಟದ ವರೆಗೂ "ಊಂ, ಹಾಯ್, ಕಚ್ಚುತ್ತೆ ಸ್ವಾರ್, ಅಯ್ಯೋ ಉರಿ, ಸತ್ತೆ, ಕೆಟ್ಟೆ, ಅಪ್ಪಾ ಅಮ್ಮಾ, ದೇವ್ರೆ." ಹುಯ್ಲೋ ಹುಯ್ಲು.

ಕೆಳಗಿದ್ದವರಿಗೆ ಒಂದೆಡೆ ಎಪ್ಪತ್ತಡಿ ಏರುವ ಚಿಮಣಿ. ಇನ್ನೊಂಡೆದೆ ಹಗ್ಗದ ಸಹಾಯದಿಂದಷ್ಟೆ ಇಳಿಯಬಹುದಾದ ಕೊಳ್ಳ. ಏಳೂ ಹೊಸಬರಿಗೂ ನಾನೊಬ್ಬನೇ ದಾರಿ. ಅವರು ಧೃತಿಗೆಟ್ಟು ತಾವಾಗಿ. ಅಥವಾ ಜಾರಿ, ಪ್ರಪಾತಕ್ಕೆ ಕೆಡೆಯದಂತೆ ಹಿಡಿತವಿಲ್ಲದಿರುವ ಒಂದೇ ಯೋಚನೆಯಲ್ಲಿ ಮಗ್ನನಾಗಿ ನಾನು "ನಿಶ್ಚಲರಾಗಿ, ಮೌನರಾಗಿ" ಎಂದು ವಿಧಿಯಿಲ್ಲದೆ ಕಿರುಚುತ್ತ, ಜೇನು ಕಡಿತದ ಉರಿಯನ್ನು ನಿರ್ಲಕ್ಷಿಸಿ ಮೆಟ್ಟುಗಲ್ಲಿನ ಕೆಳಕ್ಕೆ ಹಾರಿದೆ. ಇದ್ದ ಇನ್ನೊಂದು ಪ್ರಪಾತದಂಚಿನಲ್ಲಿ ಒಬ್ಬೊಬ್ಬರನ್ನಾಗಿ ನಡೆಸುತ್ತ ಶಿಖರದ ಇನ್ನೊಂದು ತೆರೆದ ಮೈಗೆ ದಾಟಿಸಿದೆ. ಬಸವರಾಜ, ಭಟ್ಕೋಟಿ, ಮಂಜಪ್ಪ. ಹಗ್ಗದ ದಾಟಿದರು. ತಿರುಗಿ ಬಂದಾಗ ಗುಹೆಯೊಳಗಿನವರು ಬಾಕಿ. ಅವರಲ್ಲಿ ಶ್ರೀನಾಥ ನಾಪತ್ತೆ. ಯೋಗ "ಸತ್ತೆ, ಸತ್ತೆ" ಎಂದು ವಿಕಾರವಾಗಿ ಒರಲುತ್ತ ಗುಹೆಯೊಳಕ್ಕೂ ಹೊರಕ್ಕೂ ಹೊರಳಾಡುತ್ತಿದ್ದರು. ನಾನು ಗಟ್ಟಿ ಸ್ವರದಲ್ಲಿ ಆಶ್ವಾಸನೆ ಕೊಡುತ್ತ ಅವರನ್ನು ದಾಟಿಸಿಕೊಳ್ಳಲು ಒಂದು ಕೈ ಚಾಚಿದೆ. ಇನ್ನೊಂದರಲ್ಲಿ ಕಿವಿ, ಮೂಗು ಕಣ್ಣಿಗೆ ನುಗ್ಗುತ್ತಿದ್ದ ನೊಣದ ಕ್ರೋಧೀಹಿಂಡನ್ನು ತಡೆಯಲು ಪ್ರಯತ್ನಿಸುತ್ತಿದ್ದೆ. ಈ ದ್ವಂದ್ವದಲ್ಲಿ ನನ್ನ ಕನ್ನಡಕ ಸಿಡಿದು ಪ್ರಪಾತದೊಳಕ್ಕೆ ಸಂದಿತು. ಕೃತಕ ದೃಷ್ಟಿರಹಿತನಾದರೂ ದರ್ಶನರಹಿತನಾಗದೆ ಯೋಗನನ್ನು ಎಳೆದೊಯ್ದೆ. ತೆರೆದ ಮೈಯಲ್ಲಿ ಉಳಿದವರ ಸಂಗಡ ಅವರು ನಾನು ಬಿದ್ದುಕೊಂಡೆವು. ವಾತಾವರಣವೆಲ್ಲ ಜೇನ್ನೊಣ. ಅವು ಜೀವ ಜಲಗಳನ್ನು ಏಕಕಾಲದಲ್ಲಿ ಪ್ರಹರಿಸುತ್ತಿದ್ದವು. ಅಸಹ್ಯ–ಮಧುಕುಂಬನ, ದುರ್ಜನರ ಸಂಗವದು ಹೆಜ್ಜೇನು ಕಡಿದಂತೆ.

ಅರ್ಧ ಚಿಮಣಿ ಏರಿದ್ದ ಸುಬ್ಬನ್‌ಗೂ "ಜೇನ್ಕಾರ" ಕೇಳಿಸಿತ್ತು. ಸೂತ್ರಧಾರಿ "ನಿಮ್ಮನ್ನು ನೀವೇ ರಕ್ಷಿಸಿಕೊಳ್ಳಿ" ಎಂದು ಹಗ್ಗ ಬಿಟ್ಟುಕೊಂಡಿದ್ದರು.

ಕುಟುಕತೊಡಗಿತು. ಅಂತೂ ಒಮ್ಮೆಗೆ ಬಚಾವ್ ಅನ್ನಿಸಿತು.

ನಿಟ್ಟುಸಿರೆಳೆದು ಜನಗಣತಿ ಮಾಡಿದೆ. ಬೆಂಕಿ ಎಲ್ಲಿ ಆರಿಹೋಗುತ್ತೊ ಎಂದು ಕಳವಳ ಹೊತ್ತ ಅರೆಮುಖ ಕಾಣಿಸಿತು. ಪ್ರಕಾಶ ನಮ್ಮಿಂದ ತಪ್ಪಿಸಿಕೊಂಡಿದ್ದ. ಕುಲಕರ್ಣಿಯನ್ನು ಮೊದಲಿನಿಂದಲೂ ಕಂಡವರಿಲ್ಲ. ಶ್ರೀನಾಥ ಗುಹೆಯ ಹೊರ ಅಂಚಿನತ್ತ ಧಾವಿಸಿದ್ದನ್ನು ಯೋಗ ನೋಡಿದ್ದರು. ಕೂಗಿ ಕರೆದರೆ ಓ ಎನ್ನರು ಈ ಮೂವರು–ಕರೆದರೆ ಬಾರರು.

ಅತ್ತಿತ್ತ ಪರದಾಡಿ, ಸಿಕ್ಕ ಕಸ ಒಟ್ಟಿ ಬೆಂಕಿಗೆ ಜೀವ ಊದಿದರು. ಬರಿಕೈಯಲ್ಲಿ ನೆಲ ಕೆರೆದು ಬೇರುಕಿತ್ತು ಬೆಂಕಿಗೊಡ್ಡಿದರು. ಬಸವರಾಜ ಸ್ವಂತ ಕರವಸ್ತ್ರವನ್ನೂ ಅಗ್ನಿಗರ್ಪಿಸಲು ಅಣಿಯಾದರು. ಪರಸ್ಪರ ಮುಖ. ಕೈ ಒಡ್ಡಿ ಎಚ್ಚರದಿಂದ ಅಸಂಖ್ಯ ಜೇನುಮುಳ್ಳುಗಳನ್ನು ಕಿತ್ತೆವು. ನಮ್ಮೆಲ್ಲ ಪ್ರಯತ್ನ ಇದ್ದಾಗಲೂ ಬೆಂಕಿ ಕಡಿಮೆಯಾಗುತ್ತಿತ್ತು. ನಾವು ಹೆಜ್ಜೆಜ್ಜೆ ಪರಸ್ಪರ ಹತ್ತಿರರಾಗುತ್ತಿದ್ದೆವು. ಕಾವ ಬಂಡೆ, ಉರಿವ ಬಿಸಿಲು, ಸುಡುವ ಬೆಂಕಿ, ಕಚ್ಚಿದಲ್ಲಿ ಕಿಚ್ಚಿಕ್ಕುವ ಜೇನ್ನೊಣದ ಅವಿರತ ಧಾಳಿ, ಕಾಣೆಯಾದ ಮೂವರ ಕುರಿತ ಚಿಂತೆ ಒಟ್ಟಾಗಿ ನನ್ನ ಕಾಲಗುಂಟ ಏರಿದಂತನ್ನಿಸಿತು. ನೋಡಿದೆ. ಪ್ಯಾಂಟಿನ ಬಲಕಾಲು ಸುಮಾರು ಆರಿಂಚೆತ್ತರಕ್ಕೆ ಸುಟ್ಟು ಮತ್ತೂ ಮೇಲಕ್ಕೆ ಹೊಗೆಯಾಡುತ್ತಿತ್ತು. ನನಗೆ ಕಾರ್ಕೋಟಕ ದಂಶನವಾದಂತೆ. ಕೈಯಲ್ಲಿ ಹೊಸಕಿದೆ. ಕೈಸುಟ್ಟಿತು. ಬೆಂಕಿ ಬಿಡಲಿಲ್ಲ. ನನ್ನ ಸೊಂಟಕ್ಕೆ ತಗುಲಿಕೊಂಡಿದ್ದ ಪುಟ್ಟ ನೀರಿನ ಕ್ಯಾನಿನಿಂದ ನೀರು ಸಿಂಪಡಿಸಿ ಆರಿಸಿದೆ.

ಹೊತ್ತು ಸರಿದದ್ದು ತಿಳಿಯಲೇ ಇಲ್ಲ. ಹನ್ನೊಂದೂವರೆಯ ಸುಮಾರಿಗೆ ಕಥೆ ಸುರುವಾಗಿತ್ತು. ಒಂದೂವರೆ ಗಂಟೆಗೆ ಶಿಖರದೆಡೆಯಿಂದ ಕುಲಕರ್ಣಿ ದಡದಡನೆ ಬಂಡೆಯ ಸುಲಭ ದಾರಿಯೆಡೆಗೆ ಓಡಿ ಹೋಗುವುದು ಕಾಣಿಸಿತು. ಕೊನೆಗೂ ಸಿಕ್ಕಿದರಲ್ಲ ಎಂಬ ಸಮಾಧಾನ, 'ಓಡಬೇಡಿ ಆಯತಪ್ಪಿ ಉರುಳಿದರೆ ಎಲುಬು ಸಿಕ್ಕದು ಎಚ್ಚರಿಕೆಯ ನುಡಿ, ಇತ್ತ ಬನ್ನಿ ಬೆಂಕಿಯ ರಕ್ಷಣೆಗೆ' ಎಂಬ ಕರೆ. ಇಲ್ಲಿ ಮೊಳಗುವ ಮೊದಲೇ ಅವರು ನೂರಡಿ ಕೆಳಗೆ ಹೋಗಿ ಕೈಯಲ್ಲಿ ಮುಖ ಮುಚ್ಚಿಕೊಂಡು ಮುಖಾಡೆ ಬಿದ್ದರು. ನೊಣದ ಹಿಂಡೊಂದು ಅವರನ್ನು ತೀರ ಆತ್ಮೀಯವಾಗಿ ವಿಚಾರಿಸಿಕೊಳ್ಳುತ್ತಿತ್ತು. ನಾವು ಕೂಗಿ ಕರೆದೆವು. ಕಿವಿಗೆ ಹುಳು ನುಗ್ಗದಂತೆ ಬಟ್ಟೆ ತುರುಕಿದ್ದ ಅವರಿಗೆ ಕೇಳಿಸುವುದಾದರೂ ಹೇಗೆ? ಸ್ವಲ್ಪ ಹೊತ್ತು ಬಿಟ್ಟು ಅವರು ಮತ್ತಷ್ಟು ಕೆಳಕ್ಕೋಡಿ ಕಣ್ಮರೆಯಾದರು. ನಮ್ಮ ಗಸ್ತಿನವರೇನು ಕಡಿಮೆಯವರಂತೆ ತೋರಲಿಲ್ಲ. ಅವರೆ ಹೀಗೆ ಎಷ್ಟೊತ್ತು? ಬದಲು ಕುಲಕರ್ಣಿಯವರನ್ನು ಕೆಲವರಾದರೂ ಹಿಂಬಾಲಿಸಿದರೆ ಹೇಗೆ?

ಮಂಜಪ್ಪ ಮೊದಲಿಗ. ಕುಕ್ಕುರುಗಾಲಿನಲ್ಲೋಡಿದರು. ಇಳುಕಲು ಉಪೇಕ್ಷಿಸುವಂಥದ್ದಲ್ಲ. ತೆವಳಿದರು. ಸರಿದು ಮರೆಯಾದರು. ಭಟ್ಕೋಟಿ ಹಿಂಬಾಲಿಸಿದರು. ಹೆಗ್ಡೆ, ಸುಬ್ಬನ್, ಬಸವರಾಜ ಸ್ವಲ್ಪ ಅಂತರದಲ್ಲೇ ಅಂತರ್ಧಾನರಾದರು. ಯೋಗನನ್ನು ಬಿಟ್ಟೆ. ಅವರು ಐದು ಮಿನಿಟು ಕಳೆದು ತಿರುಗಿ ಬಂದು. ಬಿದ್ದುಕೊಂಡರು. "ನೊಣ ಬಿಡಲ್ಲ ಸತ್ತೋಗ್ತಿನಿ" ಎಂದು ಮುಲುಕಿದರು. ಕೊಂಚ ನೀರು ಕೊಟ್ಟು ಸಮಾಧಾನಿಸಿದೆ. ಸ್ವಲ್ಪ ಹೊತ್ತಿನಲ್ಲಿ ಸುಬ್ಬನ್ ಓಡಿ ಬಂದರು. ಕುಲಕರ್ಣಿಗೆ ಅವಸರದಲ್ಲಿ ನೀರೊಯ್ದರು. ನೊಣದೊತ್ತಡ ಕಡಿಮೆಯಾಗಿತ್ತು. ನಾನು ಯೋಗನನ್ನು ಹೊರಡಿಸಿಕೊಂಡು ಹೋಗಬಹುದಿತ್ತು. ಆದರೆ ಪ್ರಕಾಶ ಶ್ರೀನಾಥರ ಒಗಟು?

ಬೆಂಕಿ ಅವಶೇಷವಾಗಿತ್ತು. ಗಂಟೆ ಮೂರು. ಭ್ರಮರಮುಕ್ತಿಗಾಗಿ ಕತ್ತಲಾಗುವ ತನಕ ಹೀಗೆ ಉಳಿದರೆ ದೇಹದ ಹಸಿ ಹಿಂಗಿಯೋ ನೊಣದ ವಿಷ ಏರಿಯೋ ಸಾವು ತಪ್ಪಿದ್ದಲ್ಲ. ಹಾಗಾಗಿ ಹುಡುಕುವ ಪ್ರಯತ್ನ ಮಾಡಲೆಂದು ಗುಹೆಯತ್ತ ಓಡಿದೆ. ಬಂಡೆಯ ನೆರಳು ಸೇರಿ ಮಲಗಿದೆ. ಹತ್ತೆಂಟು ನೊಣ ರೊಂಯ್ಯೆಂದು ಜೊತೆಗೊಟ್ಟು ದಿಕ್ಕುಗಾಣದವರಂತೆ ಸುಳಿದು. ಸುತ್ತಿ ಮರೆಯಾದವು. ಸಂತೋಷದಿಂದ ನೊಣವಿರದ ಜಾಗಕ್ಕೆ ನೆರಳಿಗೆ ಯೋಗನನ್ನು ಕೂಗಿ ಕರೆದೆ. ಆಗ ಎಲ್ಲಿಂದಲೋ ಆಳದಿಂದ ಶ್ರೀನಾಥರ ಪರಿಚಿತ ಕೂಗು ಕೇಳಿಸಿತು.

ಆ ಪುಣ್ಯಾತ್ಮ ನೊಣ ಬೆಂಬತ್ತಿದ್ದೇ ಸರಸರನೆ ಗುಹೆಯಲ್ಲಿ ತೆವಳಿ ಜರ್ರನೆ ಹೊರಮುಖದಲ್ಲಿ ಜಾರಿ ಕೆಳಗಣ ಗುಹೆಯ ಮೂಲೆಯೊಂದರಲ್ಲಿ ಮತ್ತು ಕೆಳಗಿಳಿಯಲಾರದ ಸಂಕಟಕ್ಕೆ ಮುಖ

ಭಯದಿಂದಲೋ ಇಳಿದೇಬಿಟ್ಟರು.

ಪ್ರಕಾಶ ನನ್ನನ್ನು ಹಿಂಬಾಲಿಸಿ ಬಂದ. ನಾನು ಹತ್ತಡಿ ಬಂಡೆ ಹಾರಿದ್ದು ಅವನಿಗೆ ಗೊತ್ತಾಗದೇ ದಿಕ್ಕು ತೋಚದಾಯ್ತು. ಸ್ವಲ್ಪ ಹಿಡಿದ. ಸುಮ್ಮನೆ ಬಿದ್ದುಕೊಂಡ. ಮತ್ತೆ ಇಳಿಯತೊಡಗಿದಾಗ ತಾನು ಸುಲಭದಾರಿಯಿಂದ ದೂರದ ಮೈಗೆ ಬಂದದ್ದು ಗೋಚರಿಸಿತು. ತಿದ್ದಿಕೊಳ್ಳುವ ಸಮಯ ಅದಲ್ಲ. ಹಾಗೇ ಮಲಗಿದ್ದ. ಅಷ್ಟರಲ್ಲೇ ಕೆಳಗಿದ್ದ ಕಡಿಮೆ ಕವಿತದವರು ನಿರ್ದೇಶನ ಕೊಟ್ಟರು. ಅವನು ಅದಕ್ಕೆಲ್ಲ ಕಿವುಡು–ಭ್ರಮರಗಾನಬಧಿರನಾಗಿದ್ದನವ. ಕೆಳಗಿನವರು ಹೊಸಬರಾಗಿ ಅವನನ್ನು ಸಮೀಪಿಸಲೂ ಹೆಳವರು. ಎಷ್ಟೋ ಹೊತ್ತಿನ ಮೇಲೆ ಪ್ರಕಾಶನೇ ಪಕ್ಕನೆ ಸುಲಭದಾರಿಯತ್ತ ಸರಿಯತೊಡಗಿದ. ಕಣ್ಣುಕತ್ತಲೆಬ್ಬಿತು. ಮೊಸಟಿಡಿಕೆ ಕಾಣಿಸಲಿಲ್ಲ. ಇಳಿಯುವ ಆಳ ಗೊತ್ತಾಗಲಿಲ್ಲ. "ನೀರು ನೀರೆಂ"ದ. ಒಬ್ಬರು ನೀರು ಕ್ಯಾನ್ ಹಿಡಿದು




"ಲಗ್ಗೇಜ್ ಎತ್ತಿಳಿಸೋದಕ್ಕೆ ಕಂಡಕ್ಟರ ಸಹಾಯ ಮಾಡ್ತಾನೇಂತ ಅವರು ಬೋರ್ಡ್ ಹಾಕಿರಬಹುದು... ನಿನಗೆ 'ನಾವು ಕೂಲಿ ಹಾಗೆ ಕಾಣ್ತೇನ್ಯೋ ಇಳಿಸೋದಕ್ಕೆ...'"

ಅವನತ್ತ ಏರಿದರು. ಆದರೆ ಮತ್ತೂ ಅವನನ್ನು ಬಾಧಿಸುತ್ತಿದ್ದ ನೊಣ ನೋಡಿ ಹೆದರಿ ನೀರು ಕ್ಯಾನ್ ಅವನತ್ತ ಬಿಸಾಡಿದರು. ಪೂರ್ತಿ ಕುಡಿದ, ಕ್ಯಾನ್ ಕೆಳಕ್ಕೆ ತಳ್ಳಿದ. ದೃಷ್ಟಿ ಸ್ವಲ್ಪ ನಿಚ್ಚಳವಾಯ್ತು. ನಿರ್ಲೋಚನೆಯಿಂದ ಇಳಿದ. ಪ್ರಕಾಶ ಜಾರಿದ. ಬಿದ್ದ, ಹೋದ ಎಂದು ಕೆಳಗಿನವರು ಗಾಬರಿಸ್ಥಿತಿಯಲ್ಲಿರುವಾಗಲೇ ಇವನು ಕ್ಷೇಮವಾಗಿ ನೆಲ ಸೇರಿದ. ಭ್ರಮರಮುಕ್ತನೂ ಆಗಿದ್ದ.

ಕುಲಕರ್ಣಿ, ಪ್ರಕಾಶರು ಬಂಡೆಯೊಂದರ ನೆರಳಿನಲ್ಲಿ ಮೈಚಾಚಿ ಒಬ್ಬರಾದಂತೆ ಒಬ್ಬರಾಗಿ ವಾಂತಿಯೋ ಭೇದಿಯೋ ಎನ್ನುತ್ತ ನೀರು ಕೇಳುತ್ತ, ಕುಡಿಯುತ್ತ ಇದ್ದರು. ಪುಣ್ಯವಶಾತ್ ಸಮೀಪದ ಇನ್ನೊಂದು ಅಗಾಧ ಬಂಡೆಯಲ್ಲೊಂದು ನೀರಿನಾಸರೆಯಿತ್ತು. ಅದರ ಬಗ್ಗೆ ಅವರಿಗೆ ನಾನು ಮೊದಲೇ ತಿಳಿಸಿದ್ದುದರಿಂದ ಉಳಿದವರು ಇದ್ದ ಕ್ಯಾನಿನಲ್ಲೇ ನೀರು ತೋಡಿ ಕುಡಿದರು. ಪ್ರಕಾಶ, ಕುಲಕರ್ಣಿಗೆ ತುಂಬಿ ತಂದು ಕೊಟ್ಟರು. ನೀರು ತರುವವರು ಹೋಲಿಕೆಯಲ್ಲಿ ತೀರ ಕಡಿಮೆ ಕಷ್ಟಸಿಕೊಂಡವರಾದರೂ ಖಂಡಿತ ಸ್ವಸ್ಥರಿರಲಿಲ್ಲ. ಆದರೂ......

ಮೇಲುಳಿದಿದ್ದ ನಮ್ಮ ಮೂವರನ್ನು ಹುಡುಕಿಕೊಂಡು ಮಂಜಪ್ಪ ಬಂದರು. ಕ್ಷೇಮವಾರ್ತೆ ಕೊಟ್ಟು, ಪಡೆದು ಮರಳಿದರು. ಮೊದಲು ವಿಶ್ರಮಿಸಿದಲ್ಲಿ ನಾನು ಪ್ರಾಸಂಗಿಕವಾಗಿ ಬೆಟ್ಟದ ಇನ್ನೊಂದು ಮೈಯಲ್ಲಿರುವ ಗುಹಾಶ್ರಮ ಅಲ್ಲಿನ ಸ್ವಾಮಿಗಳ ಬಗ್ಗೆ ಹೇಳಿದ್ದೆ. ಅದನ್ನು ಜ್ಞಾಪಿಸಿಕೊಂಡು ಹೆಗ್ಡೆ, ಭಟ್ಕೋಟಿ ಕಾಡುನುಗ್ಗಿ ಅಲೆದು ಗುಹಾಶ್ರಮ ಹುಡುಕಿ ಸೇರಿದರು. ಸ್ವಾಮಿಗಳಿಗೆ ಕತೆ ಹೇಳಿದರು. ಸ್ವಾಮಿಗಳು ಅಪಾರ ಮಾನವೀಯತೆಯಿಂದ ಬಂದವರಿಗೆ ಊಟವಿಕ್ಕಿ ಹಿಂದುಳಿದವರಿಗೆ ಊಟ ಕಟ್ಟಿಸಿದರು. ಲೇಪ ಒಂದನ್ನು ಆಗಲೇ ತಯಾರು ಮಾಡಿ ಎಲ್ಲವನ್ನು ಹುಡುಗನೊಬ್ಬನೊಡನೆ ಕಳಿಸಿಕೊಟ್ಟರು.

ಎಲ್ಲರೂ ಮೊದಲು ಪ್ರಕಾಶ, ಕುಲಕರ್ಣಿಯ ಮೈಯಿಂದ ಕೂಡಿತಾದಷ್ಟು ಮುಳ್ಳು ತೆಗೆದು ಲೇಪ ಸವರಿ ಒತ್ತಾಯದ ಊಟ ಮಾಡಿಸಿ ತಾವೂ ಮಾಡಿದರು. ಮತ್ತೆ ಮುಟ್ಟಿದಲ್ಲೆಲ್ಲ ನೋವೆಂದು ಧ್ವನಿ ಕೊಡಲೂ ತ್ರಾಣ ಸಾಲದೆ ಮುಲುಗುತ್ತಿದ್ದ ಪ್ರಕಾಶನನ್ನು ಆಧರಿಸಿಕೊಂಡು ಕುಲಕರ್ಣಿ

ಯನ್ನು ಮುಂದಿಟ್ಟುಕೊಂಡು ಆಶ್ರಮಕ್ಕೆ ಹೊರಟರು. ಇದೇ ಸಮಯಕ್ಕೆ ನಾವು ಮೂವರು ಆಶ್ರಮವಾಸಿ ಒಬ್ಬರ ನಿರ್ದೇಶನದ ಮೇರೆಗೆ ಆಶ್ರಯ ಸೇರಿ ಊಟ ಮುಗಿಸಿದೆವು. ಹೊತ್ತಿಸಮ ಕತ್ತಲಾಗುತ್ತಿದ್ದಂತೆ ಊರು ಸೇರುವ ಕಾತರ ಏರಿತ್ತು. ಮತ್ತೆ ಮತ್ತೆ ವಾಂತಿ ಭೇದಿ, ಆಶ್ರಮದ ಕಾಫಿ ಮುಗಿಸಿ ಹೊರಡುವಾಗ ಗಾಢಾಂಧಕಾರ ಕವಿದಿತ್ತು. ಸ್ವಾಮಿಗಳ ಭಕ್ತರ ನೆರವು, ಬೆಳಕು ಪಡೆದು ದಾರಿಕರೆ ಸೇರಿದೆವು. ಅಲ್ಲಿ ಸ್ವಾಮಿಗಳೇ ಬಾಡಿಗೆಗೆ ಕಾರನ್ನು ಮಾಡಿಕೊಟ್ಟರು. ಐದು ಜನ ಕಾರಿನಲ್ಲಿ ಉಳಿದವರು ನಾಲ್ಕು ವಾಹನಗಳಲ್ಲಿ ಹಂಚಿಕೊಂಡು ಒಂದು ವಾಹನವನ್ನು ಅಲ್ಲೇ ಬಿಟ್ಟು ಮಂಗಳೂರಿಸಿದೆವು. ನೇರ ಆಸ್ಪತ್ರೆಗೆ ಹೋದಾಗ ಗಂಟೆ ಹತ್ತೂವರೆ.

ಸುಮಾರು ಹನ್ನೆರಡು ಗಂಟೆಗಳ ಕಾಲ ಯುಕ್ತ ಚಿಕಿತ್ಸೆಯಿಲ್ಲದ ನಮ್ಮನ್ನು ಹೊದಲು ಚಿಮ್ಮಟಫಾರಿಗಳು ಹಿಡಿದವು. ಪೂರ್ಣವಾಗಿ ಮುಚ್ಚು ಕಟ್ಟಿತು. ರಕ್ತ ಸೇರಿದ ನಂಜಿನಿಂದ ಮೂತ್ರ ಜನಕಾಂಗ ಮತ್ತು ಪಿತ್ತಜನಕಾಂಗಗಳ ಕಾರ್ಯ ಸ್ಥಗಿತವಾಗಿತ್ತು. ಪರೋಕ್ಷವಾಗಿ ಹೃದಯಸ್ತಂಭನದ ಹೊದಲ ಅಪಾಯ ಸಂಭಾವ್ಯ. ದೀರ್ಘಕಾಲೀನ ಪರಿಣಾಮಗಳು ಅಲಾಯಿಪ. ಅವನ್ನು ನಿವಾರಿಸಲು ನಾಲ್ಕು ಜನರನ್ನು ಒಳರೋಗಿಗಳನ್ನಾಗಿ ಉಳಿದವರನ್ನು ಹೊರರೋಗಿಗಳನ್ನಾಗಿ ಯುಕ್ತ ಚಿಕಿತ್ಸೆ ನೀಡಿದರು. ತೀವ್ರ ಕಡಿತಕ್ಕೊಳಗಾದವರು ವಾರದ ನಂತರ ಹೊರಬಂದರೂ ತಿಂಗಳೊಂದರ ಕಾಲ ಪಥ್ಯ ವಿಶ್ರಾಂತಿ ಅನುಸರಿಸಬೇಕಾಯ್ತು.

ಮಧು–ಮಧುರ; ಮಧು(ಪ)ಚುಂಬನ? ✡



## ನಾಲ್ಕು ಮತ್ತು ಚಾರ್ಲ್ಸ್ ಫೋರ್ಡ್

ಜರ್ಮನಿಯ ಸಮ್ರಾಟ ಚಾರ್ಲ್ಸ್ ಫೋರ್ಡ್ (ನಾಲ್ಕನೆಯ ಚಾರ್ಲ್ಸ್) ನಿಜವಾಗಿ ನಾಲ್ಕನೆಯ ಚಾರ್ಲ್ಸ್‌ನಾಗಿರಲಿಲ್ಲ. ಆತ ನಾಲ್ಕು ನಾಲ್ಕು ಬಾಗಿಲುಳ್ಳ ನಾಲ್ಕು ಮಹಲುಗಳಲ್ಲಿ ವಾಸಿಸುತ್ತಿದ್ದ. ಪ್ರತಿ ಮಹಲಿನಲ್ಲಿ ನಾಲ್ಕು ಕೋಣೆಗಳು ಮತ್ತು ಪ್ರತಿ ಕೋಣೆಗೆ ನಾಲ್ಕು ನಾಲ್ಕು ಕಿಡಕಿಗಳಿದ್ದವು. ದಿನದಲ್ಲಿ ಆತ ನಾಲ್ಕು ಸಲ ನಾಲ್ಕು ಬೇರೆ ಬೇರೆ ಡೈನಿಂಗ್ ಟೇಬಲ್‌ಗಳ ಮೇಲೆ ನಾಲ್ಕು ನಮೂನೆಯ ಅಡಿಗೆಯ ಊಟ ಮಾಡುತ್ತಿದ್ದನಲ್ಲದೆ ನಾಲ್ಕು ನಮೂನೆಯ ಮದ್ಯವನ್ನು ಕುಡಿಯುತ್ತಿದ್ದ. ಆತ ನಾಲ್ಕು ಬಣ್ಣಗಳ ಪೋಷಾಕು ತೊಡುತ್ತಿದ್ದ. ಆತನ ಖಾಸಾ ಅಶ್ವಾಲಯದಲ್ಲೂ ನಾಲ್ಕು ಕುದುರೆಗಳಿದ್ದವು. ಆತನ ಸೈನ್ಯದಲ್ಲಿ ನಾಲ್ಕು ಭಾಗಗಳಿದ್ದವು. ಅಲ್ಲದೆ ಆತ ನಾಲ್ಕು ಜನ ಗವರ್ನರರು, ನಾಲ್ಕು ಜನ ಜನರಲ್‌ಗಳು, ನಾಲ್ಕು ಮಂದಿ ಡ್ಯೂಕ್ ಮತ್ತು ನಾಲ್ಕು ಜನ ಕ್ಯಾಪ್ಟನ್‌ಗಳನ್ನು ನೇಮಿಸಿಕೊಂಡಿದ್ದ.

ಜೀವನವಿಡೀ ಆತನನ್ನು ಮೋಹಿಸಿದ ಈ 'ನಾಲ್ಕು' ಆತನ ಸಾವಿನಲ್ಲೂ ಸಂಗಾತಿಯಾಯಿತು. ನಾಲ್ಕು ಜನ ಡಾಕ್ಟರರು ನಾಲ್ಕು ದಿನ ಆತನನ್ನು ಬದುಕಿಸಲು ಪ್ರಯತ್ನಿಸಿದರಾದರೂ ಆತ ನಾಲ್ಕನೆಯ ದಿನ ನಾಲ್ಕು ಗಂಟೆ ನಾಲ್ಕು ನಿಮಿಷಕ್ಕೆ ಕೊನೆಯುಸಿರೆಳೆದ. ಸಾಯುವಾಗ ನಾಲ್ಕು ಸಲ 'ಗುಡ್‌ಬೈ' ಹೇಳಿದ.

ತಲೆನೋವು
ಮಾಯವಾಯಿತು!




ಒಂದೇ
**ಸಾರಿಡಾನ್** ನಿಂದ

ಶಕ್ತಿಶಾಲಿ
ಸುರಕ್ಷಿತ
ಒಂದೇ ಸಾಕು



# ಪದಾರ್ಥ ಚಿಂತಾಮಣಿ

– ೨೦ –

ಭಾರತದ **ಸೀರೆ** ಜಗತ್ತಿನಲ್ಲೆಲ್ಲ ಜಯಭೇರಿ ಹೊಡೆಯುತ್ತಿದೆ. ಆದರೆ **ಸೀರೆ**ಯೆಂಬ ಶಬ್ದದ ಇತಿಹಾಸ ಏರಿಳಿತಗಳಿಂದ ಕೂಡಿದೆ. ಇಂದು ಅದು ಕೇವಲ **ಹೆಂಗಸರು ಉಡುವ** ಬಟ್ಟೆಯೆಂದು ಅರ್ಥ ಕೊಡುತ್ತದೆ. ಸಾಕಷ್ಟು ಪೌರುಷವಿಲ್ಲದವರಿಗೆ ಸೀರೆ ಉಟ್ಟುಕೊಂಡು ಬಾ ಅನ್ನುತ್ತೇವೆ. ಆದರೆ ಕೆಲವೇ ಶತಮಾನಗಳ ಹಿಂದೆ ಕೂಡ **ಗಂಡಸರುಡುವ** ಬಟ್ಟೆಗೂ ಸೀರೆಯೆಂದೇ ಹೆಸರಿತ್ತು. ಕುಮಾರವ್ಯಾಸ ಅದೇ ಅರ್ಥದಲ್ಲಿ ಅದನ್ನು ಎಲ್ಲೆಡೆ ಪ್ರಯೋಗಿಸಿದ್ದಾನೆ. ಆ ಮೇಲೆ ಅದು ಬರೇ ಹೆಂಗಸರ ಉಡುಗೆಗೆ ಮಾತ್ರ ಯಾಕೆ ಅನ್ವಯಿಸಿತೆಂದು ಗೊತ್ತಿಲ್ಲ. ಬಹುಶಃ ಗಂಡಸರ ಬಟ್ಟೆಗೆ **ಧೋತಿ** ಅಥವಾ **ಧೋತರ** ಎಂಬ ಪದ ಬಳಕೆಗೆ ಬಂದುದರಿಂದ **ಸೀರೆ** ಹೆಂಗಸರಿಗೇ ಮೀಸಲಾಯಿತು.

ಸೀರೆಯೆಂಬ ಪದ ಹೇಗೆ ಹುಟ್ಟಿತು? ಸಂಸ್ಕೃತದ **ಚೀರ** ಶಬ್ದದ ತದ್ಭವ ಅದೆಂದು ಕೇಶಿರಾಜ ಗುರುತಿಸಿದ್ದಾನೆ. ವೈದಿಕ ಸಾಹಿತ್ಯದ ಕಡೆಕಡೆಗೆಯೇ ಸಂಸ್ಕೃತದಲ್ಲಿ **ಚೀರ** ಕಾಣಸುತ್ತದೆ. ತೈತ್ತಿರೀಯ ಆರಣ್ಯಕದಲ್ಲಿ **ಚೀರ** ಪದ ಉಂಟು. ಆ ಮೇಲೆ ಬೌದ್ಧ ಜೈನ ಪುರಾಣ ಸಾಹಿತ್ಯದಲ್ಲಿ ಅದು ಧಾರಾಳವಾಗಿದೆ. ತೈತ್ತಿರೀಯದಲ್ಲಿ ಅದರ ಅರ್ಥ ಉದ್ದವಾದ (ಹೊಲಿಯದ) ಬಟ್ಟೆ ಅಥವಾ ಹರಕು ಬಟ್ಟೆಯೆಂದಿತ್ಯಾದಿ ಇದೆ. ಆ ಮೇಲೆ ಬೌದ್ಧ ಜೈನ ಯತಿಗಳು ಉಡುವ ಅಥವಾ ಕಟ್ಟಿಕೊಳ್ಳುವ ಬಟ್ಟೆಯೆಂಬರ್ಥದಲ್ಲಿ ಅದು ಪ್ರಚಾರದಲ್ಲಿತ್ತು. ಇಂಥ ದೀನಾವಸ್ಥೆಯಿಂದ ಸೀರೆ ಜಗನ್ಮೋಹಕ ಸ್ತ್ರೀವಸ್ತ್ರವಾಗಿ ಮೇಲೇರಿ ಬಂದಿರುವುದು ಅದರ ಸೌಭಾಗ್ಯವಲ್ಲವೇ?

ಸೀರೆಗೆ ಇಂಗ್ಲೀಷಿನಲ್ಲಿ **ಸಾರಿ** (Saree) ಎಂಬ ಪದ ರೂಢವಾಗಿದೆ. ಇದು ಹಿಂದಿಯ **ಸಾಡೀ** ಅಥವಾ **ಸಾಢಿ**ಯ ಮಗು. ಕ್ರಿ. ಶ. ೧೫೯೮ ರಲ್ಲಿ ಅದು ಬಂಗಾಲದಿಂದ ಇಂಗ್ಲೀಷಿನಲ್ಲಿ ಹೊಕ್ಕಿತಂತೆ. **ಸಾಡಿ, ಸಾಢಿ** ಎಂಬುದು ಬಹುಶಃ ನಮಗೆಲ್ಲ ಪರಿಚಿತವಾದ **ಶಾಟಿ** ಎಂಬ ಸಂಸ್ಕೃತ ಪದದ ತದ್ಭವ ರೂಪ. **ಶಾಟಿ, ಶಾಟೀ** ಎಂಬ ರೂಪಗಳಲ್ಲಿ ವಸಿಷ್ಠ, ಚಾಣಕ್ಯ, ಬೌದ್ಧರ ದಿವ್ಯಾವದಾನ, ಮಹಾಭಾರತ ಮೊದಲಾದ ಪುರಾತನ ಗ್ರಂಥಗಳಲ್ಲೇ ಲಭ್ಯವಾಗುತ್ತದೆಂದು ಮೋನಿಯರ್ ವಿಲಿಯಮ್ಸ್‌ನ ಕೋಶದಿಂದ ತಿಳಿಯುತ್ತದೆ. **ಶಾಟಿ**ಯಾದರೂ **ಚೀರ**ಕ್ಕಿಂತ ಹಿರಿತನವುಳ್ಳ ಪದವಲ್ಲ. ಸಂನ್ಯಾಸಿಗಳು, ವಿರಕ್ತರು, ಭಿಕ್ಷುಗಳು ಉಡುವ ಒರಟು ಬಟ್ಟೆಯೇ ಅದು. **ಸಾಡಿ**ಯಾಗಿ ಇಂಗ್ಲೀಷ್ ಭಾಷೆಯನ್ನು ಪ್ರವೇಶಿಸುವಷ್ಟರಲ್ಲಿ ಅದು ಮುಖ್ಯವಾಗಿ **ರೇಶ್ಮೆಯಲ್ಲಿ ನೇಯ್ದ** ಹೆಂಗಸರ (ಹೊಲಿಯದ) ಬಟ್ಟೆಯೆಂಬರ್ಥ ಪಡೆದಿತ್ತು.

**ಚೀರ** ಎಂಬುದು ಸಂಸ್ಕೃತದ **ಚಿ** (ಜೋಡಿಸು, ಸಂಗ್ರಹಿಸು ಇತ್ಯಾದಿ) ಧಾತುವಿನಿಂದ ಹುಟ್ಟಿರಬೇಕೆಂದು ಕೋಶಕಾರರು ಹೇಳುತ್ತಾರೆ. **ಶಾಟಿ** ಎಂಬುದು **ಶಟಾ** ಎಂಬುದರ ಜ್ಞಾತಿಯಾಗಿರಬಹುದು. **ಶಟಾ** ಎಂದರೆ ಯೋಗಿಗಳ ಜಡೆ ಕಟ್ಟಿದ ಕೂದಲು. **ಜಟಾ** ಎಂದರೂ ಅದೇ. ಚೀರ ಶಾಟಿ ಎರಡೂ ಪದಗಳು ಮೊದಲು **ಮರದ ತೊಗಟೆ**ಯಿಂದ ನೇಯ್ದ ನಾರುಡುಗೆಯೇ ಇರಬಹುದು.

ಹೆಂಗಸರ ಸೀರೆಗೇ ವಿಶಿಷ್ಟವಾದೊಂದು ಶಬ್ದ ಹಿಂದೆ ಕನ್ನಡದಲ್ಲಿ ಬಳಕೆಯಲ್ಲಿತ್ತು. ಅದೇ **ಬಣ್ಣ**. ಜನಪದ ಸಾಹಿತ್ಯದಲ್ಲಿ ಈ ಶಬ್ದ ಧಾರಾಳವಾಗಿ ಸಿಗುತ್ತದೆ. **ಬಣ್ಣ**ದ ಮೂಲ ಪದವಾದ **ವರ್ಣ**ಕ್ಕೆ ಸಂಸ್ಕೃತದಲ್ಲಿಯೂ **ಬಟ್ಟೆ, ಹೊದಿಕೆ** ಎಂಬ ಅರ್ಥಗಳಿವೆ. ಬಣ್ಣ ಹಾಕಿದ ಬಟ್ಟೆಗಳನ್ನು ಉಡುವವರು ಹೆಂಗಸರೇ. ಆದುದರಿಂದ ಹೆಂಗಸರ ಉಡುಗೆಗೆ ಈ ಪದವೂ ಬೆಳ್ಳಗಿನ ಗಂಡಸರ ಉಡುಗೆಗೆ **ಧೋತ್ರ** ಎಂಬುದೂ ರೂಢಿಗೆ ಬಂದಿರಬಹುದು.

– **ಪಾವೆಂ**

# ಗಗನಕೆ ಹಾರಿತು ಮಂಜಿ

ಡಾ. ನಳಿನಿ ಮೂರ್ತಿ

ಅನಾದಿ ಕಾಲದಿಂದಲೂ ಮಾನವನಿಗೆ ಪ್ರಕೃತಿಯನ್ನು ಸೋಲಿಸಿ ಅವಳ ಮೇಲೆ ತನ್ನ ಆಧಿಪತ್ಯವನ್ನು ಸ್ಥಾಪಿಸುವ ಹುಚ್ಚು ಆಸೆ ಇದ್ದೇ ಇದೆ. ಅವಳು ತನ್ನ ದಾರಿಯಲ್ಲಿ ನೆಟ್ಟ ಮುಳ್ಳುಗಳನ್ನೆಲ್ಲ ಕಿತ್ತೊಗೆದು ಅವನು ಮುಂದೆ ಮುಂದೆ ನಡೆಯುವ ಪ್ರಯತ್ನ ಮಾಡುತ್ತಲೇ ಇದ್ದಾನೆ.

ಅದರಿಂದಲೇ ಭೋರ್ಗರೆಯುತ್ತಿರುವ ಸಮುದ್ರ ಅವನಿಗೆ ಎದುರಾದಾಗ ಮಾನವ ಹೆದರಲಿಲ್ಲ; ಅದರಲ್ಲಿ ಧುಮುಕಿ ಅದರ ಅಲೆಗಳ ಮೇಲೆ ತನ್ನ ಒಡೆತನ ಸ್ಥಾಪಿಸಿ ಗೆಲುವಿನ ಕೇಕೆ ಹಾಕಿದ.

ಆಕಾಶದಲ್ಲಿ ಹಾರುವ ಹಕ್ಕಿಗಳನ್ನು ನೋಡಿ ತಾನೂ ಗಗನಕ್ಕೆ ಹಾರಬಾರದೇಕೆ ಎನ್ನುವ ಕನಸು ಕಂಡು. ಅದನ್ನು ನನಸಾಗಿ ಮಾಡಿ ವಿಜಯದ ನಗೆ ಬೀರಿದ ಈ ಧೀರ ಮಾನವ.

ಮೋಡಗಳಲ್ಲಿ ಮುಖ ಮರೆಸಿ ನಿಂತಿದ್ದ ಮಹಾ ಪರ್ವತದ ತುತ್ತತುದಿಯಲ್ಲಿ ತನ್ನ ಕಾಲೂರಿ ನಿಂತು ಮುಂದೇನು ಮಾಡಲಿ ಎಂದು ಸುತ್ತಲೂ ನೋಡಿದ. ಆಗ ಆಕಾಶದಲ್ಲಿ ತಳತಳನೆ ಹೊಳೆಯುತ್ತಿದ್ದ ನಕ್ಷತ್ರರಾಶಿ ಅವನ ಕಣ್ಣಿಗೆ ಬಿತ್ತು. ಪ್ರಕೃತಿ ತನ್ನ ಮುಂದಿಟ್ಟ ಈ ಆಹ್ವಾನವನ್ನೂ ಆತ ನಿರಾಕರಿಸಲಿಲ್ಲ. ನಕ್ಷತ್ರಗಳೆಡೆಗೆ ತನ್ನ ಕೈ ಚಾಚಿದ.

ಆದರೆ ಪ್ರಕೃತಿ ಅಷ್ಟು ಸುಲಭವಾಗಿ ಸೋಲೊಪ್ಪಲು ಸಿದ್ಧಳಿರಲಿಲ್ಲ. ಆಕೆ, "ಇಗೋ, ನನ್ನ ರಹಸ್ಯಗಳ ಭಂಡಾರದ ಕೀಲಿ ಇಲ್ಲಿದೆ," ಎಂದು ಆಸೆ ತೋರಿಸಿ, ಮಾನವ ಹತ್ತಿರ ಹೋದಾಗ ಅಣಕಿಸಿ ಇನ್ನೊಂದು ದಿಕ್ಕಿಗೆ ಸರಿಯುತ್ತಿದ್ದಳು. ಆದರೆ ಮಾನವನೂ ಸೋಲೊಪ್ಪಲು ಸಿದ್ಧನಾಗಿರಲಿಲ್ಲ. ಹಟದಿಂದ ಮುಂದೆ ಮುಂದೆ ನುಗ್ಗುತ್ತಿದ್ದ.

೧೯೬೯ನೆಯ ಇಸವಿಯಲ್ಲಿ ಮಾನವ ಚಂದ್ರನ ಮೇಲೆ ಕಾಲಿಟ್ಟ. ಇನ್ನು ಹತ್ತೇ ವರ್ಷಗಳಲ್ಲಿ ಚಂದ್ರನ ಮೇಲೆ ಮಾನವನ ವಸತಿಯನ್ನು ನಿರ್ಮಿಸುವ ಕನಸು ಕಂಡು ಪುಳಕಗೊಂಡ. ಚಂದ್ರನನ್ನು ಮೊದಲ ಹೆಜ್ಜೆಯನ್ನಾಗಿ ಮಾಡಿಕೊಂಡು. ಸೌರವ್ಯೂಹದ ಉಳಿದ ಗ್ರಹಗಳ ರಹಸ್ಯವನ್ನು ಭೇದಿಸುವೆನೆಂದು ಭಾವಿಸಿ ಹಿಗ್ಗಿದ. ಆದರೆ ಅನೇಕ ಕಾರಣಗಳಿಂದ ಆ ಯೋಜನೆ ನೂರು ವರ್ಷಗಳಾದರೂ ಕಾರ್ಯಗತವಾಗಲಿಲ್ಲ.

ಆಮೇಲೆ ಹಲವಾರು ಸಲ ಮಾನವ ಚಂದ್ರಗ್ರಹಕ್ಕೆ ಹೋಗಿ ಬಂದ. ಮಾನವನಿರ್ಮಿತವಾದ ಅಂತರಿಕ್ಷ ಉಪಗ್ರಹಗಳು ಭೂಮಿಗೂ ಚಂದ್ರನಿಗೂ ಮಧ್ಯೆ ಸುತ್ತುತ್ತಿದ್ದವು. ಸ್ವಯಂಚಾಲಿತ ಉಪಗ್ರಹಗಳು ಮಂಗಳ, ಶುಕ್ರ, ಬುಧ ಮುಂತಾದ ಗ್ರಹಗಳ ಪರಿಸರವನ್ನು ಅಭ್ಯಸಿಸಿದ್ದವು. ಆದರೆ ಮಾನವನ ಅಂತರ್‌ಗ್ರಹಯಾನದ ಯೋಜನೆ ಹಿಂದೆ ಬಿದ್ದಿತ್ತು.

೨೧ನೇ ಶತಮಾನದ ಮಧ್ಯದಲ್ಲಿ ಚಂದ್ರಗ್ರಹದ ಮೇಲೆ ಮಾನವನ ಮೊದಲ ಅಂತರ್‌ಗ್ರಹ ವಸತಿ ನಿರ್ಮಿಸುವ ಯೋಜನೆ ಸಿದ್ಧವಾಯಿತು. ಕೋಟ್ಯಂತರ ರೂಪಾಯಿಗಳನ್ನು ಖರ್ಚು ಮಾಡಿ ಚಂದ್ರಗ್ರಹದ ಮೇಲೆ ಒಕ ನೆಲಸಬೇಕು ಎನ್ನುವ ಪ್ರತ್ಯೆ



ಬರುವದು ಸಹಜ. ಆದರೆ ಆ ಪ್ರಶ್ನೆಗೆ ಇಪ್ಪತ್ತನೆ-ಯ ಶತಮಾನದ ವಿಜ್ಞಾನಿಗಳೇ ಉತ್ತರ ಇತ್ತಿದ್ದರು.

ಚಂದ್ರನ ನಿರ್ವಾತ ಪ್ರದೇಶದಲ್ಲಿ ಧೂಳಿನ ಕಲ್ಮಷವಿಲ್ಲ. ಚಂದ್ರನಿಗೆ ಮಲಿನ ವಾತಾವರಣದ ಕವಚವಿಲ್ಲ. ಇದರಿಂದ ನಕ್ಷತ್ರಗಳನ್ನು ಅಭ್ಯಸಿಸಲು ಚಂದ್ರ ಸರಿಯಾದ ಜಾಗ. ಭೂಮಿಯ ಮೇಲೆ ನಿಂತರೂ ನಕ್ಷತ್ರಗಳು ಕಾಣುಸುತ್ತವೆ ನಿಜ. ಆದರೆ ಭೂಮಿಯ ಕಲುಷಿತ ವಾತಾವರಣ ನಕ್ಷತ್ರಗಳಿಗೆ ತೆಳುವಾದ ತೆರೆ ಹಾಕಿದೆ. ಅದರಿಂದ ಖಗೋಳ ಶಾಸ್ತ್ರಜ್ಞರು ಚಂದ್ರನ ಮೇಲೆ ಹೋಗಿ. ನಕ್ಷತ್ರ ಗಳಲ್ಲಿ ಅಡಗಿದ್ದ ರಹಸ್ಯಗಳನ್ನು ಬಿಡಿಸಲು ಉತ್ಸುಕರಾಗಿದ್ದರು.

ಚಂದ್ರನ ಮೇಲೆ ಬೀಸುವ ಬಿರುಗಾಳಿ ಇಲ್ಲ. ಉಕ್ಕಿಬರುವ ನೀರಿನ ಪ್ರವಾಹವಿಲ್ಲ. ಚಂದ್ರನ ಮುಖವನ್ನೇ ಬದಲಾಯಿಸುವ ಬುದ್ಧಿಜೀವಿಗಳೂ ಅಲ್ಲಿಲ್ಲ. ಅಲ್ಲಿ ಮಾಡಿದ ಕಾಲಿನ ಹೆಜ್ಜೆ ಆ ಮರಳಿ ನಲ್ಲಿ ಶಾಶ್ವತವಾಗಿ ನಿಲ್ಲುತ್ತದೆ. ಚಂದ್ರನ ಮೇಲೆ ಪ್ರಕೃತಿ ಅಡಗಿಸಿ ಇಟ್ಟಿರುವ ರಹಸ್ಯಗಳು ರಹಸ್ಯ ವಾಗಿಯೇ ಉಳಿದಿವೆ. ನಮ್ಮ ಭೂವಿಜ್ಞಾನಿಗಳು ಚಂದ್ರನ ಮರಳಿನಲ್ಲಿರುವ ಸೂಚನೆಗಳನ್ನು ಸರಿ ಯಾಗಿ ಓದಿದರೆ, ಆಗ ನಮ್ಮ ಸೌರವ್ಯೂಹ ಹೇಗೆ ಹುಟ್ಟಿತೆಂದು ತಿಳಿಯಲು ಸಾಧ್ಯವಾಗಬಹುದು.

ಭೂಮಿಯ ಮೇಲೆ ಅರವತ್ತು ಕಿಲೋಗ್ರಾಂ ತೂಕ ಇರುವ ಮಾನವ ಚಂದ್ರನ ಮೇಲೆ ಹತ್ತು ಕಿಲೋಗ್ರಾಂ ಮಾತ್ರ ತೂಗುತ್ತಾನೆ. ದೇಹದ ಭಾರ ಕಡಿಮೆ ಆದಾಗ, ಹೃದಯಕ್ಕೆ ಆಗುವ ಶ್ರಮವೂ ಕಡಿಮೆಯಾಗುತ್ತದೆ. ಹೃದಯ ರೋಗಿ ಗಳಿಗೆ ಮತ್ತು ರಕ್ತದ ಒತ್ತಡ ಇರುವವರಿಗೆ ಚಂದ್ರ ಜೀವದಾನ ಮಾಡುತ್ತಾನೆ.

ಚಂದ್ರನ ನಿರ್ವಾತ ಪ್ರದೇಶದಲ್ಲಿ ಲೋಹಗಳ ಎರಕ ಮತ್ತು ಬೆಸುಗೆ ಸುಲಭವಾಗಿ ಆಗುತ್ತದೆ. ಇಲ್ಲಿ ವೈದ್ಯಕೀಯ ಸಲಕರಣೆಗಳು ಮತ್ತು ಔಷಧ ಗಳ ತಯಾರಿಕೆಗಾಗಿ ಅನೇಕ ಕಾರ್ಖಾನೆಗಳನ್ನು ಸ್ಥಾಪಿಸಬಹುದು.

ಚಂದ್ರನ ಮೇಲೆ ಗಣಿಗಳನ್ನು ತೋಡಿ ಭೂಮಿಗೆ ಉಪಯೋಗ ಆಗುವಂತಹ ಅನೇಕ ಖನಿಜಗಳನ್ನು ಹೊರಗೆ ತೆಗೆಯಬಹುದು.

ಆದರೆ ಪ್ರಯೋಗಶಾಲೆಗಳಲ್ಲಿ ಕೆಲಸ ಮಾಡಲು ವಿಜ್ಞಾನಿಗಳು ಬೇಕು. ವೈದ್ಯರು ಮತ್ತು ದಾದಿಯರಿಲ್ಲದ ಆಸ್ಪತ್ರೆಗಳಿಲ್ಲ. ತಜ್ಞರ ಸಹಾಯ ಇಲ್ಲದೆ ಕಾರ್ಖಾನೆಗಳು ನಡೆಯುವುದಿಲ್ಲ. ಜನರೇ ಇಲ್ಲದ ಚಂದ್ರಲೋಕದಲ್ಲಿ ಮೇಲೆ ಕಂಡ ಕನಸು ನನಸಾಗಲು ಭೂಮಿಯಿಂದ ಮಾನವರು ನೆಲಸಬೇಕಾಗಿತ್ತು.

ಚಂದ್ರಲೋಕ ಭೂಮಿಯಲ್ಲ. ಅಲ್ಲಿನ ಪರಿಸರ ಮಾನವನಿಗೆ ಪ್ರತಿಕೂಲವಾಗಿತ್ತು.

ಅನಂತ ಕಾಲದಿಂದ ಚಂದ್ರ ಕವಿಗಳಿಗೆ ಸ್ಫೂರ್ತಿಯಾಗಿದ್ದ. ಹಾಲಿನ ಹೊಳೆಯಲ್ಲಿ ಹುಟ್ಟಿ ಬಂದವನೆಂದು ದಂತಕಥೆಗಳನ್ನು ರಚಿಸಿದ್ದರು. ಸುಂದರವಾದ ತರುಣಿಯನ್ನು ಚಂದ್ರವದನೆ ಶಶಿಮುಖಿ ಎಂದು ವರ್ಣಿಸಿ, ಉದ್ದುದ್ದವಾದ ಕವಿತೆಗಳನ್ನು ಬರೆದಿದ್ದರು. ಆದರೆ ನಿಜವಾಗಿ ಚಂದ್ರನ ಮೇಲೆ ಏನಿದೆ?

ಕಣ್ಣಿಗೆ ಕಾಣುಸುವ ವರೆಗೂ ಹರಡಿದ ಮರಳು ಕಾಡು, ಸಹಸ್ರಾವಧಿ ಗಿರಿಕಂದರಗಳು ಮತ್ತು ಹೊಂಡಗಳು ಚಂದ್ರನ ಮೇಲೆ ಇಳಿಯುವ ಸಾಹಸಿಗೆ ಸ್ವಾಗತ ನೀಡುತ್ತವೆ. ಅಲ್ಲಿ ಒಂದಾದರೂ ಅಲ್ಲಾಡುವ ಗಿಡವಿಲ್ಲ, ಕಣ್ಸೆಳೆಯುವ ಕಾಡಿಲ್ಲ, ಆಕಾಶದಲ್ಲಿ ಹಾರಾಡುವ ಪಕ್ಷಿಗಳೂ ಅಲ್ಲಿಲ್ಲ.

ಎಲ್ಲಿ ನೋಡಿದರೂ ಹಾಳು ಸುರಿಯುತ್ತಿದೆ. ಪ್ರಕೃತಿಯ ಸುಂದರ ನಾಟ್ಯ ಇಲ್ಲಿಲ್ಲ. ಇದೇ ಚಂದ್ರಲೋಕ-ಅಂತರ್‌ಗ್ರಹ ವಸತಿಗಳನ್ನು ನಿರ್ಮಿಸುವುದರಲ್ಲಿ ಮಾನವನ ಮೊದಲ ಹೆಜ್ಜೆ.

ಚಂದ್ರಲೋಕ – ಮಾನವ ಉಸಿರಾಡಲು ಗಾಳಿಯಿಲ್ಲ, ಕುಡಿಯಲು ನೀರಿಲ್ಲ. ಎಲ್ಲಿ ನೋಡಿದರೂ ಮರಳು ತುಂಬಿದೆ. ವಿವಿಧ ಬಣ್ಣಗಳ ಕುಣಿದಾಟ ಇಲ್ಲಿಲ್ಲ. ಆಗಸದಲ್ಲಿ ಮೋಡಗಳು ರಚಿಸಿದ ಚಿತ್ರಗಳಿಲ್ಲ.

ಚಂದ್ರಲೋಕ–ಹದಿನಾಲ್ಕು ದಿನ ಕಪ್ಪು ಆಕಾಶದಲ್ಲಿ ಸೂರ್ಯ ಪ್ರಖರವಾಗಿ ಬೆಳಗುತ್ತಿರುತ್ತಾನೆ. ಅವನ ಅತಿನೇರಳೆ ಕಿರಣಗಳನ್ನು ತಡೆಯುವ ವಾತಾವರಣ ಚಂದ್ರನ ಮೇಲಿಲ್ಲ. ಚಂದ್ರನ ಮೈಮೇಲೆ ಇನ್ನೂರು ಡಿಗ್ರಿ ಸೆಲ್ಸಿಯಸ್ ಶಾಖವಿರುತ್ತದೆ. ಸ್ಪೇಸ್ ಸೂಟ್ ಇಲ್ಲದೆ ಮಾನವ ಹೊರಗೆ ಕಾಲಿಟ್ಟರೆ, ಯಮನಿಗೆ ಆಹ್ವಾನ ಇತ್ತಂತೆಯೇ ಸರಿ.

ಮಿಕ್ಕ ಹದಿನಾಲ್ಕು ದಿನ ಕಪ್ಪಿನಲ್ಲೂ ಕಡು-ಕಪ್ಪಾಗಿರುವ ಆಕಾಶದಲ್ಲಿ, ದಿನವೂ ಒಂದೇ ಕಡೆ ತೋರುತ್ತಿರುವ ನಕ್ಷತ್ರಗಳು ಮತ್ತು ಬೆಳ್ಳಿಯ ತಟ್ಟೆಯಂತೆ ಹೊಳೆಯುತ್ತಿರುವ ಭೂಮಿ ಕಾಣಿಸುತ್ತದೆ. ಆದರೆ ನಮ್ಮ ಆಕಾಶದಲ್ಲಿ ತೇಲುವ ಬಿಳಿಯ ಮೋಡಗಳು ಇಲ್ಲಿಲ್ಲ. ಆಕಾಶಕ್ಕೆ ಅಂಚು ಕಟ್ಟುವ ಅರುಣರಾಗವಿಲ್ಲ. ಹೊರಗೆ ಕಾಲಿಟ್ಟರೆ ಮೈ ಮೂಳೆಗಳನ್ನೂ ಕೊಯ್ಯುವ, ಶೂನ್ಯಕ್ಕಿಂತ ಇನ್ನೂರು ಡಿಗ್ರಿ ಸೆಲ್ಸಿಯಸ್ ಕೆಳಗಿರುವ ಶೀತ ಮಾನವನನ್ನು ಬಲಿ ತೆಗೆದುಕೊಳ್ಳಲು ಕಾದಿದೆ.

ಚಂದ್ರಲೋಕ – ಇಲ್ಲಿದೆ ಅಗಾಧ ಮೌನ ಗಾಳಿಯ ಸುಯ್ಯಲಿಲ್ಲ, ಚಿಟ್ಟೆಗಳ ಸದ್ದಿಲ್ಲ. ನಮ್ಮ ಹೃದಯದ ಬಡಿತವೇ ನಮಗೆ ನಗಾರಿಯಂತೆ ಕೇಳಿಸುವಂತಹ ಸ್ಮಶಾನ ಮೌನ ಎಲ್ಲೆಲ್ಲೂ ಹರಡಿದೆ.

ಇಂತಹ ಜಾಗದಲ್ಲಿ ತನ್ನ ನೆಲೆಯೂರಲು ಮಾನವ ನಿರ್ಧರಿಸಿದ್ದ.

ಹಲವಾರು ತಜ್ಞರು ಭೂಮಿಯ ಮೇಲೆ ಕುಳಿತು, ಚಂದ್ರಲೋಕದಲ್ಲಿ ಮಾನವ ವಸತಿ ಹೇಗಿ



"ಬೇರೆಯವರ ಕಷ್ಟಗಳನ್ನು ಕಂಡು ಮರುಕ ಪಡಬೇಕು ಅಂತ ಶಾಸ್ತ್ರ ಹೇಳುತ್ತೆ. ಅಂದ್ಮಾಗೇ... ನಿನ್ನ ಅವಸ್ಥೆ ಕಂಡು ನಂಗೆ ಮರುಕ ಆಗುತೆ !"

ರಬೇಕೆಂದು ಮಾದರಿಗಳನ್ನು ರಚಿಸತೊಡಗಿದರು.

ಚಂದ್ರಲೋಕದಲ್ಲಿ ಇರುವ ಹವಾಮಾನದ ವೈಪರೀತ್ಯಗಳನ್ನು ತಡೆಯಲು ನೆಲದ ಕೆಳಗೆ ವಸತಿಗಳನ್ನು ನಿರ್ಮಿಸುವುದೊಂದೇ ಮಾರ್ಗ ಎಂದು ಅವರು ನಿರ್ಧರಿಸಿದರು.

ಅದೂ ಅಲ್ಲದೆ ಚಂದ್ರಲೋಕದಲ್ಲಿ ಉಲ್ಕೆಗಳ ಹಾವಳಿ ಇದ್ದೇ ಇರುತ್ತದೆ. ಮಾನವನ ಗುಡಾರ ನೆಲದ ಮೇಲೆ ಇದ್ದರೆ ಉಲ್ಕೆಯೊಂದು ಢಿಕ್ಕಿ ಹೊಡೆದು ಗುಡಾರ ಸುಟ್ಟುಹೋಗಬಹುದು. ಅಥವಾ ಒಂದು ಉಲ್ಕೆ ತಗಲಿದಾಗ ಗುಡಾರದ ಗೋಡೆಯಲ್ಲಿ ತೂತಾಗಿ ಒಳಗಿರುವ ಗಾಳಿಯೆಲ್ಲ ಹೊರಗೆ ಹೋಗಿ ಗುಡಾರದ ಒಳಗಿರುವ ಮಾನವ ಉಸಿರು ಕಟ್ಟಿ ಸಾಯಬಹುದು.

ನೆಲದ ಕೆಳಗೆ ವಸತಿಗಳನ್ನು ನಿರ್ಮಿಸಲು ಕಷ್ಟವಿರಲಿಲ್ಲ. ಸ್ಫೋಟಕ ವಸ್ತುಗಳನ್ನು ಉಪಯೋಗಿಸಿ, ಚಂದ್ರನ ನೆಲದ ಕೆಳಗೆ ಹಳ್ಳ ತೋಡಬೇಕು. ಆ ಹಳ್ಳದಲ್ಲಿ ವಿಶೇಷ ರೀತಿಯಲ್ಲಿ ತಯಾರಿಸಿದ ಪ್ಲಾಸ್ಟಿಕ್ ಬಲೂನು ಇಟ್ಟು ಅದರೊಳಗೆ ಉಸಿರಾಡಲು ತಕ್ಕಗಾಳಿ ತುಂಬಿ ಊದಬೇಕು. ಹೀಗೆ ಅರ್ಧ ವೃತ್ತಾಕಾರವಾಗಿರುವ ಭೂಗತ ಬಲೂನುಗಳಲ್ಲಿ ಮನುಷ್ಯರಿಗೆ ಮನೆಗಳನ್ನು ನಿರ್ಮಿಸಬಹುದು. ಇಂತಹ ಅನೇಕ ಬಲೂನ ಗುಹೆಗಳನ್ನು ಸುರಂಗ ಮಾರ್ಗಗಳಿಂದ ಸೇರಿಸಿದರೆ ಚಂದ್ರಲೋಕದಲ್ಲಿ ಮಾನವ ವಸತಿಯಾಗುತ್ತದೆ.

ಭೂಮಿಯ ಮೇಲಿದ್ದ ಅಂತರ್‌ಗ್ರಹ ವಸತಿಗಳ ಕಾರ್ಯಾಲಯದಲ್ಲಿ ಚಂದ್ರನಗರದ ಕರಡು ನಕ್ಷೆ ಸಿದ್ಧವಾಯಿತು.

ಕೊನೆಗೊಂದು ದಿನ ಚಂದ್ರನ ಮೇಲೆ ನೆಲೆಸಲಿದ್ದ ನೂರು ಸಾಹಸಿಗಳನ್ನು ಗಗನ ನೌಕೆ ಚಂದ್ರನ ಮೇಲೆ ಮೇಲಿಳಿಸಿತು. ಆ ಗಗನ ನೌಕೆಯಲ್ಲಿ ಅವರಿಗೆ ಬೇಕಾಗುವ ಉಸಿರಾಡುವ ಗಾಳಿ ಕುಡಿಯುವ ನೀರು ಮತ್ತು ತಿನ್ನುವ ಆಹಾರಗಳಿತ್ತು.

ಚಂದ್ರನ ಮೇಲಿರುವ ಬೇಕಾದ ಭೂಗತ ಗುಹೆಗಳ ನಿರ್ಮಾಣ ಮೊದಲಾಯಿತು. ಚಂದ್ರಲೋಕದ ಭವಿಷ್ಯ ಪ್ರಜೆಗಳ ಕೆಚ್ಚಿನ ಹೋರಾಟ ಆರಂಭವಾಯಿತು.

ಆ ಮೊದಲ ದಿನಗಳಲ್ಲಿ ಚಂದ್ರನ ಮೇಲಿರುವುದು ಬರಿಯ ವೈಜ್ಞಾನಿಕ ಪ್ರಯೋಗವಾಗಿರಲಿಲ್ಲ. ಅದಕ್ಕೆ ಸಾಹಸ ಬೇಕಾಗಿತ್ತು. ಅಪರಿಚಿತ ಪರಿಸರವನ್ನು ಗೆಲ್ಲುವ ಛಾತಿ ಬೇಕಾಗಿತ್ತು. ಈ ಹೋರಾಟದಲ್ಲಿ ಸೋತು ಭೂಮಿಗೆ ಹಿಂತಿರುಗಿದವರು ಬೆರಳಿನ ಮೇಲೆ ಎಣಿಸುವಷ್ಟು ಜನ ಮಾತ್ರ ಅಲ್ಲಿ ಉಳಿದವರು ಚಂದ್ರನ ಮೇಲೆ ಹಗಲಿರುಳೂ ದುಡಿದರು. ಆ ಬರಡು ಭೂಮಿಯ ಮೇಲೆ ತಮ್ಮ ಬೆವರು ಸುರಿಸಿ, ಅದು ಚಿನ್ನದ ನಾಡಾಗಲು ಶ್ರಮಿಸಿದರು.

*

ಹತ್ತು ವರ್ಷಗಳ ನಂತರ:

ಈಗ ನಮ್ಮ ಚಂದ್ರಲೋಕ ನೋಡುವಿರಂತೆ, ಬನ್ನಿ,

ಇದೀಗ ಭೂಮಿಯ ಆಶ್ರಿತನಲ್ಲ, ಸ್ವತಂತ್ರ



**"ಇನ್ನು ಮುಂದೆ ಖಂಡಿತ ಪಕ್ಷಾಂತರಿಸೋಲ್ಲ-ಒಳ್ಳೆಯ ಪಕ್ಷ ಸಿಗುವವರೆಗೆ ಅಂತ ಹೇಳಿಬಿಡಿ."**

ಚಂದ್ರಲೋಕ ಇದು. ನಾವು ಉಸಿರಾಡುವ ಗಾಳಿ ಈಗ ಭೂಮಿಯಿಂದ ಬರಬೇಕಾಗಿಲ್ಲ. ನಮ್ಮ ತಜ್ಞರು ಇಲ್ಲಿ ಸಿಕ್ಕುವ ಕಲ್ಲನ್ನು ಕಾಯಿಸಿ ಅದರೊಳಗೆ ಸೆರೆಯಾಗಿದ್ದ ಆಮ್ಲಜನಕವನ್ನು ಬಿಡುಗಡೆ ಮಾಡಿದ್ದಾರೆ. ಅದೇ ಕಲ್ಲನ್ನು ಕರಗಿಸಿ ಕುಡಿಯುವ ನೀರನ್ನೂ ಹರಿಸಿದ್ದಾರೆ.

ಈ ಗುಹೆಯನ್ನು ನೋಡಿ. ಇದು ವ್ಯವಸಾಯಕ್ಕಾಗಿ ಎಂದೇ ನಿರ್ಮಿಸಲ್ಪಟ್ಟಿದೆ. ಇದರ ಒಳಗೆ ಸೂರ್ಯನ ಶಕ್ತಿಯನ್ನು ಉಪಯೋಗಿಸಿ ಹವಾಮಾನವನ್ನು ನಿಯಂತ್ರಿಸಿದ್ದಾರೆ. ತರಕಾರಿಗಳನ್ನು ಬೆಳೆಸಲೆಂದೇ ಹಲವಾರು ಗುಹೆಗಳಿವೆ. ಹಣ್ಣು ಹಂಪಲು ಬೆಳೆಯುವ ಗುಹೆಗಳೂ ಉಂಟು. ಜೋಳ ರಾಗಿ ಭತ್ತ ಎಲ್ಲವನ್ನೂ ಈಗ ಇಲ್ಲೇ ಬೆಳೆಯುತ್ತೇವೆ. ಭೂಮಿಯಿಂದ ಈಗ ನಮಗೆ ಆಹಾರ ಬರಬೇಕಾಗಿಲ್ಲ, ನಾವೇ ಭೂಮಿಗೆ ಅಕ್ಕಿ ಮತ್ತು ಗೋದಿ ಕಳಿಸುತ್ತಿದ್ದೇವೆ.

ಐದು ವರ್ಷಗಳ ಹಿಂದೆಯೇ ಭೂಮಿಯಿಂದ ಹಸು, ಕೋಳಿ, ಕುರಿ, ಮುಂತಾದ ಪ್ರಾಣಿಗಳ ಭ್ರೂಣಗಳನ್ನು ತಂದು ಅದಕ್ಕಾಗಿ ತಯಾರಿಸಿದ ಕೃತಕ ಗರ್ಭಗಳಲ್ಲಿಟ್ಟು ಬೆಳೆಸಿದೆವು. ಈಗ ಚಂದ್ರಲೋಕದಲ್ಲಿ ಹಸು ಭೂಮಿಯ ಮೇಲಿರುವ ಹಸುವಿನ ಎರಡರಷ್ಟು ಗಾತ್ರದ್ದಿದೆ. ಹಾಲಿನ ಅಭಾವ ಎಂದರೆ ಏನೆಂದು ನಮಗೆ ತಿಳಿದೇ ಇಲ್ಲ.

ವಿದ್ಯುತ್ ಸರಬರಾಜು ಹೇಗೆ ಎಂದು ಕೇಳಿದಿರಾ? ಸೂರ್ಯನ ಶಕ್ತಿಯನ್ನು ಉಪಯೋಗಿಸಿ ವಿದ್ಯುತ್ ಉತ್ಪಾದನೆ ಮಾಡುತ್ತೇವೆ. ಚಂದ್ರನ ಮೇಲೆ ಸೂರ್ಯ ಯಾವಾಗ ಎಲ್ಲಿರುತ್ತಾನೆಂದು ನಾವು ನಿಖರವಾಗಿ ಹೇಳಲು ಸಾಧ್ಯವಿದೆ. ಅದರಿಂದ ಚಂದ್ರನ ನಾಲ್ಕು ಮೂಲೆಗಳಲ್ಲಿ ಸೂರ್ಯನ ಶಾಖ ತಗಲುತ್ತಲೂ ವಿದ್ಯುತ್ ಉತ್ಪಾದನೆ ಆಗುವಂತಹ ನಾಲ್ಕು ಕೇಂದ್ರಗಳನ್ನು ಕಟ್ಟಿದ್ದೇವೆ. ಇವರಲ್ಲಿ ಒಂದು ಕೇಂದ್ರಕ್ಕೆ ಸೂರ್ಯನ ಶಾಖ ಕಡಿಮೆ ಆಗುವ ವೇಳೆಗೆ, ಮತ್ತೊಂದು ಕೇಂದ್ರ ಸೂರ್ಯನ ಪ್ರಭಾವಕ್ಕೆ ಒಳಗಾಗುತ್ತದೆ. ನಮಗೆ ದಿನ ಪೂರ್ತಿ ವಿದ್ಯುತ್ತು ಸಿಗುತ್ತದೆ.

ಚಂದ್ರಲೋಕದ ಮೇಲೆ ವೈದ್ಯಕೀಯ ಸಲಕರಣೆಗಳನ್ನು ತಯಾರಿಸುವ ನಾಲ್ಕು ಕಾರ್ಖಾನೆಗಳಿವೆ. ಇಲ್ಲಿ ಖಗೋಳ ಸಮೀಕ್ಷಾಲಯವಿದೆ. ನಮ್ಮ ಗಣಿಗಳು ಹಗಲಿರುಳೂ ಕೆಲಸ ಮಾಡುತ್ತಿವೆ. ನಮ್ಮ ಆಸ್ಪತ್ರೆಗಳಲ್ಲಿ ಹಲವಾರು ಪ್ರಖ್ಯಾತ ವೈದ್ಯರು ಹೊಸ ಪ್ರಯೋಗಗಳನ್ನು ಮಾಡುತ್ತಿದ್ದಾರೆ.

ನಿಜ, ಈಗಲೂ ಸ್ಪೇಸ್ ಸೂಟ್ ಇಲ್ಲದೆ ಹೊರಗೆ ಹೋಗಲು ಸಾಧ್ಯವಿಲ್ಲ. ಆದರೆ ಚಂದ್ರಲೋಕ ಈಗ ಮರಳು ತುಂಬಿದ ಬರಡು ನೆಲವಲ್ಲ. ಅಲ್ಲಲ್ಲೇ ಮೇಲೆ ದೊಡ್ಡ ಗುಮ್ಮಟಗಳನ್ನು ನಿರ್ಮಿಸಿ ಅವುಗಳಲ್ಲಿ ಉದ್ಯಾನವನಗಳು ಮತ್ತು ಮನರಂಜನೆಯ ಸ್ಥಳಗಳನ್ನು ಮಾಡಿದ್ದೇವೆ. ನಿಮಗೆ ಎಂತಹ ಮನರಂಜನೆ ಬೇಕಾದರೂ ಚಂದ್ರನ ಮೇಲೆ ದೊರಕುತ್ತದೆ.

ಆದರೆ ನಮ್ಮ ನಿಜವಾದ ಸಂಪತ್ತು ಯಾವುದೆಂದು ಗೊತ್ತೇ? ಇದೋ ಇಲ್ಲಿ ಆಡುತ್ತಿರುವ ಮಕ್ಕಳನ್ನು ನೋಡಿ. ಇವರು ಚಂದ್ರನ ಮೇಲೆಯೇ ಹುಟ್ಟಿದ ಶಿಶುಗಳು; ಇವರೇ ಚಂದ್ರಲೋಕದ ನಿಜವಾದ ಪ್ರಜೆಗಳು. ಇವರ ತಾಯಿನಾಡು ದೂರದ ಭೂಮಿಯಲ್ಲ. ಇವರ ಕಲರವದಲ್ಲಿ ಭೂಮಿಯ ಪ್ರತಿಧ್ವನಿ ಬರುತ್ತಿಲ್ಲ.

ನಿಮಗೂ ಇಲ್ಲಿ ಬಂದಿರಬೇಕು ಎನ್ನುವ ಆಸೆ ಆಗುತ್ತಿದೆಯೇ? ಇಲ್ಲಿ ವಾಸ ಮಾಡುವ ಧೈರ್ಯ ನಿಮಗಿದ್ದರೆ ಬನ್ನಿ. ಚಂದ್ರಲೋಕ ಸಾಹಸಿಗಳನ್ನು ಯಾವಾಗಲೂ ಸ್ವಾಗತಿಸುತ್ತದೆ.

ಪ್ರತಿಕೂಲ ಪ್ರಕೃತಿಯನ್ನು ಗೆದ್ದು ಮಾನವ ಚಂದ್ರಲೋಕದ ಮೇಲೆ ತನ್ನ ವಿಜಯಧ್ವಜವನ್ನು ಹೇಗೆ ಊರಿದ್ದಾನೆ ಎಂದು ನೋಡಲು ಬನ್ನಿ. ★

**ಯಾವ ತತ್ವಗಳಿಗಾಗಿ ಮಾನವನಿಗೆ ಹೋರಾಡುವ ಪ್ರಸಂಗ ಬರುವುದಿಲ್ಲವೋ ಸಾಮಾನ್ಯವಾಗಿ ಆ ತತ್ವಗಳು ಬಲುಕಾಲ ಜೀವಂತವಾಗಿರುವುದಿಲ್ಲ.**

**—ಥಾಮಸ್ ಮ್ಯಾನ್**

# ಗಾಂಧಾರಿ

**ಹಲವಾರು ಸಾಮಾಜಿಕ ಕಾದಂಬರಿಗಳನ್ನು ನೀಡಿ ಕನ್ನಡ ಸಾರಸ್ವತ ಪ್ರಪಂಚದಲ್ಲಿ ಗಟ್ಟಿ ಹೆಸರಾಗಿರುವ ಡಾ. ಎಸ್. ಎಲ್. ಭೈರಪ್ಪ 'ಪರ್ವ'ದೊಂದಿಗೆ ಹೊಸ ಮಜಲನ್ನೇರಿದ್ದಾರೆ. ಮಹಾಭಾರತದ ಕಥೆಯನ್ನೇ ವಸ್ತುವಾಗಿ ಸ್ವೀಕರಿಸಿ, ಅಂದಿನ ಸಮಾಜವನ್ನು-ಅಧ್ಯಯನದ ಹಂದರಕ್ಕೆ ಕಲ್ಪನೆಯ ತಳಿರು ಕಟ್ಟಿ-ಪುನರ್ರಚಿಸಿ ಐತಿಹಾಸಿಕ-ಸಾಮಾಜಿಕ ಕಾದಂಬರಿಯಾಗಿ 'ಪರ್ವ'ವನ್ನು ರೂಪಿಸಿದ್ದಾರೆ. ಈ ಬೃಹತ್ಕಥೆಯನ್ನು 'ಕಸ್ತೂರಿ'ಯ ಕೆಲ ಪುಟಗಳಲ್ಲಿ ಸಂಗ್ರಹಿಸುವದು ಅಸಾಧ್ಯ. ಅಂತೆಯೇ ಈ ಕಥೆಯ ಪ್ರಮುಖ ಪಾತ್ರಗಳಲ್ಲಿ ಒಬ್ಬಳಾದ ಗಾಂಧಾರಿಯನ್ನು ಕಾದಂಬರಿಕಾರ ಕಂಡ ಬಗೆಯನ್ನು ಇಲ್ಲಿ ಸಂಗ್ರಹ ರೂಪದಲ್ಲಿ ಸೆರೆಹಿಡಿದಿದ್ದಾರೆ ಸಂಗ್ರಾಹಕರಿಬ್ಬರು.**

ಮಕ್ಕಳಿಲ್ಲದ ಪಾಂಡು ಮಹಾರಾಜನು ವಂಶ ವೃದ್ಧಿಗಾಗಿ ಹಗಲಿರುಳು ಚಿಂತಿಸಿ ತಪಸ್ಸು ಮಾಡಿ ದೇವಲೋಕದ ಜನರಿಂದ ಚಿಕಿತ್ಸೆ ಪಡೆದು ಮಕ್ಕಳನ್ನು ಪಡೆದೇ ತಿರುಗಿ ಬರುವೆನೆಂದು ಕುಂತಿ ಮಾದ್ರಿಯರೊಡನೆ ಹಿಮಾಲಯದೆಡೆಗೆ ತೆರಳುತ್ತಾನೆ. ಅವರು ಅಲ್ಲಿರುತ್ತಾ ಒಂದು ವರ್ಷ ಕಾಲ ಕಳೆದ ಮೇಲೆ ಹಸ್ತಿನಾವತಿಯಿಂದ ಅವನ ನೆಚ್ಚಿನ ದೂತನೊಬ್ಬನು ಬಂದು ಹಸ್ತಿನಾವತಿಯಲ್ಲಿ ಧೃತರಾಷ್ಟ್ರನ ವಿವಾಹವಾದ ಸಂಗತಿಯನ್ನು ತಿಳಿಸಿದಾಗ–

'ಹೆಣ್ಣು ಎಲ್ಲಿಯದು?' ಪಾಂಡು ಕೇಳಿದ.

'ಗಾಂಧಾರ ದೇಶದ್ದು. ಯಾತಕ್ಕೂ ಬಾರದ ಕುರುಡನಿಗೆ ನಮ್ಮ ಕಡೆಯ ಯಾವ ರಾಜ ವಂಶದವರು ಕೊಡುತ್ತಾರೆ? ಗಾಂಧಾರದ ಕಡೆ ಶುಲ್ಕ ಪಡೆದು ಮಾರುತ್ತಾರಂತೆ. ಮದ್ರದೇಶಕ್ಕೆ ಹೋಗಿ ನಿನಗೆ ಎರಡನೇ ಹೆಣ್ಣು ತರಲಿಲ್ಲವೇ, ಹಾಗೆಯೇ ಮಾಡಿದರು. ರಥ ಕುದುರೆಗಳ ಮೇಲೆ ಸೈನ್ಯ, ಗಾಡಿಗಳ ತುಂಬ ಐಶ್ವರ್ಯ ತುಂಬಿಕೊಂಡು ಹೋದರು. ಹೆಣ್ಣಂತೂ ಕೊಟ್ಟರು ಅವರು.'

'ಗಾಂಧಾರದ ಕಡೆಯ ಹೆಂಗಸರು ನಮ್ಮ ಆರ್ಯಾವರ್ತದ ಕಡೆಯ ಹಾಗೆ ಗಂಡ ಹೇಳಿದ ಹಾಗೆ ಕೇಳುವುದಿಲ್ಲವಂತೆ. ಹೌದೇ?' –ಪಾಂಡು ರಾಜ ಕೇಳಿದ.

'ಹಾಗೇನೋ ಹೇಳುತಾರೆ. ಆದರೆ ಈಕೆ ನಮ್ಮ ಕಡೆಯ ಹೆಂಗಸರಿಗಿಂತ ಮೀರಿದ ಪತಿ ಭಕ್ತೆ. ಗಂಡ ಕುರುಡ ಅಂತ ತಿಳಿದ ದಿನವೇ ಒಂದು ಅರಿವೆ ಬಿಳಲಿನಲ್ಲಿ ತನ್ನ ಎರಡು ಕಣ್ಣುಗಳನ್ನೂ ಕಟ್ಟಿಕೊಂಡಳಂತೆ. ಮತ್ತೆ ಈ ಪ್ರಪಂಚದ ಯಾವ ವಸ್ತುವನ್ನೂ ಕಣ್ಣು ಬಿಟ್ಟು ನೋಡಲಿಲ್ಲ. ಹಾಗೆಯೇ ಅಣ್ಣನ ಜೊತೆ ರಥದಲ್ಲಿ ಕೂತು ಹೊರಟಳಂತೆ. ಹಸ್ತಿನಾವತಿಯಲ್ಲಿ ವಿವಾಹ ವೇದಿಕೆಯಲ್ಲಿ ಕೂಡ ಹಾಗೆಯೇ ನಿಂತಿದ್ದಳು, ಕಣ್ಣುಕಟ್ಟಿಕೊಂಡು. ಸಪ್ತಪದಿಯನ್ನೂ ಹಾಗೆಯೇ ಇಟ್ಟಳು ಕುರುಡಿಯಂತೆ. ಗಂಡನೇನೋ ಹುಟ್ಟು ಕುರುಡ. ಆದರೆ ಈಕೆ ಯಾಕೆ ಹೀಗೆ ಮಾಡಬೇಕು? ಹಸ್ತಿನಾವತಿಯ ಪ್ರಜೆಗಳೆಲ್ಲ, ಮಹಾಸಾಧ್ವಿ ಮಹಾಪತಿಭಕ್ತೆ ಅಂತ ಅವಳ ಕಾಲಿಗೆ ಬೀಳುತ್ತಾರೆ ಗುಣಗಾನ ಮಾಡುತ್ತಾರೆ.'

'ಅಣ್ಣನ ಪುಣ್ಯ ದೊಡ್ಡದು'–ಪಾಂಡು ಅಂದ.

ಮೈಕಟ್ಟಿನಲ್ಲಿ ಅಣ್ಣ ತಮ್ಮ ಇಬ್ಬರೂ ಒಂದೇ. ಆದರೆ ಕಣ್ಣೇ ಇಲ್ಲದವನು ಏನನ್ನು ತಾನೆ ಸಾಧಿಸಬಲ್ಲ? ಗುರಿಯಿಟ್ಟು ಬಾಣ ಹೊಡೆಯದ ಮೇಲೆ ಕ್ಷತ್ರಿಯ ಹೇಗಾದಾನು? ಅಂಥವನಿಗೆ ಹೀಗೆ ಭಕ್ತಿಯಿಟ್ಟ ಹೆಂಡತಿ. ಕುಂತಿಗಿಂತ ಗಾಂಧಾರಿ ಹಸ್ತಿನಾವತಿಯಲ್ಲಿ ಪೂಜ್ಯ ಸ್ಥಾನಗಳಿಸಿದ್ದಾಳೆ. ಗಂಡ ಕುರುಡೆಂದು ತಾನೂ ಕಣ್ಣಿಗೆ ಪಟ್ಟಿ ಕಟ್ಟಿಕೊಂಡು ಪಟ್ಟಣದ ಜನಗಳ ಮಧ್ಯದಲ್ಲಿಯೇ ಇರುವ ಅವಳು ಮಹಾಸಾಧ್ವಿ ಎನಿಸಿಕೊಳ್ಳುವುದು ನಿಜಕ್ಕೂ ಕುಂತಿಗೆ ಮತ್ಸರ ತರಿಸಿತು.

'ಅಮ್ಮ, ನೀನು ತುಂಬ ಸುಂದರಿಯಂತೆ. ನನ್ನ ಮಕ್ಕಳ ಕಣ್ಣು ಕೆಟ್ಟದ್ದು. ನೀನು ಬೇಗ ನಿನ್ನ ಗಂಡಂದಿರೊಡನೆ ಖಾಂಡವಪ್ರಸ್ಥಕ್ಕೆ ಹೋಗಿಬಿಡು'–ಎಂದು ಕಳಿಸಿದ್ದಳಲ್ಲ, ಹತ್ತು ಹನ್ನೊಂದು ವರ್ಷದ ಹಿಂದೆ. ಈಗ ಅಂಥ ಮಾತನಾಡಲಿಲ್ಲ. ಅವರಿಗೆಲ್ಲ ಗೊತ್ತಿತ್ತೆ ಇನ್ನು ನಾಲ್ಕು ದಿನದಲ್ಲಿ ಜೂಜಿನಲ್ಲಿ ಈ ಪಾಂಚಾಲಿಯ ಒಡವೆ ವಸ್ತ್ರವೆಲ್ಲ ತಮ್ಮದೇ ಆಗುತ್ತದೆ ಅಂತ? ಮುದುಕಿಗೆ ಗೊತ್ತಿತ್ತೊ, ಇಲ್ಲವೊ. ದ್ಯೂತದಲ್ಲಿ ನಮ್ಮವರು ಸೋತು ದುಶ್ಶಾಸನ ನನ್ನ ಮೈ ಮುಟ್ಟಿದಾಗ ಕೆರಳಿ ಪ್ರತಿಜ್ಞೆ ಮಾಡಿದ ಭೀಮನ ಗಂಟಲು ಸಭೆಯಿಂದ ಆಚೆ, ಒಳಗೆ ಹೆಂಗಸರ ಕಿವಿಗೂ ಬಿದ್ದು ದುಶ್ಶಾಸನನ ಹೆತ್ತವ್ವ ಹೆದರಿ ಓಡಿ ಬಂದಳಲ್ಲ ಸಭೆಗೆ. ಕಣ್ಣಿದ್ದೂ ಕುರುಡಿಯಾಗಿ ಬಟ್ಟೆ ಕಟ್ಟಿಕೊಂಡು ದಾಸಿಯ ಕೈ ಹಿಡಿದು ಬಂದು, ಕಣ್ಣಿಲ್ಲದೆ ಕುರುಡನಾದ ಗಂಡನ ಕೈ ಹಿಡಿದು ಒಳಗೆ ಕರೆದೊಯ್ದಳು. ಆದರೂ ಅವಳು ಗಂಡನಿಗೆ ಕಣ್ಣು ಕಾಣದಿರುವಾಗ ತಾನೇಕೆ ಚಾಕ್ಷುಷ ಸುಖ ಪಡಬೇಕೆಂದು ಎರಡು ಕಣ್ಣುಗಳಿಗೂ ಪಟ್ಟಿ ಕಟ್ಟಿಕೊಂಡ ಸಾಧ್ವಿ' ಎಂದು ವನವಾಸ ಅಜ್ಞಾತವಾಸಗಳನ್ನು ಮುಗಿಸಿ ಉಪಪ್ಲಾವ್ಯ ನಗರದಲ್ಲಿದ್ದಾಗ ಒಂದು ರಾತ್ರಿ ದ್ರೌಪದಿ ಯೋಚಿಸುತ್ತಿದ್ದಳು.

'ಧೃತರಾಷ್ಟ್ರನನ್ನು ಭೀಮ ಎಂದೂ ತಂದೆ ಎಂದವನಲ್ಲ, ದೊಡ್ಡಪ್ಪ ಎಂದವನಲ್ಲ. ಕುರುಡ ಎಂದೇ ಹೆಸರಿಟ್ಟಿದ್ದಾನೆ. ಮಾತೆ ಗಾಂಧಾರಿಯನ್ನು ಕುರುಡಿ ಎನ್ನುತ್ತಾನೆ. ತನ್ನ ಮಕ್ಕಳನ್ನು ವಹಿಸಿಕೊಳ್ಳದ ತಾಯಿ ಯಾರು? ಗಂಡ ಕುರುಡಾಗಿ ದೃಶ್ಯಪ್ರಪಂಚದಿಂದ ವಂಚಿತನಾಗಿರುವಾಗ ತಾನು ಕಣ್ಣಿನ ಪ್ರಯೋಜನ ಹೊಂದಿ ಸುಖವಾಗಿ ಓಡಿಯಾಡಿ ಹಿತವಾದ ನೋಟಗಳನ್ನು ನೋಡಿದರೆ ಧರ್ಮ ಮೆಚ್ಚುವುದಿಲ್ಲವೆಂದು. ಸ್ವಪ್ರೇರಣೆಯಿಂದಲೇ ತನ್ನ ಎರಡು ಕಣ್ಣುಗಳಿಗೂ ಬಟ್ಟೆ ಕಟ್ಟಿಕೊಂಡು ಅಂಧತ್ವವನ್ನು ಸ್ವೀಕರಿಸಿರುವ ಆ ದೇವಿಯನ್ನು ಮಾತೆ ಎನ್ನದೆ ಕುರುಡಿ ಎನ್ನುವ ಭೀಮನಿಗೆ ಧರ್ಮದ ಅರಿವುಂಟೆ? ಕುರುವಂಶಾವಳಿಯನ್ನು ಬೆಳಗುವ ಸಾಧ್ವಿಯಲ್ಲವೆ ಅವಳು? ಅವಳನ್ನು ಮಾತೆ ಗಾಂಧಾರಿ ಎಂದರೆ ತಕ್ಷಣ ಕುಹಕ ಮಾಡುತ್ತಾನೆ. ಮೃದುವಾಗಿ ಮುಗುಳ್ನಗುತ್ತಾ ಆ ಕುಹಕಕ್ಕೆ ವ್ಯಂಜನ ಸೇರಿಸುತ್ತಾಳೆ, ಪಾಂಚಾಲಿ. ಒಂದೇ ಕೀಳು ಮಟ್ಟದ ಈ ಇಬ್ಬರು ಧರ್ಮಲಂಘರಿಗೂ ನರಕ ಕಾದಿರುತ್ತದೆ, ರೌರವ ನರಕ'–ಅರ್ಜುನ ಯೋಚಿಸುತ್ತಾನೆ.

ಬಲರಾಮನನ್ನು ತನ್ನೆಡೆಗೆ ಯುದ್ಧಕ್ಕೆ ಕರೆಯಲು ಬಂದಾಗ ದುರ್ಯೋಧನ ಯುಯುಧಾನ ಸಾತ್ಯಕಿ ಹಾಗೂ ಅವನ ತಂದೆ ಸತ್ಯಕರಿಗೆ ತನ್ನ ಬಗ್ಗೆ ಹೇಳಿಕೊಳ್ಳುವಾಗ ತನ್ನ ತಂದೆ ತಾಯಿ ಎಂಥವರೆಂದು ಹೇಳುತ್ತಾನೆ; 'ನನ್ನ ತಂದೆ ಹುಟ್ಟು ಕುರುಡ; ಗಂಡ ಕುರುಡನಾಗಿರುವಾಗ ತಾನು ಪ್ರಪಂಚದ ವಸ್ತುಗಳನ್ನು ನೋಡುವ ಚಾಕ್ಷುಷ ಸುಖ ಬೇಡವೆಂದು ನನ್ನ ತಾಯಿ ತನ್ನ ಕಣ್ಣಿಗೂ ಬಟ್ಟೆ ಕಟ್ಟಿಕೊಂಡು ಅಂದಿನಿಂದ ಇಂದಿನವರೆಗೂ ಕುರುಡಿಯೇ ಆಗಿದ್ದಾಳೆ, ಸ್ವಯಂಪ್ರೇರಣೆಯಿಂದ; ಸಂಯಮದಿಂದ. ಕುರುನಾಡಿನಲ್ಲಿ ಮಾತ್ರವಲ್ಲ, ಇಡೀ ಆರ್ಯ ಜಗತ್ತಿನಲ್ಲಿ ಎಲ್ಲರೂ ನಮ್ಮ ತಾಯಿಯನ್ನು ದೇವಿ ಎನ್ನುತ್ತಾರೆ. ಪತಿವ್ರತಾ ಧರ್ಮದ ಅಸೀಮ ಮೂರ್ತಿಯಾದ ದೇವಿಯಾಗಿದ್ದಾಳೆ ಅವಳು. ಇಂಥ ತಾಯಿ ತಂದೆಯರ ಮಕ್ಕಳು ನಾವು ಹದಿನಾಲ್ಕು ಮಂದಿ.' ಆಗ ಯುಯುಧಾನ ಹಿಂದಿನದನ್ನು ಜ್ಞಾಪಿಸಿಕೊಂಡ. ಹದಿನಾಲ್ಕು ವರ್ಷವಾಯಿತಲ್ಲವೇ

ಪಾಂಡವರು ರಾಜಸೂಯ ಮಾಡಿ. ತಾನೂ ಹೋಗಿದ್ದೆನಲ್ಲ, ಅಲ್ಲಿ ಎಷ್ಟು ಜನ ಮಾತನಾಡಿ ಕೊಳ್ಳುತ್ತಿದ್ದರು, ಗಾಂಧಾರಿಯ ವಿಷಯವನ್ನು. ಆರ್ಯ ಸ್ತ್ರೀಧರ್ಮದ ಸಾಕಾರ ಮೂರ್ತಿ ಯಂತೆ. ಗಂಡನಿಗೆ ಇಲ್ಲದ ದೃಷ್ಟಿಭಾಗ್ಯ ತನಗೇಕೆಂಬ ಅಸೀಮ ವೈರಾಗ್ಯ. ತಾನು ಹೋಗಿ ಅವಳ ದರ್ಶನ ಪಡೆಯಲಿಲ್ಲ. ರಾಜ ಸೂಯಕ್ಕೆ ಧೃತರಾಷ್ಟ್ರ ಬರಲಿಲ್ಲ. ಹುಟ್ಟಿದಾಗಿ ನಿಂದ ಹುಟ್ಟಿದ ಊರಿನ ಗಡಿ ದಾಟಿ ಹೊರಗೆ ಹೋದವನೇ ಅಲ್ಲವಂತೆ ಅವನು. ಬಂದಿದ್ದರೂ ಕಣ್ಣು ಕಾಣದ ತಾನು ನೋಡುವುದೇನು? ಇನ್ನೊಬ್ಬರು ಹೇಳುವ ವರ್ಣನೆ. ಅದನ್ನು ಊರಿ ನಲ್ಲಿದ್ದೇ ಅನಂತರ ಕೇಳುತ್ತೇನೆ, ಅಂದನಂತೆ. ಇನ್ನು ಆ ಪತಿವ್ರತಾ ದೇವಿ ಹೇಗೆ ಬಂದಾಳು? ಎಂದಾದರೊಂದು ದಿನ ಅವಳನ್ನು ಕಣ್ಣಾರೆ ನೋಡಬೇಕೆಂಬ ಆಶೆ ಹುಟ್ಟಿತು.

'ನನ್ನ ಹೆತ್ತ ತಾಯಿ ಎಂಥವಳಿರಬಹುದೆಂದು ಮನಸ್ಸಿನಲ್ಲೇ ಕೋಪಗೊಂಡಿದ್ದೆ. ಆದರೆ ಅದರ ಅಗತ್ಯವೇ ಇಲ್ಲದಷ್ಟು ನನಗೆ ಪ್ರೀತಿಯನ್ನು ತುಂಬಿಕೊಟ್ಟಳು ನನ್ನ ತಾಯಿ. ಅವಳು ಸತ್ತ ನಂತರ ನನಗೆ ತಾಯಿ ಇಲ್ಲವಲ್ಲ ಎಂಬ ಕೊರ ಗನ್ನು ನನ್ನ ಸ್ನೇಹಿತನ ತಾಯಿ ಗಾಂಧಾರಿ ತುಂಬಿದಳು. ಇಷ್ಟು ವಯಸ್ಸಾಗಿಯೂ ನನಗೆ ತಾಯಿಯ ಅಗತ್ಯ ತಪ್ಪಿಲ್ಲ. ನನ್ನಮ್ಮ ರಾಧೆ ಬದುಕಿರುವಾಗಲೂ ಗಾಂಧಾರಿಯ ಪ್ರೀತಿ ಇದ್ದೇ ಇತ್ತು. ಆದರೆ ನಾನು ಆಗ ಅವಳನ್ನು ಅಷ್ಟು ಅವಲಂಬಿಸಿರಲಿಲ್ಲ. ಹಸ್ತಿನಾಪತಿಯಲ್ಲಿ ಮಾತ್ರವಲ್ಲ, ಯಾವ ದೇಶದಲ್ಲಿಯೂ ಗಾಂಧಾ ರಿಯಂತಹ ಮಹಾತಾಯಿ ಇದ್ದಾಳೆಂದು ನಾನು ಕೇಳಿಲ್ಲ. ಗಂಡನಿಗೆ ಕುರುಡೆಂದು ತಿಳಿದ ತಕ್ಷಣ ಅವನಿಗಿಲ್ಲದ ದೃಷ್ಟಿಭಾಗ್ಯ ತನಗೂ ಬೇಡ ವೆಂದು ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಇಂದಿಗೂ ಕುರುಡಿಯಾಗಿದ್ದಾಳೆ. ಗಂಡನಿಗಾಗಿ ಅಷ್ಟೊಂದು ತ್ಯಾಗ ಮಾಡುವ ಹೆಂಗಸಿನಲ್ಲೇ ಮಾತೃತ್ವದ ಪೂರ್ಣಪಾಕವು ಸಿದ್ಧಿಸುತ್ತದೇನೋ! ನಾನು ಯಾವಾಗ ಅವಳನ್ನು ಸಮೀಪಿಸಿ, ತಾಯಿ; ನಿನ್ನ ಕಾಲು ಮುಟ್ಟಿರುವವನು ನಾನು ಕರ್ಣ ಎಂದರೂ ಅದೆಷ್ಟು ಅಕ್ಕರೆಯಿಂದ ನನ್ನ ತಲೆ ಯನ್ನು ತನ್ನೆರಡು ಹಸ್ತಗಳಿಂದಲೂ ಬೆಚ್ಚಗೆ ಹಿಡಿದು ದೀರ್ಘಾಯುವಾಗು ಮಗು ಎಂದು ಆಶೀರ್ವದಿಸಿದ್ದಾಳೆ. ಅರ್ಜುನನ ಮೇಲೆ ಬಿಲ್ಲು ವಿದ್ಯೆಯ ಸ್ಪರ್ಧೆಗೆ ನಿಂತು ಸೂತನೆಂಬ ಕಾರಣ ದಿಂದ ನಾನು ಸ್ಪರ್ಧೆಗೆ ಅರ್ಹನಲ್ಲವೆಂದು ಧಿಕ್ಕ ರಿಸಿ, ದುರ್ಯೋಧನನು ನನ್ನ ಕೈಹಿಡಿದು ಎಷ್ಟು ವರ್ಷವಾಯಿತು, ಮೂವತ್ತಾರು ವರ್ಷ, ಆಗ ನನಗೆ ಇಪ್ಪತ್ತೊಂಬತ್ತು, ಆಗಿನಿಂದ ತನ್ನ ಅಂತಃಕರಣವನ್ನು ತನ್ನ ಮಕ್ಕಳೊಡನೆ ನನಗೂ ಅಷ್ಟಿಷ್ಟು ಹಂಚಿದ್ದಾಳೆ. ಕರ್ಣನು ತನ್ನ ಮಕ್ಕಳ ಪರವಾಗಿಯೇ ನಿಲ್ಲಬೇಕೆಂದು ಅವಳು ಬಯಸು ವುದಿಲ್ಲವೇ?' ಕೃಷ್ಣನ ಮಾತಿನಂತೆ ಸೂಚಿತ ಘಟ್ಟಕ್ಕೆ ಬಂದು ಕುಂತಿ ಕರ್ಣನ ಮನವೊಲಿಸಿ ಯುದ್ಧ ತಪ್ಪಿಸುವ ಪ್ರಯತ್ನ ಮಾಡುವಾಗ ಕರ್ಣ ಕುಂತಿಗೆ ಹೇಳುತ್ತಾನೆ.

'ಎರಡೂ ಪಕ್ಷಗಳು ಯುದ್ಧಸನ್ನದ್ಧ ವಾಗಿವೆ. ಇನ್ನೇನು ಇಂದು ಯುದ್ಧ ಪ್ರಾರಂಭ ವಾಗುತ್ತದೆನ್ನುವಾಗ ಇದ್ದಕ್ಕಿದ್ದಂತೆ ಬೆಳಿಗ್ಗೆ ಎದ್ದವನೇ ಅರ್ಜುನ ನಾನಂತೂ ಯುದ್ಧ ಮಾಡುವುದಿಲ್ಲ. ಯುದ್ಧ ಬೇಡ ಎಂದು ಹಟ ಹಿಡಿದನಂತೆ. ಧರ್ಮರಾಜನಿಗೂ ಅರ್ಜುನ ಕೊಟ್ಟ ಕಾರಣ ಸರಿ ಎನಿಸಿತು. ನಕುಲ-ಸಹ ದೇವರು ತಮಗೆ ಒಪ್ಪಿಗೆ ಇಲ್ಲದಿದ್ದರೂ ಅಣ್ಣಂದಿರಿಗೆ ಅವಿಧೇಯರಾಗಿರಲಿಲ್ಲ. ಭೀಮ ಆಗ ಅಲ್ಲಿರಲಿಲ್ಲ. ಭೀಮ ವಿಷಯ ತಿಳಿದು ಅಲ್ಲಿಗೆ ಬಂದಾಗ ಅರ್ಜುನ ಭೀಮರಿಗೆ ಕಾದಾಟ ಪ್ರಾರಂಭವಾಗುವುದರಲ್ಲಿತ್ತು. ಅಷ್ಟರಲ್ಲಿ ಧೃಷ್ಟ ದ್ಯುಮ್ನ ದ್ರೌಪದಿ ಅಲ್ಲಿಗೆ ಬಂದರು. ದ್ರೌಪದಿ ಯೂ ಅರ್ಜುನನ್ನು 'ಹೇಡಿ ಧರ್ಮ ನಿನ್ನದು' ಎಂದು ಛೇಡಿಸಿದಳು. ಅರ್ಜುನನೂ ಅವಳ ಮೇಲೆ ರೇಗಿದ. ಆಗ ಕೃಷ್ಣ, ನೀವು ಯಾರೂ ಮಾತನಾಡಬೇಡಿ ಅರ್ಜುನನಿಗೆ ನಾನು ಸಮಾ ಧಾನ ಹೇಳುತ್ತೀನಿ ಅಂತ ಅವನೊಬ್ಬನನ್ನೇ ಕೈ ಹಿಡಿದು ತನ್ನ ಡೇರೆಗೆ ಕರೆದೊಯ್ದನಂತೆ.

ಇದೀ ದಿನ ಅಂದರೆ ಮಧ್ಯಾಹ್ನ. ಸಂಜೆ ರಾತ್ರಿ ಎಲ್ಲ ಹೇಳಿ ಉಪದೇಶ ಮಾಡಿ ನೆನ್ನೆ ಬೆಳಗ್ಗೆಯ ಹೊತ್ತಿಗೆ ಅರ್ಜುನನ ಮನಸ್ಸನ್ನು ಹೊರಳಿಸಿನಂತೆ ಮಾಡಿದನಂತೆ' –ಸಂಜಯ ಎಂದು ಯುದ್ಧದ ಪ್ರಥಮ ವರದಿಯನ್ನು ಹೇಳುತ್ತಿದ್ದಾಗ ಧೃತರಾಷ್ಟ್ರ 'ಕೃಷ್ಣ ಅಂದರೆ ತಂತ್ರಗಾರ ಸೂಳೆಮಗ ಅಲ್ಲವೆ? ಎಲಾ ತಂತ್ರಗಾರನೇ!' ಎಂದು ಆಗಾಗ ಉದ್ಗರಿಸುತ್ತ ಮುಖದಲ್ಲಿ ನಿರಾಶೆ ತುಂಬಿಕೊಂಡು 'ದೇವಿ, ಏನಂತೀಯ ನೀನು?'–ಎಂದು ಹೆಂಡತಿಯನ್ನು ಕೇಳಿದಾಗ ಅವಳು ತಕ್ಷಣ ಯಾವ ಖಚಿತ ಅಭಿಪ್ರಾಯಕ್ಕೂ ಬರಲಾರದೆ ತೂಗುತ್ತಿದ್ದಳು. ತನ್ನ ಎರಡು ಕಾಲುಗಳನ್ನು ಒತ್ತಿ ನಮಸ್ಕರಿಸುತ್ತಿದ್ದನಲ್ಲವೇ ಕೃಷ್ಣ ಇಲ್ಲಿಗೆ ಬಂದಿದ್ದಾಗ ಎಂಬ ನೆನಪು.

'ಅರ್ಜುನನಿಗೆ ಇನ್ನೂ ಹೇಳಿದನಂತೆ ಕೃಷ್ಣ'– ಸಂಜಯ ವರದಿಯನ್ನು ಮುಂದುವರಿಸಿದ: 'ನೀನು ಯುದ್ಧ ಮಾಡದಿದ್ದರೆ ಅಧರ್ಮವಾಗುತ್ತದೆ. ಅಷ್ಟೇ ಅಲ್ಲ. ಪ್ರಪಂಚವೆಲ್ಲ ನಿನ್ನನ್ನು ಹೇಡಿ ಅನ್ನುತ್ತದೆ. ನೀನು ನಿವೃತ್ತನಾದರೂ ಭೀಮ ಯುದ್ಧ ಮಾಡುತ್ತಾನೆ. ಧೃಷ್ಟದ್ಯುಮ್ನ ಮಾಡಿಯೇ ಮಾಡುತ್ತಾನೆ. ನಕುಲ–ಸಹದೇವರಿದ್ದಾರೆ. ಧರ್ಮರಾಜನೂ ಕೈಲಾದಷ್ಟು ಹೋರಾಡುತ್ತಾನೆ. ನಾನಿದ್ದೀನಿ, ಯುಯುಧಾನ ಇದ್ದಾನೆ. ಅಭಿಮನ್ಯು, ಘಟೋತ್ಕಚ, ನಿಮ್ಮ ಐವರು ಮಕ್ಕಳೆಲ್ಲ ಇದ್ದಾರೆ. ಬೇಕಾದರೆ ನೀನು ಧರ್ಮದ ವ್ಯಾಖ್ಯೆಯನ್ನು ತಿರುಗು ಮುರುಗಾಗಿ ಮಾಡಿಕೊಳ್ಳುತ್ತಾ ವಿಶ್ರಮಿಸಿಕೊ ಹೋಗು– ಕೃಷ್ಣನ ಮಾತಿನಿಂದ ಅರ್ಜುನನ ಮನಸ್ಸು ಕ್ರಮೇಣ ತಿರುಗಿತಂತೆ.'

'ಹೌದು, ಅವನು ಅಷ್ಟು ಚೆನ್ನಾಗಿ ಮಾತನಾಡುತ್ತಾನೆ'–ಎಂಬ ಗಾಂಧಾರಿಯ ಮಾತಿನ ಧ್ವನಿಯಿಂದ ಧೃತರಾಷ್ಟ್ರ ಕಸಿವಿಸಿಗೊಂಡ. ಅಸಮ್ಮತಿಯಿಂದ ಹೆಂಡತಿಯ ಕಡೆಗೆ ತಿರುಗಿ ನೋಡಿದ. ಬಿಳಿ ಪಟ್ಟಿಯಿಂದ ಕಣ್ಣು ಕಟ್ಟಿಕೊಂಡ ಅವಳು ಮುಖವನ್ನು ಎದುರುಗೋಡೆಯ ಕಡೆಗೆ ತಿರುಗಿಸಿಕೊಂಡಿದ್ದುದು ಅವನಿಗೆ ತಿಳಿಯಲಿಲ್ಲ. ಒಳಗೆಲ್ಲ ಮೌನ. ಹೊರಗಿನ ಗದ್ದಲದಿಂದ ಯುದ್ಧರಂಗಕ್ಕೆ ಇನ್ನೂ ಸಾಮಾನು ಸರಂಜಾಮುಗಳು ಹೋಗುತ್ತಿವೆ ಎಂದು ಧೃತರಾಷ್ಟ್ರ ಅರ್ಥಮಾಡಿಕೊಳ್ಳುತ್ತಿರುವಾಗ ಗಾಂಧಾರಿಗೆ ಕೃಷ್ಣನ ಮಾತು ಮೋಸದ್ದೆನಿಸಿತು. ನನ್ನನ್ನೂ ಕುಂತಿಯನ್ನೂ ಒಂದೇ ತಕ್ಕಡಿಯಲ್ಲಿಟ್ಟು ಒಂದೇ ತೂಕದವರೆಂದು ಸಾಧಿಸುತ್ತಿದ್ದಾನೆ ತಂತ್ರಗಾರ ಎಂಬ ಅರ್ಥ ಹೊಳೆದಾಗ ತನಗಿಂತ ತನ್ನ ಗಂಡ ಬುದ್ಧಿವಂತನೆಂದು ಇನ್ನೊಮ್ಮೆ ಮನದಟ್ಟಾಯಿತು. ತನ್ನ ಮಗ ದುರ್ಯೋಧನನಂತೂ ತನ್ನ ವಿಶೇಷ ಪಾವಿತ್ರ್ಯವನ್ನು ಪ್ರಪಂಚಕ್ಕೆ ಸಾಧಿಸಿ ತೋರಿಸಲು ಯುದ್ಧ ಹೂಡಿರುವಂತೆ ತೋಚಿತು ಒಂದು ಕ್ಷಣ.

ಕೌರವ ಪಾಂಡವರಿಗೆ ಯುದ್ಧ ಪ್ರಾರಂಭವಾಗಿದೆ. ಸಂಜಯ ರಣರಂಗದ ವಾರ್ತೆಯನ್ನು ತಂದು ಧೃತರಾಷ್ಟ್ರ ಗಾಂಧಾರಿ ವಿದುರರಿಗೆ ಹೇಳುತ್ತಿದ್ದಾನೆ. ಧೃತರಾಷ್ಟ್ರ ಗಾಂಧಾರಿಯ ಕಡೆ ತಿರುಗಿ, 'ದೇವಿ, ಕೇಳುತ್ತಿರುವೆಯ?' ಎಂದ. ಸಂಜಯನ ಧ್ವನಿ ಬರುತ್ತಿದ್ದ ಕಡೆಗೇ ನಟ್ಟಿದ್ದ ಅವಳ ಮುಖದಲ್ಲಿ ಹರ್ಷ ಉತ್ಸಾಹ ವಿಷಾದ ಮೊದಲಾಗಿ ಗುರುತಿಸಲು ಕಷ್ಟವಾಗುವಂತಹ ಹಲವು ಭಾವಗಳು ಬೆರೆತಿದ್ದವು.

'ಸಂಜಯ, ಪ್ರತಿದಿನವೂ ನೀನು ಹೀಗೆಯೇ ನಮಗೆ ಸಂತಸದ ಸುದ್ದಿಯನ್ನು ತಂದು ಹೇಳಬೇಕು.'

'ಮಹಾರಾಜ, ಪ್ರತಿದಿನವೂ ನಿಮ್ಮಿಂದ ಬಹುಮಾನ ಪಡೆಯುವ ಪುಣ್ಯ ನನ್ನದಾಗಲಿ. ಆದರೆ ಇಲ್ಲಿಂದ ಹೋಗಿ ಸುದ್ದಿ ಸಂಗ್ರಹಣೆ ಮಾಡಿ ಅದೇ ದಿನ ಹಿಂತಿರುಗುವುದು ಸಾಧ್ಯವಿಲ್ಲ. ಬೇಹುಗಾರರು ಸುದ್ದಿಗಾಗಿ ಎಲ್ಲೆಲ್ಲೋ ಹೋಗಿರುತ್ತಾರೆ. ತಿಳಿಸುವಂತಹ ತಿಳಿವಸುವಷ್ಟು ಸುದ್ದಿ ಬಂದ ತಕ್ಷಣ ನೀನು ಕೊಟ್ಟ ಕುದುರೆಯನ್ನೇ ಏರಿ ಓಡಿಸಿಕೊಂಡು ಬರುತ್ತೇನೆ. ದೇವಿಯ ಕೃಪೆಯೂ ನನ್ನ ಮೇಲಿರಲಿ. ನನ್ನ ಹೆಂಡತಿಯಾದರೋ ಆಭರಣಗಳನ್ನು ಕಾಣದ ಬಡವೆ.'

'ಅವನಿಗೆ ಏನಾದರೂ ಕೊಡು' ಧೃತರಾಷ್ಟ್ರ ಶಿಫಾರಸು ಹೇಳಿದ. ಗಾಂಧಾರಿ ತನ್ನ ಎಡಗೈಯಿಂದ [illegible]

ತೆಗೆದು ಅವನ ಕಡೆಗೆ ನೀಡಿದಳು. ಅದನ್ನು ಸ್ವೀಕರಿಸಿದ ನಂತರ ಅಷ್ಟು ಹೊತ್ತೂ ನಿಂತೇ ಮಾತನಾಡುತ್ತಿದ್ದ ಅವನು, 'ನಾನಿನ್ನು ಮನೆಗೆ ಹೋಗುತ್ತೇನೆ. ಮೂರು ದಿನದಿಂದ ನಿದ್ರೆಯಿಲ್ಲ. ಬೆಳಗಿನಿಂದ ಊಟವೂ ಇಲ್ಲ'. ಎಂದು ಹೊರಟ.

ಅವನ ಹೆಜ್ಜೆಯ ಸಪ್ಪಳ ದೂರವಾಗಿ ಕೇಳಿಸದಂತೆ ಕೋಣೆಯ, ಅರಮನೆಯ ಹೊರಗೆ ಸಾಗಿದ ನಂತರ ಧೃತರಾಷ್ಟ್ರ ಎಂದ: 'ವಿದುರ ನಿನ್ನ ಮೌನವು ಅಸಮ್ಮತಿಸೂಚಕ. ಅಸಂತೋಷ ಸೂಚಕವೆಂದು ನನಗೆ ಅರ್ಥವಾಗುವುದಿಲ್ಲ ಅಂತ ತಿಳಿದೆಯಾ? ಸಂಜಯ ಅಂತಹ ಹರ್ಷದ ವರದಿ ಹೇಳುತ್ತಿರುವಾಗ ನೀನು ತುಟಿ ಪಿಟಕ್ ಅನ್ನಬೇಕಲ್ಲ! ಕಣ್ಣೀರು ಹಾಕುತ್ತಾ ಕೂತಿದ್ದೆ ಏನು?'

'ಮನೆಗೆ ಹೋಗಿ ಆ ಕುಂತಿಗೆ ಹೇಳುವಾಗ ಬಿಕ್ಕಿ ಬಿಕ್ಕಿ ಅಳುತ್ತಾನೆ'–ಗಾಂಧಾರಿ ಸೇರಿಸಿದಳು.

'ಸಂತೋಷವನ್ನು ಹಂಚಿಕೊಳ್ಳುವ ಹೃದಯವಿಲ್ಲದ ಮೇಲೆ ನಾಳೆಯಿಂದ ನೀನು ಇಲ್ಲಿಗೆ ಬರಬೇಡ'– ಧೃತರಾಷ್ಟ್ರ ಅಪ್ಪಣೆ ಮಾಡಿದ.

ನದಿಯ ಕಡೆಯ ಜಗುಲಿಯ ಮೇಲಿನ ಕೋಣೆಯಲ್ಲಿ ಮಲಗಿದ ವಿದುರನಿಗೆ ಗದ್ದಲವಿಲ್ಲದೆ ಹರಿಯುವ ನೀರಿನ ಸುಂಯ್‌ಕಾರ

ಒಂದೇ ಸಮನೆ ಕೇಳುತ್ತಿತ್ತು. ಧೃತರಾಷ್ಟ್ರನ ಕಟು ನುಡಿ ನೆನಪಿಗೆ ಬಂತು. ಸಂತೋಷವನ್ನು ಹಂಚಿಕೊಳ್ಳುವ ಹೃದಯವಿಲ್ಲದ ಮೇಲೆ ನಾಳೆಯಿಂದ ಇಲ್ಲಿಗೆ ಬರಬೇಡ. ಇದೇನೂ ಅಂತಹ ಹೊಸಚು ಮಾತಲ್ಲ. ಹಿಂದೆ ಇದಕ್ಕಿಂತ ಹೆಚ್ಚು ಹೊಸಚಾದ ಅದೆಷ್ಟೋ ನೂರೋ ಸಾವಿರವೋ ಮಾತು ಅಂದಿಲ್ಲ ಅವನು, ನನ್ನನ್ನು ಪಾಂಡವ ಪಕ್ಷಪಾತಿ ಎಂದು ನಿರ್ಣಯಿಸಿ ಹಾಕಿದ್ದಾನೆ, ನ್ಯಾಯಪಕ್ಷಪಾತಿ ಎಂದು ಒಪ್ಪುವುದೇ ಇಲ್ಲ ಎಂದುಕೊಳ್ಳುವಾಗ ಮನೆಗೆ ಹೋಗಿ ಆ ಕುಂತಿಗೆ ಹೇಳುವಾಗ, ಬಿಕ್ಕಿ ಬಿಕ್ಕಿ ಅಳುತ್ತಾನೆ– ಎಂಬ ಗಾಂಧಾರಿಯ ಮಾತು ನೆನಪಿಗೆ ಬಂತು. ದೇವಿಯಂತಹ ಮಹಾತ್ಯಾಗ ಮಾಡಿರುವ ಮಹಾಪತಿವ್ರತೆಗೆ ಏಕೆ ಸಾಧಾರಣ ಹೆಂಗಸಿಗೆ ಸಹಜವಾದ ಮತ್ಸರ ?– ಎಂದು ತನ್ನಲ್ಲಿಯೇ ವಿಷಾದ ಪಟ್ಟುಕೊಂಡ. ತಾನು ದೇವಿ ಗಾಂಧಾರಿ ಮತ್ತು ಕುಂತಿಯನ್ನು ಭಾವಿಸುವ ರೀತಿಗಳನ್ನು ಮನಸ್ಸಿನಲ್ಲೇ ತೂಗಿಕೊಂಡ. ಕುಂತಿಯೊಡನೆ ಸಹಜ ಸ್ನೇಹವಿದೆ. ಏನನ್ನಾದರೂ ಬಿಚ್ಚಿ ಮಾತನಾಡುವ ಅಂತಃಕರಣವಿದೆ. ಮನಃಕ್ಷೋಭವುಂಟಾದಾಗ ಅವಳೊಡನೆ ಹಂಚಿಕೊಂಡರೆ ಒಂದು ತೆರನಾದ ಕ್ಷೇಮಭಾವವುಂಟಾಗುತ್ತದೆ. ಆದರೆ ಗಾಂಧಾರಿ ನಿಜವಾಗಿಯೂ ದೇವಿ. ತನ್ನ ಗಂಡ ಕುರುಡನಾಗಿರುವಾಗ ತಾನೇಕೆ ದೃಷ್ಟಿಭಾಗ್ಯವನ್ನು ಸವಿಯಬೇಕೆಂಬ ತ್ಯಾಗಬುದ್ಧಿಯಿಂದ ತವರು ಮನೆಯಿಂದಲೇ ತನ್ನ ಕಣ್ಣುಗಳಿಗೆ ಬಟ್ಟೆ ಕಟ್ಟಿಕೊಂಡು ಬಂದು ತಾನು ಕಂಡಂತೆ ಅರವತ್ತು ವರ್ಷದಿಂದ ಸಂಸಾರ ಮಾಡುತ್ತಿರುವ ಮಹಾಸತಿ. ಅವಳಿಗೂ ತನಗೂ ಸ್ನೇಹ ಸಾಧ್ಯವಿಲ್ಲ. ಕುಂತಿಯೊಡನಿರುವಂತಹ ಅಂತಃಕರಣವಿಲ್ಲ. ಆದರೂ ಅವಳು ಪೂಜ್ಯಳು. ಇದುವರೆಗೆ ಎಂದೂ ನೇರವಾಗಿ ನನ್ನನ್ನು ಹೀಗೆ ಕಟಕಿ ಮಾತನಾಡಿರಲಿಲ್ಲ. ಅದೇ ಮನಸ್ಸನ್ನು ಕೊರೆಯಲು ಶುರು ಮಾಡಿತು. ತಾನು ನಿರ್ಮಿಸಿರುವ ಪ್ರತಿಮೆಯ ಒಂದು ಮಗ್ಗಲು ಕಳಚಿಕೊಂಡು ಕುರೂಪವಾದರೆ ಆಗುವಂತಹ ದುಃಖ ವಿದುರನಿಗೆ ಆಯಿತು.

ವಿದುರ ಹೋದ ನಂತರ ಧೃತರಾಷ್ಟ್ರ ಗಾಂಧಾರಿ ಇಬ್ಬರೂ ಅದೇ ದೊಡ್ಡ ಪಲ್ಲಂಗದ ಮೇಲೆ ಮಲಗಿದರು. ಆದರೆ ಇಬ್ಬರಿಗೂ ಬೇರೆ ಬೇರೆ ಕಂಬಳಿಗಳು, ಹೊರಳಿದಾಗ, ಒಬ್ಬರಿಂದ ಇನ್ನೊಬ್ಬರ ನಿದ್ದೆಗೆ ತೊಂದರೆಯಾಗದಿರಲೆಂದು. ದಿಂಬುಗಳು ಕೂಡ ಬೇರೆ ಬೇರೆ. ಅಗಲವಾದ ಭುಜದ ಧೃತರಾಷ್ಟ್ರನಿಗೆ ಎತ್ತರವಾದ ದಿಂಬು ಬೇಕಿತ್ತು. ಅವನು ಯಾವಾಗಲೂ ಗೋಡೆಯ ಕಡೆಗೆ ಮಲಗುತ್ತಿದ್ದ. ಇನ್ನೊಂದು ಕಡೆಗೆ ಗಾಂಧಾರಿ. ಇಲ್ಲದಿದ್ದರೆ ನಿದ್ದೆ ಬರುತ್ತಿರಲಿಲ್ಲ. 'ಹೊದಿಸುತ್ತಿರುವುದು ನನ್ನ ಕರಿ ಕಂಬಳಿ ತಾನೆ?' ಎಂದು ದಾಸಿಯನ್ನು ಕೇಳಿದ. ಕರಿ ಕಂಬಳಿಯಾದರೆ ಹೆಚ್ಚು ಬೆಚ್ಚಗಿರುತ್ತದೆಂದು ಅವನ ನಂಬಿಕೆ. ಸ್ವಲ್ಪ ಶಖೆ ಎನ್ನಿಸಿದರೆ 'ಈ ಕರಿಯದನ್ನು ತೆಗೆದು ಬಿಳಿಯದು ಹೊದ್ದಿಸು' ಎನ್ನುತ್ತಿದ್ದುದೂ ಉಂಟು. ಗಾಂಧಾರಿಗೆ ಕರಿ ಬಿಳಿ ಎಂಬ ತಾರತಮ್ಯವಿಲ್ಲ. ಯಾವುದಾದರೆ ಅದು. 'ದೀಪ ಉರಿಯುತ್ತಿದೆಯೋ ?' ದಾಸಿಯನ್ನು ಕೇಳಿದ. 'ಆಗಾಗ್ಗೆ ಎಣ್ಣೆ ಹಾಕುತ್ತಿರು, ನಿದ್ದೆ ಮಾಡಿ ಬಿಡಬೇಡ'–ಎಂದು ಅಪ್ಪಣೆ ಮಾಡಿದ. ಕುರುಡನಿಗೆ ದೀಪವಿದ್ದರೇನು ಇಲ್ಲದಿದ್ದರೇನು ಎಂದು ದಾಸಿ ತನ್ನಲ್ಲಿ ತಾನೇ ಗೊಣಗಿಕೊಂಡರೂ ನಡುವೆ ಅಕಸ್ಮಾತ್ ಆರಿಹೋದರೆ ವಾಸನೆಯ ವ್ಯತ್ಯಾಸದಿಂದಲೇ ತಿಳಿದು ಕೂಗಿ ಕರೆದು ಬೈಯುತ್ತಾನೆಂಬ ಅರಿವು ಎಲ್ಲ ದಾಸಿಯರಿಗೂ ಇತ್ತು. ಅವಳು ಕೋಣೆಯ ಬಾಗಿಲಿನ ಆಚೆಗೆ ನಡೆದುಹೋದ ಸಪ್ಪಳವನ್ನಾಲಿಸಿದ ಮೇಲೆ ಹೆಂಡತಿಗೆ ಹೇಳಿದ: 'ವಿದುರನ ಯೋಗ್ಯತೆ ನೋಡಿದೆಯ?'

'ಹೊಸದಾಗಿ ನೋಡಬೇಕೆ ?'

ಆ ಮಾತು ಅಲ್ಲಿಗೆ ಮುಗಿಯಿತು. 'ಯೋಗ್ಯತೆ ಹೀಗಿದ್ದೂ ಅವನನ್ನು ಬಿಟ್ಟಿರಲಾರದೆ ಹಚ್ಚಿಕೊಂಡಿರುವವನು ನೀನೆ' ಎಂದು ಸೇರಿಸುತ್ತಾಳೆಂದು ನಿರೀಕ್ಷಿಸಿದ. ಆದರೆ ಅಷ್ಟಕ್ಕೇ ನಿಲ್ಲಿಸಿದಳು. ಆದರೆ ಸಿಟ್ಟು ಹೆಚ್ಚಿ ಬಂದಿದೆಯೋ ಅಥವಾ ಮನಸ್ಸು ಬೇರೆ ಕಡೆ ಹರಿದಿದೆಯೋ ತಿಳಿಯಲಿಲ್ಲ. ತನ್ನ ಮನಸ್ಸೇ ವಿದುರನನ್ನು ಬಿಟ್ಟು ಪಕ್ಕದಲ್ಲಿ ಮಲಗಿದ್ದ ಹೆಂಡತಿಯ ಮನಸ್ಸನ್ನು ಊಹಿಸುವುದರಲ್ಲಿ

ತೊಡಗಿತು. ಈ ಸ್ಥಿತಿಯಲ್ಲಿ ಏನಾದರೂ ಯಾರ ಕೈಲಾದರೂ ಮಾತನಾಡಬೇಕು, ನಿದ್ದೆ ಬರುವುದಿಲ್ಲ. ಆದರೆ ಹೆಂಡತಿಯು ಲಹರಿ ಒಂದೊಂದು ಥರ ಇರುತ್ತದೆ. ಇದ್ದಕ್ಕಿದ್ದಂತೆಯೇ ದೊಡ್ಡಪ್ಪ ಭೀಷ್ಮರ ಪ್ರತಾಪ ನೆನಪಾಯಿತು. 'ನೀನು ದೊಡ್ಡಪ್ಪ ಭೀಷ್ಮರನ್ನು ನೋಡಿದ್ದೀಯಾ?'

'ಯಾಕೆ?' ಗಾಂಧಾರಿ ಕೇಳಿದಳು.

'ತುಂಬ ಎತ್ತರವಾದ ಮೈಕಟ್ಟಂತೆ. ಈ ವಯಸ್ಸಿನಲ್ಲೂ ಉತ್ತುಂಗ ಪರ್ವತ ಶಿಖರದಂತೆ ನಿಲ್ಲುತ್ತಾರಂತೆ. ಪರ್ವತ ಶಿಖರವನ್ನು ನೋಡಿದ್ದೀಯ ನೀನು?'

'ನಮ್ಮದು ಬೆಟ್ಟಗಳ ಸೀಮೆಯೇ ಅಲ್ಲವೆ? ಸಮತಲವಾದ ಪ್ರದೇಶವೆಂದರೆ ಏನೆಂಬುದೇ ನನಗೆ ಗೊತ್ತಿಲ್ಲ. ಎಷ್ಟು ಎತ್ತರವಾದ ಬೆಟ್ಟಗಳು! ಅವುಗಳನ್ನು ಮುಚ್ಚಿ ಬೆಳೆದ ಹಸಿರು ಮರ-ಗಿಡ-ಬಳ್ಳಿ ಪೊದೆಗಳು, ಶಿಖರಗಳು.'

'ನಮ್ಮ ಈ ಕುರುನಾಡು ಸಮತಲವಲ್ಲವೇ?'

'ಅಂತ ಹೇಳುತ್ತಾರೆ.ನಾನು ನೋಡಿದ್ದೇನೆಯೇ?'

'ಅಂದರೆ'- ಎಂದು ಧೃತರಾಷ್ಟ್ರನು ತನಗೆ ತಿಳಿದಿರುವ ಒಂದು ಅಂಶವನ್ನು ತಿಳಿವಿನ ಹಂದರಕ್ಕೆ ಹೊಂದಿಕೊಳ್ಳಲು ಪ್ರಯತ್ನಿಸುತ್ತಿದ್ದಾಗ ಗಾಂಧಾರಿ ಹೇಳಿದಳು: 'ನನ್ನನ್ನು ನಿನಗೆ ಕೊಡುವುದೆಂದು ನಮ್ಮಪ್ಪ ನಿಶ್ಚಯಿಸಿದ ತಕ್ಷಣವೇ ನಾನು ಎರಡು ಕಣ್ಣುಗಳನ್ನೂ ಕಟ್ಟಿಕೊಂಡೆನಲ್ಲ. ನಾನು ನೋಡಿರುವುದು ನನ್ನ ತೌರು ಗಾಂಧಾರ ದೇಶವನ್ನು ಮಾತ್ರ.'

'ಅಂದರೆ ದೊಡ್ಡಪ್ಪನನ್ನು ನೋಡಿಲ್ಲ.'

'ಹೇಗೆ ನೋಡಿರಲಿ? ಹೆಣ್ಣು ಕೊಡಿ ಅಂತ ಕೇಳಲು ಅವರೇನೂ ಬಂದಿರಲಿಲ್ಲ. ಬರೀ ಸೈನ್ಯ, ಸೇನಾನಾಯಕ, ವಸ್ತ್ರಾಭರಣ, ಲೋಹದ ಪಾತ್ರೆ-ಪಡಗ, ಬಯಲು ನಾಡಿನಲ್ಲಿ ಬೆಳೆಯುವ ದವಸ ಧಾನ್ಯ ತುಂಬಿದ ಗಾಡಿಗಳನ್ನು ಮಾತ್ರವಲ್ಲವೇ ಅಲ್ಲಿಗೆ ಕಳಿಸಿದುದು. ನನಗೆ ಹೇಗೆ ನೆನಪುಳಿಯಬೇಕು ವಿವರಗಳು!'

ಧೃತರಾಷ್ಟ್ರನ ಮನಸ್ಸು ಅಷ್ಟರಲ್ಲಿ ಭಕ್ತಿ ಭಾವದಿಂದ ತುಂಬಿ ಬಂದಿತ್ತು. ಗಂಡನಿಗಿಲ್ಲದ ದೃಷ್ಟಿಭಾಗ್ಯ ತನಗೇಕೆ ಎಂದು ಮದುವೆ ನಿಶ್ಚಯವಾದ ತಕ್ಷಣ ತನ್ನ ಎರಡು ಕಣ್ಣುಗಳನ್ನೂ ತಾನೇ ಕಟ್ಟಿಕೊಂಡು ಬಂದು ಈ ಊರಿನ ಇದೇ ಅರಮನೆಯಲ್ಲಿ ಅಗ್ನಿಸಾಕ್ಷಿಯಾಗಿ ತನ್ನ ಪತ್ನಿಯಾಗಿ ಮಹಾಪತಿವ್ರತೆಯಾಗಿ ಸಕಲ ಕುರುಕುಲದಲ್ಲಿ ಮಾತ್ರವಲ್ಲ ಇಡೀ ಆರ್ಯ ಜಗತ್ತಿನಲ್ಲೇ ಅದ್ವಿತೀಯ ದೇವಿ ಎನ್ನಿಸಿರುವ ಹೆಂಡತಿಯ ಬಗೆಗೆ ಇದ್ದ ಹೆಮ್ಮೆಯು ಉಕ್ಕಿ ಬಂತು. ಅವಳು ತ್ಯಾಗದಿಂದ ದೊಡ್ಡವಳಾದಳು ಎಂಬ ಅರಿವಿನ ಜೊತೆಗೆ ಕೃತಜ್ಞತೆಯೂ ಮೂಡಿತು. ಮಲಗಿದ್ದವನು ಎಡಗೈಯನ್ನು ಅವಳ ಕಡೆಗೆ ನೀಡಿದ. ಒರಟು ಕಂಬಳಿ, ಅವಳು ಹೊದೆದಿರುವುದು ಕರಿಯದೋ ಬಿಳಿಯದೋ ಮುಟ್ಟಿ ನೋಡಿ ಬಣ್ಣ ತಿಳಿಯುವುದಕ್ಕಾಗುವುದಿಲ್ಲವಲ್ಲ ಎಂದುಕೊಳ್ಳುತ್ತಿರುವಾಗ ಅವಳು 'ಏನು?' ಎಂದಳು.

'ದೇವಿ, ಈ ಮಹಾನ್ ಕುರುಕುಲವನ್ನು ಉಳಿಸಲು ನೀನು ಬಂದೆ'-ಎಂಬ ಭಾವುಕ ಮಾತಿಗೂ ಅವಳು ಮೌನವಾಗಿದ್ದಳು. ಧೃತರಾಷ್ಟ್ರ ಸುಮ್ಮನಾದ. ಮುಟ್ಟಿ ನೋಡಿಯೇ ಬಣ್ಣ ತಿಳಿಯುವುದಕ್ಕಾಗುವುದಿಲ್ಲವಲ್ಲ ಎಂಬ ಕೊರಗು. ಗಾಂಧಾರಿಯದು ಶುದ್ಧ ಕೆಂಪು ಬಣ್ಣವಂತೆ. ಪರ್ವತ ಸೀಮೆಯವರೇ ಹಾಗಂತೆ, ಎಂದು ತಾನು ಕೇಳಿರುವುದು. ಮೃದುವಾದ ಚರ್ಮ, ಆದರೆ ಗಟ್ಟಿಮುಟ್ಟು ಮೈಕಟ್ಟು, ಇಷ್ಟೇ ತನಗೆ ಅವಳ ಕೆಂಪು ಬಣ್ಣವೆಂದು ತಿಳಿದಿರುವುದು ಎಂದುಕೊಳ್ಳುವಾಗ ಕರಿ ಕಂಬಳಿ ಹೊದಿಸಿದ್ದೇನೆಂದು ಹೇಳಿ ದಾಸಿ ಮೋಸ ಮಾಡಿ ಬಿಳಿಯದನ್ನು ಹೊದಿಸಿದ್ದರೆ, ಎಂಬ ಸಂಶಯ ಬಂತು. ದೇವಿ ಕೂಡ ಕಣ್ಣು ಕಟ್ಟಿಕೊಂಡಿರುವುದರಿಂದ ತನ್ನ ಕಂಬಳಿಯ ಬಣ್ಣವನ್ನು ನೋಡಿ ಹೇಳುವ ಆಪ್ತರು ಇಲ್ಲ. ದಾಸಿಯರೆಲ್ಲ ತಮ್ಮ ತಮ್ಮಲ್ಲೇ ಮಾತನಾಡಿಕೊಂಡಿದ್ದರೆ, ಆದರೆ ಬೆಚ್ಚಗಿದೆ, ಕರಿಯದೇ ಇರಬೇಕು, ಇಲ್ಲದಿದ್ದರೆ ಎಂಥ ಶಿಕ್ಷೆ ಅನ್ನುವ ಭಯ ಅವರಿಗಿಲ್ಲವೆ ಎಂಬ ಸಮಾಧಾನ ಹುಟ್ಟಿತು.

'ಈ ಕುರುಕುಲವನ್ನು ಉಳಿಸಿದವರೇ ದೊಡ್ಡಪ್ಪ ಭೀಷ್ಮರು. ಈಗ ಈ ವಯಸ್ಸಿನಲ್ಲಿ ಕೂಡ ಪ್ರತಾ

ಪವನ್ನು ಮರೆಯುತ್ತಾ, ಉಳಿಸುತ್ತಿರುವವರು ಅವರು'– ಎಂಬ ಮಾತು ಬಾಯಿಂದ ಬಂತು.

ಗಾಂಧಾರಿ ಸುಮ್ಮನಿದ್ದಳು. ತನ್ನ ಮಾತನ್ನು ಸಮರ್ಥಿಸಿ ಅವಳು ಏನಾದರೂ ಹೇಳಬೇಕೆಂದು ಆಶಿಸಿದ್ದ ಧೃತರಾಷ್ಟ್ರನಿಗೆ ನಿರಾಶೆಯಾಯಿತು. 'ಅಲ್ಲವೇ?' ಎಂದ. 'ಹೌದು' ಎಂದ ಅವಳು ಎಡಕ್ಕೆ ಎಂದರೆ ತನ್ನ ಕಡೆಗೆ ಬೆನ್ನು ಮಾಡಿ ಹೊರಳಿದುದು ಕಂಬಳಿಯ ಸಪ್ಪಳ ಮತ್ತು ಉಸಿರಿನ ದೂಗದಿಂದ ತಿಳಿಯಿತು. ಅವಳಿಗೆ ನಿದ್ದೆ ಹತ್ತುತ್ತಿದೆ ಎಂಬುದು ಅರ್ಥವಾಗಿ ಅವನು ಸುಮ್ಮನಾದ. ಯುದ್ಧ ಶುರುವಾಗುವ ಈ ದಿನ ಅವಳಿಗೆ ಇಷ್ಟು ಬೇಗ ನಿದ್ದೆ ಹತ್ತುತ್ತಿರುವುದರಿಂದ ಅಸಮಾಧಾನವೆನ್ನಿಸಿದರೂ ತಾನೂ ಮುಸುಕೆಳೆದುಕೊಂಡು ಅಂಗಾತನಾದ. ಸ್ವಲ್ಪ ಮಂಪರು ಬಂತು. ಮಂಪರೋ ನಿದ್ದೆಯೋ ಅಂತೂ ಸ್ವಲ್ಪ ಹೊತ್ತು ಎಲ್ಲವೂ ಮರೆಯಾಗಿದ್ದಾಗ ಗಾಂಧಾರಿ ಗೊರಕೆ ಹೊಡೆಯುವ ಸದ್ದು ಕಿವಿಗೆ ಬಿದ್ದು ಎಚ್ಚರವಾಯಿತು. ಎಡಗೈ ನೀಡಿ ನೋಡಿದ, ಹೌದು. ಅಂಗಾತವಾಗಿದ್ದಾಳೆ. ಅದಕ್ಕೇ ಗೊರಕೆ ಎಂದು ತಿಳಿದು ಅವಳನ್ನು ಅಲುಗಾಡಿಸಿ ಮಗ್ಗುಲಾಗಿ ಮಲಗು ಎಂದ. ಅವಳು ಸರಕ್ಕನೆ ಮಗ್ಗುಲು ತಿರುಗಿದಳು. ಆದರೂ ನಿದ್ರೆ ಅದೇ ಆಳದಲ್ಲಿ ತುಂಬಿಕೊಂಡಿತ್ತು. ಹಲ್ಲಿಲ್ಲದ ಬಾಯಿಯಿಂದ ಪುಸ್ ಪುಸ್ ಎಂದು ಹೊರಡುವ ಉಸಿರೂ ಅದೇ ಪ್ರಮಾಣದಲ್ಲಿತ್ತು. ಅವಳ ಮೇಲೆ ರೇಗುವಂತಾಗುತ್ತಿತ್ತು. ಹತ್ತುವ ನಿದ್ದೆ ಹೀಗೆ ನಡುವಿನಲ್ಲೇ ಕಡಿದುಹೋದರೆ ಅನಂತರ ಎಷ್ಟು ಹೊತ್ತಾದರೂ ಮತ್ತೆ ಸುಳಿಯುವುದಿಲ್ಲವೆಂಬ ಅನುಭವ ಸಿಟ್ಟನ್ನು ಹೆಚ್ಚು ಮಾಡಿತು. ಎಬ್ಬಿಸಿ ಬೈಯುವ ಮನಸ್ಸು. ಆದರೆ ನೀನೇನು ಕಡಿಮೆ ಹೊಡೆಯುತ್ತೀಯ, ಎಲ್ಲೋ ಒಂದು ದಿನ ನಾನು ಮರೆತು ಅಂಗಾತ ಹೊರಳಿ ಗೊರಕೆ ಹೊಡೆದರೆ ಎಷ್ಟು ರೇಗು,' ಅನ್ನುತ್ತಾಳೆಂಬ ನೆನಪಾಗಿ ಸುಮ್ಮನಾದ.

ಬೆಳಗ್ಗೆ ಎದ್ದಾಗ ಹೊರಗಿನ ಸದ್ದು–ಗದ್ದಲದ ಮೇಲೆ ಸೂರ್ಯ ಹುಟ್ಟಿ ನಾಲ್ಕು ಘಳಿಗೆಯಾಗಿದೆ ಎಂದು ಅವನು ಅರ್ಥ ಮಾಡಿಕೊಂಡದ್ದನ್ನು ದಾಸಿಯು ಹೌದೆಂದಳು. ಧ್ವನಿಯಿಂದಲೇ ಇವಳ ಹೆಸರು ಸುಸ್ಮಿತೆ ಎಂಬ ನೆನಪು ಬಂತು. ರಾತ್ರಿಯ ಪಾಳಿ ಕಾದ ಚಾರು ವಿಶ್ರಾಂತಿಗೆಂದು ತನ್ನ ಮನೆಗೆ ಹೋಗಿದ್ದಾಳೆ ಎಂದು ಅರ್ಥವಾಯಿತು. ಸುಸ್ಮಿತೆ ಕರೆದೊಯ್ದು ಮುಖ ತೊಳೆಸಿ, ಸ್ನಾನ ಮಾಡಿಸಿ, ಒಗೆದ ಬಟ್ಟೆಯುಡಿಸಿ ಕರೆತಂದು ಪಲ್ಲಂಗದ ಮೇಲೆ ಕೂಡಿಸಿದಳು. ಹೆಂಡತಿ ಗಾಂಧಾರಿ ಹತ್ತಿರವೇ ಕುಳಿತಿರುವುದು ಅರಿವಿಗೆ ನೇರವಾಗಿ ಭಾಸವಾಯಿತು. ಸುಸ್ಮಿತೆ ಹೊರಗೆ ಹೋದಳು. ಒಳಗೆಲ್ಲ ಮೌನ. ಅರಮನೆಯ ಆವರಣದಲ್ಲಿ ಕೂಡ ನಿಸ್ತಬ್ಧ. ಏನೋ ಇಲ್ಲವೆನ್ನುವ ಭಾವ. ಸ್ವಲ್ಪ ಹೊತ್ತಿಗೆ ಸುಸ್ಮಿತೆ ಬಂದಳು. ಪುರೋಹಿತನು ಹವನ ಮಾಡುತ್ತಿದ್ದಾನೆ, ಹೋಗೋಣವೇ ಎಂದಳು. ಧೃತರಾಷ್ಟ್ರ ಗಾಂಧಾರಿ ಇಬ್ಬರೂ ಎದ್ದು ನಿಂತರು. ಒಬ್ಬರನ್ನೊಬ್ಬರು ಒಂದೊಂದು ಕೈಯಲ್ಲಿ ಹಿಡಿದು ಈ ಅರಮನೆಯ ಹೊರಗಿನಿಂದ ಅಂಗಳಕ್ಕೆ ಕರೆದೊಯ್ದು ಅಲ್ಲಿಂದ ಎಂದಿನಂತೆ ಬಲಕ್ಕೆ ತಿರುಗಿ ಹವನ ಮಂಟಪಕ್ಕೆ ಕರೆದೊಯ್ದಳು. ಅಗ್ನಿಗೆ ಅರಳು ಹಾಕಿ ಪುರೋಹಿತನು ಕೊಟ್ಟ ಆಜ್ಯವನ್ನರ್ಪಿಸಿದ ನಂತರ ಹಿಂದಕ್ಕೆ ಕರೆತಂದಳು. ಪಲ್ಲಂಗದ ಮೇಲೆ ಕುಳಿತ ನಂತರ ಅವನು ಹೆಂಡತಿಯನ್ನು ಕೇಳಿದ: 'ಇತರ ಅರಮನೆಗಳಲ್ಲಿ ಸ್ವಲ್ಪವೂ ಸದ್ದಿಲ್ಲ. ಹವನ ಮಂಟಪದಲ್ಲಿ ನಾವಿಬ್ಬರೇ ಇದ್ದಂತಿತ್ತು.'

'ಸೊಸೆಯರು, ಮೊಮ್ಮಕ್ಕಳ ಹೆಂಡಂದಿರೆಲ್ಲ ನೆನ್ನೆಯೇ ಯುದ್ಧ ಶಿಬಿರಕ್ಕೆ ಹೋದರು.'

'ಯುದ್ಧ ಶಿಬಿರಕ್ಕೆ ಇವರು ಯಾಕೆ ಹೋಗಬೇಕಿತ್ತು? ದಾಸಿಯರಿಲ್ಲವೇ? '

'ತಮ್ಮ ಗಂಡಂದಿರನ್ನು ದಾಸಿಯರ ವಶಕ್ಕೆ ಒಪ್ಪಿಸಿ ಕೂರಲು ಅವರೇನು ನನ್ನ ಹಾಗೆ ಕಣ್ಣಿಗೆ ಪಟ್ಟಿ ಕಟ್ಟಿಕೊಂಡವರೆ? '

ಅವಳು ಯಾವ ಅರ್ಥದಲ್ಲಿ ಮಾತನಾಡಿದಳೋ ಅವನಿಗೆ ತಿಳಿಯಲಿಲ್ಲ. ಆದರೆ ಧ್ವನಿಯಲ್ಲಿದ್ದ ಅಪ್ರಸನ್ನತೆಯ ಗುರುತು ಹತ್ತಿತ್ತು.

ಕೆದಕಿ ಕೇಳುವ ಇಚ್ಛೆಯಾಗಲಿಲ್ಲ. ಅಷ್ಟರಲ್ಲಿ ಸುಸ್ಮಿತೆ ಬಂದು ಇಬ್ಬರನ್ನೂ ಬೇಗಿನ ಊಟಕ್ಕೆ ಕರೆದೊಯ್ದಳು.

ಆ ದಿನವೆಲ್ಲ ಅವನ ಮನಸ್ಸಿನಲ್ಲಿ ಭಣಭಣವಾಗುತ್ತಿತ್ತು. ಸಂಜೆಯಾಗುತ್ತಿರುವಾಗ ಎದ್ದು ಅರಮನೆಯ ಅಂಗಣದಲ್ಲಿ ತಿರುಗಾಡಬೇಕೆನ್ನಿಸಿತು. ಸಿತು. ದಾಸೀ ಎಂದು ಕೂಗಿದ. ಯಾರೂ ಇರಲಿಲ್ಲ. ಎರಡು ಬಾರಿ ಕೂಗಿ ಚಪ್ಪಾಳೆ ತಟ್ಟಿದ ನಂತರ ಹತ್ತಿರ ಬಂದು ಧ್ವನಿ ಕೊಟ್ಟವಳು ಚಾರು ಎಂದು ಅರ್ಥವಾಯಿತು. ಎಲ್ಲಿಗೆ ಹೋಗಿದ್ದೆ?—ಎಂದ. 'ಮಹಾರಾಣಿಯ ಹತ್ತಿರ ಇದ್ದೆ'. 'ಮಹಾರಾಣಿ ಎಲ್ಲಿ?' ಎಂದದ್ದಕ್ಕೆ 'ಇಳಿ ಬಿಸಿಲಿನಲ್ಲಿ ಕೂತು ವಿಭಾವರೀ ದಾಸಿಯ ಕೈಲಿ ಮಾತನಾಡುತ್ತಿದ್ದಾಳೆ.'

'ಯಾವ ವಿಷಯ?'

'ಅದೇನೋ ಅವಳ ಬಾಲ್ಯವಂತೆ. ಗಾಂಧಾರ ದೇಶದ ತುಂಬ ಬೆಟ್ಟಗಳು, ಕಣ್ಣಿಗೆ ಅಷ್ಟು ಚಂದವಾದ ಹಸಿರಿನ ಎತ್ತರಗಳು. ತಂಪು. ವರ್ಷಕ್ಕೆ ಏಳೆಂಟು ತಿಂಗಳು ಪ್ರಚಂಡ ತಪೆಯಾಗುವ ದೇಶ ಇದು. ಆ ತಂಪು ಇನ್ನೆಲ್ಲಿದ್ದೀತು. ಅಂತ ಜ್ಞಾಪಿಸಿಕೊಂಡು ಒಂದು ಸಲ ಅತ್ತೂಬಿಟ್ಟಳು.'

ಅವನಿಗೆ ಕಸಿವಿಸಿಯಾಯಿತು. ಮದುವೆಯಾಗಿ ಬಂದ ಮೇಲೆ ಒಂದು ಸಲವೂ ತೌರಿಗೆ ಹೋಗಲಿಲ್ಲ. 'ಅಲ್ಲಿಗೆ ಹೋಗಿ ತಾನೆ ಯಾರನ್ನು ನೋಡಲಿ ಕಟ್ಟಿದ ಕಣ್ಣಿನಿಂದ? ಹೇಗೂ ಅಣ್ಣ ತಮ್ಮಂದಿರು ಇಲ್ಲಿಗೇ ಬಂದಿದ್ದಾರಲ್ಲ'—ಎಂದಿದ್ದಳು ಅವಳೇ ಎಂಬ ನೆನಪಾಯಿತು.

ಸಂಜಯ ಯುದ್ಧರಂಗದಿಂದ ಮತ್ತೆ ಸುದ್ದಿ

ತಂದು ಹೇಳಿದ. 'ಯುದ್ಧರಂಗದಿಂದ ಭೀಷ್ಮರ ನಿವೃತ್ತಿ. ದ್ರೋಣರು ಸೇನಾಪತಿಯಾಗುವ ಸಂಭವ. ದುರ್ಯೋಧನನ ಸೇನೆಯು ಕುಗ್ಗಿದ ಗಾತ್ರ. ಪಾಂಡವರ ತಂತ್ರ ಕೌಶಲ'–ಸಂಜಯ ಮೊದಲು ತಾತ್ಪರ್ಯವನ್ನು ಒಂದೇ ಉಸುರಿಗೆ ಹೇಳಿದ ನಂತರ ವಿವರಕ್ಕೆ ಬಂದ. 'ಪಾಂಡವರು ಭೀಷ್ಮರನ್ನು ಕೊಲ್ಲುವುದು ಹೇಗೆ ಎಂದು ತೊಳಲುತ್ತಿರುವಾಗ ಅವರ ಕಡೆಯ ಯಾದವರ ಕೃಷ್ಣ ತಂತ್ರವನ್ನು ನಿರೂಪಿಸಿದನಂತೆ: ಭೀಷ್ಮರನ್ನು ಕೊಂದು ಸೇಡು ತೀರಿಸಿಕೊಳ್ಳುವುದಕ್ಕೆಂದೇ ಕಾಶಿರಾಜನ ಮಗಳು ಅಂಬೆ ಅನ್ನುವವಳು ಬೆಂಕಿಗೆ ಬಿದ್ದು ಪ್ರಾಣತ್ಯಾಗ ಮಾಡಿ ಪುರುಜನ್ಮ ಪಡೆದು ಅನಂತರವೂ ಪ್ರಾಣ ಪತ್ರ ಮಾಡಿಕೊಂಡು ಈಗ ದ್ರುಪದನ ಹಿರಿಯ ಮಗನಾಗಿ ಶಿಖಂಡಿಯಾಗಿ ಹುಟ್ಟಿಲ್ಲವೆ? ಅದು ಈ ದಿನದ ಯುದ್ಧದ ನೇತೃತ್ವ ವಹಿಸಿ ಭೀಷ್ಮರ ಮೇಲೆ ಸವಾಲು ಹಾಕಲು ಸಕಾಲ ಅಂತ ಕೃಷ್ಣ ಹೇಳಿದನಂತೆ. ಈ ದಿನ ಶತ್ರುಪಕ್ಷದ ಸೇನಾನಿಯನ್ನು ಕೊಲ್ಲುವುದು ನಿಶ್ಚಿತ. ಅವನನ್ನು ಕೊಲ್ಲುವುದಕ್ಕಾಗಿಯೇ ಜನ್ಮ ತಳೆದ ವಿಶೇಷ ಮಾನವನು ನಮ್ಮ ನಾಯಕನಾಗುತ್ತಾನೆ ಎಂದು ಪ್ರಚಾರ ಮಾಡಿ ತಮ್ಮ ಸೈನಿಕರನ್ನೆಲ್ಲ ಹುರಿದುಂಬಿಸಿದನಂತೆ...' ಎಂದು ಎನ್ನುವಾಗ 'ಅಂಬೆ ಅಂದೆಯಾ?' ಗಾಂಧಾರಿ ಕೇಳಿದಳು.

'ನಿನಗೆ ಗೊತ್ತಿರಲಿಲ್ಲವೆ ದೊಡ್ಡಪ್ಪನ ಶೌರ್ಯದ ಕತೆ, ನನ್ನ ಅಮ್ಮ ಪಾಂಡುವಿನ ಅಮ್ಮ ಇಬ್ಬರಿಗಿಂತಲೂ ಹಿರಿಯಳು. ದೊಡ್ಡಪ್ಪ ಸ್ವಯಂವರದಿಂದ ಈ ಮೂವರನ್ನು ಗೆದ್ದು ಹಗ್ಗ ಬಿಗಿದು ಕೈಕಾಲು ಕಟ್ಟಿ ರಥದಲ್ಲಿ ಹಾಕಿಕೊಂಡು ಇಲ್ಲಿಗೆ ತಂದಾಗ' ಎಂದು ಮುಂದೆ ಹೇಳುತ್ತಿರುವಾಗ ಅವಳು, 'ಎಲ್ಲ ಕೇಳಿದ್ದೀನಿ ಬಿಡು, ನಿನ್ನ ದೊಡ್ಡಪ್ಪನ ದೊಡ್ಡ ಗಾಡಿಕೆಯ ಕೆಲಸಗಳನ್ನು. ಅವಳ ಹೆಸರೊಂದು ಮರೆತು ಹೋಗಿತ್ತು, ಅದಕ್ಕೆ ಹಾಗೆ ಕೇಳಿದೆ' ಎಂದು ಸರಕ್ಕನೆ ಅಡ್ಡಕೊಟ್ಟಳು.

ಅವಳ ಈ ಮಾತು ಮತ್ತು ಗಂಟಲಿನ ಸಿಡಿಮಿಡಿಯ ಕಾರಣ ಧೃತರಾಷ್ಟ್ರನಿಗೆ ಅರ್ಥವಾಗಲಿಲ್ಲ. ಈ ನಡುವೆ ಅವಳನ್ನು ಕೆದಕುವ ಮನಸ್ಸಾಗದೆ, 'ಹುರಿದುಂಬಿಸಿದನಂತೆ, ಮುಂದೆ?' ಎಂದ.

'ಪಾಂಡವರ ಕಡೆಯ ಹೊಡೆತ ಅಷ್ಟು ವೇಗದ್ದು. ಆನೆ ಅಂದರೆ ಭೀಮ, ಭೀಮ ಅಂದರೆ ಆನೆಯ ನೆನಪುಗಳು ನನ್ನ ತಲೆಯಲ್ಲಿ ಒಂದರೊಳಗೊಂದು ಹೆಣೆದುಕೊಂಡು ಬಿಟ್ಟಿವೆ. ಅವನು ಇದುವರೆಗೆ ನಿನ್ನ ಒಟ್ಟು ಹದಿನೇಳು ಮಕ್ಕಳನ್ನು ಕೊಂದು ಬಿಸಾಡಿದ್ದಾನೆ, ಅದೂ ನನಗೆ ಲೆಕ್ಕ ತಿಳಿದಿರುವ ಮಟ್ಟಿಗೆ...'

ಎಂದು ಸಂಜಯ ಮುಂದುವರಿಸುತ್ತಿರುವ ನಡುವೆಯೇ ಗಾಂಧಾರಿ ಗಟ್ಟಿಯಾಗಿ ಕಿರುಚಿಕೊಳ್ಳತೊಡಗಿದಳು. ಸಂಜಯ ವಿದುರ ಧೃತರಾಷ್ಟ್ರರು ಗಾಬರಿಯಾದರು. ದಾಸಿ ಓಡಿ ಬಂದಳು. ಗಾಂಧಾರಿ ಕಣ್ಣಿಗೆ ಕಟ್ಟಿಕೊಂಡಿದ್ದ ಅರಿವೆ ಒದ್ದೆಯಾಗಿತ್ತು. ಸಂಜಯನಿಗೆ ತನ್ನ ತಪ್ಪಿನ ಅರಿವಾಯಿತು. ತಕ್ಷಣ ತಿದ್ದುಪಡಿ ಮಾಡಿದ: 'ದೇವಿ, ನಾನು ಹೇಳಿದುದು ಮಹಾರಾಜನ ಹದಿನೇಳು ಮಕ್ಕಳನ್ನು ಕೊಂದು ಬಿಸಾಡಿದ್ದಾನೆ, ಅಂತ. ಅವರಲ್ಲಿ ನಿನ್ನ ಒಬ್ಬರು ಮಕ್ಕಳೂ ಸೇರಿಲ್ಲ. ಅವರೆಲ್ಲ ಕ್ಷೇಮವಾಗಿದ್ದಾರೆ.' ಅಷ್ಟರಲ್ಲಿ ದಾಸಿ ಹತ್ತಿರವಿದ್ದ ನೀರಿನ ಮೊಗೆಯಿಂದ ಶಾರೆಗೆ ಬಗ್ಗಿಸಿಕೊಂಡು ಮಹಾರಾಣಿಯ ತಲೆಗೆ ತಣ್ಣೀರು ತಟ್ಟುತ್ತಿದ್ದಳು. ಸಂಜಯ ಮತ್ತೊಮ್ಮೆ ಬಿಡಿಸಿ ಹೇಳಿದ ಮೇಲೆ ಅವಳಿಗೆ ತಿಳಿಯಿತು. 'ನನ್ನ ಮಕ್ಕಳು ಯಾರೂ ಸತ್ತಿಲ್ಲವೆ? ನಿಜ ಹೇಳು?'

'ಸತ್ಯವಾಗಿಯೂ'–ಎಂದ ಮೇಲೆ ಅವಳು ಸುಮ್ಮನಾದಳು.

ಸಂಜಯ ಹೇಳತೊಡಗಿದ. 'ಮೊನ್ನೆ ಎಂದರೆ ಎಂಟನೆಯ ದಿನ ಎಂದು ಕಾಣುತ್ತದೆ. ಒಟ್ಟು ಎಂಟು ಜನರನ್ನು ಚಚ್ಚಿ ಬಿಸಾಕಿದ. ಸುನಾಭ, ಆದಿತ್ಯಕೇತು, ಕುಂಡಧಾರ, ಬಹ್ವಾಶಿ, ಮಹೋದರ, ಅಪರಾಜಿತ, ಪಂಡಿತಕ ಒಟ್ಟು ಎಷ್ಟಾಯಿತು?' ಎಂದು ಅವೇ ಹೆಸರುಗಳನ್ನು ಬೆರಳಿನಿಂದ ಎಣಿಸಿಕೊಳ್ಳುತ್ತಾ ಮತ್ತೆ ಹೇಳಿ 'ಏಳಲ್ಲವೇ? ಇನ್ನೊಂದು ಮರೆತುಹೋಯಿತು.

ಆಮೇಲೆ, ನೆನ್ನೆಯೋ ಅಥವಾ ಮೊನ್ನೆಯೋ ನನಗೆ ಸರಿಯಾಗಿ ನೆನಪಿಲ್ಲ, ಒಟ್ಟು ಒಂಬತ್ತು ಜನರನ್ನು ಹೀಗೆಯೇ ತರಿದು ಹಾಕಿದ. ವ್ಯೂಢೋರಸ್ಕ, ಕುಂಡಲಿನ, ಅನಾಧೃಷ್ಟಿ, 'ಕುಂಡ ಭೇರಿ, ದೀರ್ಘಬಾಹು ಆಮೇಲೆ... ಮಹಾರಾಜ, ಹೆಸರುಗಳಲ್ಲಿ ಒಂದನ್ನೂ ಮರೆಯದೇ ಹೇಳಬೇಕೆಂದು ದಾರಿಯುದ್ದಕ್ಕೂ ಮನಸ್ಸಿನಲ್ಲಿ ಹೇಳಿಕೊಳ್ಳುತ್ತಲೇ ಬಂದೆ. ಈಗ ನುಸುಳಿಕೊಳ್ಳುತ್ತಿವೆ. ಹೂಂ ಕನಕಧ್ವಜ, ಆಮೇಲೆ, ಆಮೇಲೆ ಜ್ಞಾಪಕಕ್ಕೆ ಬರುತ್ತಿಲ್ಲ' ಬಂದಾಗ ಓಡಿ ಬಂದು ಹೇಳುತ್ತೇನೆ'.

'ಸಂಜಯ, ಇವರೆಲ್ಲರ ವಯಸ್ಸೆಷ್ಟು?' ಎಂದು ಕೇಳಿದ.

'ಮೊದಲನೆಯ ಎಂಟು ಜನ ಅಂದೆನಲ್ಲ, ಹಿರಿಯವನಿಗೆ ಐವತ್ತು ಉಳಿದವರು ಒಬ್ಬನಿಗಿಂತ ಒಬ್ಬ ಒಂದೊಂದು ವರ್ಷಕ್ಕೆ ಚಿಕ್ಕವನು. ಎಂಟು ಜನವೂ ಒಂದೇ ತಾಯಿಯ ಮಕ್ಕಳು. ಒಂದೇ ಗುಂಪಿನಲ್ಲಿ ಭೀಮನ ಮೇಲೆ ಎರಗಿ ಬಂದರು. ಭೀಮನನ್ನು ಕೊಂದೋ ಸೆರೆಹಿಡಿದೋ ತಂದರೆ ಅಣ್ಣ ದುರ್ಯೋಧನ ಬಹುಮಾನ ಕೊಡುತ್ತಾನೆಂಬ ಆಶೆಯಿಂದ. ದುರ್ಯೋಧನ ಮಹಾರಾಜ ತಮ್ಮಂದಿರನ್ನು ಹುರಿದುಂಬಿಸಿ ಕಳಿಸಿದ್ದನಂತೆ. ಅವರು ಕೂಡ...' ಎನ್ನುತ್ತಿರುವಾಗ ಗಾಂಧಾರಿ ಸರಕ್ಕನೆ ರೇಗಿ ಬಾಯಿ ಹಾಕಿದಳು: 'ಯಾರಿಗೆ ತಮ್ಮಂದಿರು? ತಮ್ಮಂದಿರು ಅಂತ ಅವನ ಬಾಯಲ್ಲಿ ಬಂತೋ ಸೂತ ಜಾತಿಯ ನೀನು ಕಲ್ಪಿಸಿಕೊಂಡು ಆಡುತ್ತಿದ್ದೀಯೋ? ರಾಜಸಾನಿಧ್ಯದಲ್ಲಿ ಗೌರವದಿಂದ ಮಾತನಾಡಬೇಕು.'

ಗೂಡಿನಲ್ಲಿ ಒಂದೇ ಸಮನೆ ಉರಿಯುತ್ತಿದ್ದ ಹಣತೆ ಸ್ವಲ್ಪ ಮಂಕಾಯಿತು. ಹೊರ ಬಾಗಿಲಲ್ಲಿ ನಿಂತಿದ್ದ ದಾಸಿ ಒಳಗೆ ಬಂದು ಹಣತೆಗೆ ಎಣ್ಣೆ ಹಾಕಿ ಬತ್ತಿಯನ್ನು ಮೀಟಿ ಸರಿ ಮಾಡಿದಳು. ದೀಪವು ಒಳಗೆಲ್ಲ ನಿಶ್ಯಬ್ದವನ್ನು ತುಂಬುವಂತೆ ದೊಡ್ಡದಾಯಿತು. ವಿದುರ ಮಾತನಾಡಿದ. 'ಸಂಜಯನ ಕಲ್ಪನೆಯಲ್ಲ. ಅವರು ಐವತ್ತಿರಬಹುದು, ನಾವು ನೂರು ಜನರಿದ್ದೇವೆ, ನನಗೆ ಒಟ್ಟು ತೊಂಬತ್ತೊಂಬತ್ತು ಜನ ತಮ್ಮಂದಿರಿದ್ದಾರೆ. ಯುದ್ಧಕ್ಕೆ ಬಂದರೆ ಬಡಿದು ಮಲಗಿಸುತ್ತೇವೆ, ಅಂತ ದುರ್ಯೋಧನ ರಾಜಸಭೆಯಲ್ಲೇ ಅನ್ನುತ್ತಿದ್ದ. ಯುದ್ಧರಂಗದಲ್ಲಿ ಅನ್ನದೆ ಇರುತ್ತಾನೆಯೆ?'

ಗಾಂಧಾರಿ ಮಾತನಾಡಲಿಲ್ಲ. ಮಹಾರಾಜನ ಮನಸ್ಸು ಒಂದು ಕುತೂಹಲದ ಚಿಂತನೆಯಲ್ಲಿ ತೊಡಗಿತ್ತು. ದೇವಿ ಗಾಂಧಾರಿಯ ಹೊಟ್ಟೆಯಲ್ಲಿ ಹುಟ್ಟಿದವರು ಹದಿನಾಲ್ಕು ಗಂಡು, ಒಂದು ಹೆಣ್ಣು ಎಂಬ ಲೆಕ್ಕ ಕರಾರುವಕ್ಕಾಗಿದೆ. ಇನ್ನು ಉಳಿದವರು ನೂರರಲ್ಲಿ ಹದಿನಾಲ್ಕು ಕಳೆದರೆ, ಹದಿನಾಲ್ಕು ಕಳೆದರೆ ಎಷ್ಟು, 'ವಿದುರ, ನೂರರಲ್ಲಿ ಹದಿನಾಲ್ಕು ಹೋದರೆ ಎಷ್ಟು?' ಎಂದ.

ಸಂದರ್ಭವು ತಕ್ಷಣ ಹೊಳೆಯದಿದ್ದರೂ ವಿದುರ 'ಎಂಬತ್ತಾರು' ಎಂದ.

ತನ್ನ ಈ ತಮ್ಮಂದಿರು ಒಟ್ಟು ಎಂಬತ್ತಾರು ಮಾತ್ರ, ಹೆಚ್ಚೂ ಇಲ್ಲ ಕಡಿಮೆಯೂ ಇಲ್ಲ ಎಂಬ ಲೆಕ್ಕ ದುರ್ಯೋಧನನಿಗೆ ಹೇಗೆ ಸಿಕ್ಕಿತು? ಅಥವಾ ಅವನಿಗೆ ಸಿಕ್ಕಿರುವ ಲೆಕ್ಕವೇ ಸರಿ ಇರಬಹುದು. ನನಗಾದರೂ ಯಾವ ನೆನಪು? ಅವನು ಅಗತ್ಯವಿದ್ದುದರಿಂದ ಲೆಕ್ಕ ಹಾಕಿಸಿರಬಹುದು. ನನಗೊ? ಎಂದು ಮಹಾರಾಜ ಆಲೋಚಿಸುತ್ತಿರುವಾಗ ಸಂಜಯ ಮನೆಗೆ ಹೋಗಲು ಅಪ್ಪಣೆ ಕೇಳಿದ.

'**ಮ**ಹಾರಾಜ, ಭೀಷ್ಮರ ಹತ್ತು ದಿನಗಳ ಸೇನಾಪತಿತ್ವದ ಅವಧಿಯಲ್ಲಿ ಯಾವ ಪ್ರಮುಖರೂ ಸಾಯಲಿಲ್ಲ. ಬರೀ ಸೈನಿಕರ ಶಿರಗಳುರುಳಿದವು – ಮಹಾಸಮೂಹಕ್ಕೆ ಅಡಿಗೆ ಮಾಡುವ ಮುನ್ನ ಆಡು ಕುರಿಗಳ ತಲೆಗಳುರುಳುವಂತೆ. ಆದರೆ ದ್ರೋಣರ ನಾಲ್ಕೂವರೆ ದಿನಗಳ ಅವಧಿಯಲ್ಲಿ ಪ್ರಮುಖರ ತಲೆಗಳೂ ಉರುಳಿವೆ. ಸಾಧಾರಣ ಯೋಧರ ಸಂಖ್ಯೆ ಏನೂ ಕಡಿಮೆ ಇಲ್ಲ...'

ಸಂಜಯನ ಮಾತಿನ ಆರಂಭವನ್ನು ಗಕ್ಕನೆ ತಡೆದ ಧೃತರಾಷ್ಟ್ರ. 'ಯಾರು ಯಾರು ಆ ಪ್ರಮುಖರು? ಮೊದಲು ಹೇಳು' ಎಂದ.

'ಹೇಳುತ್ತೇನೆ'– ತನ್ನ ಆರಂಭಕ್ಕೆ ತಡೆ ಬಿದ್ದ

ಷ್ಟರಿಂದ ಕ್ರಮ ತಪ್ಪಿದ ಸಂಜಯ ಒಂದು ಕ್ಷಣ ಜ್ಞಾಪಿಸಿಕೊಂಡ ನಂತರ ಹೇಳತೊಡಗಿದ. 'ಅರ್ಜುನನ ಮಗ ಅಭಿಮನ್ಯು. ಭೀಮನ ಮಗ ಘಟೋತ್ಕಚ, ಆಚಾರ್ಯ ದ್ರೋಣ. ಸಿಂಧುರಾಜ ಜಯದ್ರಥ, ಇತರ ಹಲವು ಮಿತ್ರ ರಾಜರು...' ಎಂಬಲ್ಲಿ ಗಾಂಧಾರಿ–'ನನ್ನ ಮೈದುನೆಯ ಗಂಡನ? ' ಎಂದು ಕಿಟ್ಟನೆ ಕಿರುಚಿಕೊಂಡಳು.

'ಹೌದು. ಮಹಾರಾಣಿ' – ಸಂಜಯ ನಿರ್ಭಾವುಕನಾಗಿ ಉತ್ತರವಿತ್ತ. ತನ್ನ ವರದಿಯ ಕ್ರಮಕ್ಕೆ ಧಕ್ಕೆಯುಂಟಾದುದಕ್ಕೆ ಅವನಿಗೆ ಕಸಿವಿಸಿಯಾಯಿತು. ಯಾವನು ಕೊಂದವನು ಎಂಬ ಅವಳ ಪ್ರಶ್ನೆಗೆ ಶಾಂತವಾಗಿ, 'ಅರ್ಜುನ ಕೊಂದು ತನ್ನ ಶಪಥವನ್ನು ಪೂರೈಸಿಕೊಂಡ' ಎಂದು ನಿಲ್ಲಿಸಿದ.

'ನನ್ನ ಮಗಳನ್ನು ವಿಧವೆಯಾಗಿ ಮಾಡಿದ ಅವನ ಹೆಂಡತಿಯೂ...' ಗಾಂಧಾರಿಯ ಶೋಕವು ಶಾಪಕ್ಕೆ ತಿರುಗಿತು. ಧೃತರಾಷ್ಟ್ರನ ಕರುಳೂ ಕರಗಿತು. ರಾತ್ರಿಯ ಹಣತೆ ಗೂಡಿನಲ್ಲಿ ಮೌನವಾಗಿ ಉರಿಯುತ್ತಿತ್ತು. ವಿದುರ ಕಂಬ ಒರಗಿ ಕುಳಿತಿದ್ದ.

'ವಿದುರ ನೀನಾದರೂ ಇವಳಿಗೆ ಸಮಾಧಾನ ಹೇಳಬಾರದೆ?' ಧೃತರಾಷ್ಟ್ರ ಕೇಳಿದ.

'ಶಾಪ ಹಾಕುತ್ತಾ ಹಾಕುತ್ತಾ ತಾನೇ ಸಮಸ್ಥಿತಿಗೆ ತಿರುಗುತ್ತದೆ. ಆ ಹುಡುಗ ಅಭಿಮನ್ಯುವಿನ ಹೆಂಡತಿ, ಘಟೋತ್ಕಚನ ಹೆಂಡತಿಯರೂ ವಿಧವೆಯರಾದರಲ್ಲ. ಇದುವರೆಗೆ ಸತ್ತಿರುವ ಲೆಕ್ಕವಿಲ್ಲದಷ್ಟು ಸೈನಿಕರ ಹೆಂಡಿರು, ಮಿತ್ರರಾಜರ ಹೆಂಡಿರೂ ಮುಂಡೆಯರಾಗಿದ್ದಾರೆ. ದೇವಿ, ಹಲವಾರು ದೇಶಗಳ ತಮ್ಮ ತಮ್ಮ ಮನೆಗಳಲ್ಲಿ ಕೂತೋ ಹೊಲಗದ್ದೆಗಳಲ್ಲಿ ದುಡಿಯುತ್ತಲೋ ಇರುವ ಈ ಅಸಂಖ್ಯ ಹೆಂಗಸರ ವೈಧವ್ಯವು ಒಂದೇ ಕದನ ಕ್ಷೇತ್ರದಲ್ಲಿ ಯಾವ ಕ್ರಮದಲ್ಲಿ ಉಂಟಾಯಿತೆಂಬುದನ್ನು ಕೇಳೋಣ.'

ವಿದುರನ ಮಾತಿನಿಂದ ಗಾಂಧಾರಿ ಶಾಪವನ್ನು ನಿಲ್ಲಿಸಿದಳು. ಅವಳ ಕೆಂಪು ಮುಖವು ಇನ್ನೂ ಕೆಂಚಗಾದದ್ದು ದೀಪದ ಬೆಳಕಿನಲ್ಲಿ ಅವರಿಬ್ಬರಿಗೂ ಕಾಣುತ್ತಿತ್ತು. 'ಸಂಜಯ ಮುಂದೆ ಹೇಳು' ವಿದುರ ಆದೇಶವಿತ್ತ.

'ನಮ್ಮವರು ಎಷ್ಟು ಜನ ಸತ್ತರು ಅಂತ! ಮದ್ರರಾಜ ಶಲ್ಯನ ಒಬ್ಬ ಮಗ ಸತ್ತು ಬಿದ್ದ. ಉಳಿದೆಷ್ಟು ರಾಜಕುಮಾರರು ವೃಂದಾರಕ ಅನ್ನುವ ಒಬ್ಬ ರಾಜ. ಆಮೇಲೆ ಅಶ್ವಕೇತು, ಶತ್ರುಂಜಯ, ಚಂದ್ರಕೇತು, ಮೇಘವೇಗ, ಸುವರ್ಚ, ಸೂರ್ಯಭಾಸ ಇನ್ನು ಯಾರು ಯಾರೋ ಎಷ್ಟು ಹೆಸರು ಅಂತ ನೆನಪಿನಲ್ಲಿಟ್ಟುಕೊಳ್ಳಲಿ? ಹಾಂ ಮುಖ್ಯವಾದವನ್ನೇ ಮರೆತಿದ್ದೆ. ದುರ್ಯೋಧನ ಮಹಾರಾಜನ ಮಗ ಲಕ್ಷ್ಮಣ. ಆಮೇಲೆ, ಆಮೇಲೆ...'

'ನನ್ನ ಮೊಮ್ಮಗ ಲಕ್ಷ್ಮಣನೇ?'–ಧೃತರಾಷ್ಟ್ರ ಗಟ್ಟಿಯಾಗಿ ಕೂಗಿಕೊಂಡ. ತಾನು ಯಾರಿಗೆ ಹೇಳುತ್ತಿದ್ದೇನೆಂಬುದನ್ನು ಮರೆತು ತಲ್ಲೀನನಾಗಿದ್ದ ಸಂಜಯ, 'ಹೌದು, ಆಮೇಲೆ ಈ ಹುಡುಗರ ದಳದ ಹೊಡೆತವನ್ನು ತಾಳಲಾರದೆ ಶಕುನಿ ಒಂದು ಸೂಚನೆ ಕೊಟ್ಟ...'

'ನಿಲ್ಲಿಸು, ನಿಲ್ಲಿಸು, ಸಂಜಯ ವರದಿಯನ್ನು ನಿಲ್ಲಿಸು'– ಧೃತರಾಷ್ಟ್ರ ಇನ್ನೊಮ್ಮೆ ಕೂಗಿಕೊಳ್ಳುವಾಗ ಗಾಂಧಾರಿ ಎರಡು ತುಟಿಗಳನ್ನೂ ಕೂಡಿಸಿ ಬಿಗಿಹಿಡಿದು ಅಳುತ್ತಿದ್ದಳು.

ಸಂಜಯ ಥಕ್ಕನೆ ನಿಲ್ಲಿಸಿದ. ಧೃತರಾಷ್ಟ್ರ ಮೂಕನಾದ. ಒಳಗೇ ಅಳುತ್ತಿದ್ದ ಗಾಂಧಾರಿ ನಿಶ್ಶಬ್ದಳಾಗಿದ್ದಳು.

ಸ್ವಲ್ಪ ಹೊತ್ತಿನ ನಂತರ ಧೃತರಾಷ್ಟ್ರ ಹೇಳಿದ: 'ಆ ಅಭಿಮನ್ಯು ಹೇಗೆ ಸತ್ತ ಅನ್ನುವುದನ್ನು ಹೇಳಿ ಮುಗಿಸಿಬಿಡು.'

ಸಂಜಯ ಹೇಳಿ ಮುಗಿಸಿದಾಗ ಧೃತರಾಷ್ಟ್ರ ನಿಟ್ಟುಸಿರಿಟ್ಟ. ಗಾಂಧಾರಿ ಹಿಡಿದಿದ್ದ ತುಟಿಗಳನ್ನು ಸಡಿಲಿಸಿದಳು.

'ಭೀಮ ನುಗ್ಗಿ ಮಹಾರಾಜನ ಪುತ್ರರುಗಳನ್ನು ಕೊಲ್ಲುತ್ತಾನೆ. ಹೀಗೆ ಇದುವರೆಗೆ ಮೂವತ್ತೊಂದು ಜನರನ್ನು ಚಚ್ಚಿ ಬಿಸಾಕಿದ್ದಾನೆ. ಅದರಲ್ಲಿ ಚಕ್ರವ್ಯೂಹದ ದಿನ ಒಟ್ಟು ಹದಿಮೂರು. ಶತ್ರುಂಜಯ, ಶತ್ರುಸಹ, ಚಿತ್ರಬಾಣ, ಚಿತ್ರಾಯುಧ ಹೀಗೆ ಎಂಟು ಜನರ ಒಂದು ಗುಂಪು. ಅಲ್ಲದೆ ದುರ್ಜಯ, ದುರ್ಮುಖ, ದುರ್ಮರ್ಷಣ, ದುಸ್ಸಹ, ದುರ್ಮದ ಈ ಐವರ ಇನ್ನೊಂದು ಗುಂಪು ಅಲ್ಲಿಂದ ಮುಂದೆ.'



## ಅವನಿಗೆ 3 ತಿಂಗಳಾದಾಗ, ಹಾಲು ಒಂದೇ ಸಾಕಾಗುವುದಿಲ್ಲ

# ನಿಮ್ಮ ಮಗುವಿಗೆ ಬೇಕು ಫೆರೆಕ್ಸ್

## ಮಗುವಿನ ಆದರ್ಶ ಘನ ಆಹಾರ

### 3 ತಿಂಗಳು—ಘನ ಆಹಾರ ಕೊಡಲು ಸಮಯ.

3 ತಿಂಗಳಾದಾಗ, ಮಗುವಿನ ಬೆಳೆಯುತ್ತಿರುವ ಬೇಡಿಕೆಗಳಿಗೆ ಹಾಲು ಒಂದೇ ಸಾಕಾಗುವದಿಲ್ಲ. ಮಗು ನಲಿದಾಡುತ್ತದೆ ಮತ್ತು ತ್ವರಿತಗತಿಯಿಂದ ಬೆಳೆಯುತ್ತದೆ. ಹಾಲು ಒದಗಿಸುವದಕ್ಕಿಂತ ಹೆಚ್ಚು ಕ್ಯಾಲೊರಿಗಳು ಬೇಕಾಗುತ್ತವೆ. ನಿಮ್ಮ ಮಗುವಿಗೆ ದ್ರವರೂಪಿ ಆಹಾರ ಕಡಿಮೆಗೊಳಿಸುವಂತಹ, ಕೇಂದ್ರೀಕೃತ ರೂಪದಲ್ಲಿ ಹೆಚ್ಚು ಕ್ಯಾಲೊರಿ ಕೊಡುವಂತಹ ಮತ್ತು ಅಗಿದು ತಿನ್ನಲು ಕಲಿಸುವಂತಹ ಘನ ಆಹಾರದ ಅವಶ್ಯಕತೆ ಇರುತ್ತದೆ.

### 3 ತಿಂಗಳು—ಹೆಚ್ಚು ಕಬ್ಬಿಣ ಸತ್ವ ಬೇಕಾಗುವ ಸಮಯ

"ಮಗುವಿಗೆ ಘನ ಆಹಾರವನ್ನು ಕೊಡಲು ಪ್ರಾರಂಭಿಸಲು ಆದರ್ಶ ಸಮಯವೆಂದರೆ 2-4 ತಿಂಗಳು. ಹಾಲು ಒಳ್ಳೆಯ ಆಹಾರವಾದರೂ, ಇದು ಸಂಪೂರ್ಣ ಆಹಾರವಲ್ಲ. ಯಾಕೆಂದರೆ ಇದರಲ್ಲಿ ಕಬ್ಬಿಣ ಸತ್ವ ಅಲ್ಪವಿದೆ. ಈ ಕಾರಣದಿಂದ ಮಗುವಿಗೆ ಕಬ್ಬಿಣ ಸತ್ವವುಳ್ಳ ಘನ ಆಹಾರದ ಅವಶ್ಯಕತೆ ಇದೆ."

—ಡಾ. ಸುಭಾಷ್. ಸಿ. ಆರ್ಯ:
"ಇನ್‌ಫಂಟ್ ಅಂಡ್ ಚೈಲ್ಡ್‌ಕೇರ್ ಫಾರ್ ದಿ ಇಂಡಿಯನ್ ಮದರ್."

### ಡಾಕ್ಟರರು ಫೆರೆಕ್ಸ್ ಶಿಫಾರಸು ಮಾಡುತ್ತಾರೆ, ಏಕೆ?

ಕ್ರಮೇಣ ಘನ ಆಹಾರವನ್ನು ಪ್ರಾರಂಭಿಸಲಿಕ್ಕಾಗಿ ವಿಶೇಷವಾಗಿ ತಯಾರಿಸಿದ ಘನ ಆಹಾರ ಫೆರೆಕ್ಸ್. ಇದರಲ್ಲಿ ಕಾರ್ಬೋಹೈಡ್ರೇಟ್ಸ್, ಫ್ಯಾಟ್ಸ್, ಕ್ಯಾಲ್ಸಿಯಮ್, ಫಾಸ್‌ಫರಸ್ ಹಾಗೂ ವಿಟಮಿನ್‌ಗಳಿವೆ. ಫೆರೆಕ್ಸ್ ಕಬ್ಬಿಣ ಸತ್ವದಿಂದಲೂ ತುಂಬಿದೆ. ಈ ಕಾರಣಗಳಿಂದ, ಮಗುವಿನ ಸರ್ವಾಂಗೀಣ ಬೆಳವಣಿಗೆಗೆ ಫೆರೆಕ್ಸ್ ಆದರ್ಶ ಘನ ಆಹಾರವಾಗಿದೆ.

**ಉಚಿತ!** ಮಗುವಿನ ಮೊದಲ ವರ್ಷದ ಕುರಿತಾದ ಪುಸ್ತಿಕೆ—ಹೊಸ ತಾಯಂದಿರಿಗೆ ಶಿಶು ರಕ್ಷಣೆಯ ವಿಷಯದಲ್ಲಿ ಸರಳ ಮಾರ್ಗದರ್ಶನ. ಇದರ ಪ್ರತಿಯನ್ನು ಉಚಿತವಾಗಿ ಪಡೆಯಲು, ಅಂಚೆವೆಚ್ಚಕ್ಕಾಗಿ 50 ಪೈಸೆ ಸ್ಟ್ಯಾಂಪಿನೊಂದಿಗೆ ಬರೆಯಿರಿ:

**ಪಿ. ಓ. ಬಾಕ್ಸ್ ನಂ. 19119, (FAR93T)**
**ಬೊಂಬಾಯಿ-400 025.**




## ಡಾಕ್ಟರರು ಶಿಫಾರಸು ಮಾಡುತ್ತಾರೆ—ಫೆರೆಕ್ಸ್
## ಮಗುವಿನ ಆದರ್ಶ ಘನ ಆಹಾರ—ಶೀಘ್ರ ಸರ್ವಾಂಗೀಣ ಬೆಳವಣಿಗೆಗಾಗಿ

CASGLF-19-163 Kan

'ಓ ಐವರೂ ನನ್ನ ಮಕ್ಕಳು'–ಎಂದು ಗಾಂಧಾರಿ ಗಟ್ಟಿಯಾಗಿ ಕಿರುಚಿಕೊಂಡಳು. ಸಂಜಯ ವಿದುರರು ಅತ್ತ ತಿರುಗಿ ನೋಡಿದರು. ಕಿರುಚುವ ಉಸುರಿನ ಕೊನೆಗೆ ಅವಳು ಪಲ್ಲಂಗದ ಮೇಲೆ ಉರುಟಿಕೊಂಡು ದೊಪ್ಪನೆ ಬಿದ್ದಳು; 'ನನ್ನ ಮಕ್ಕಳು...' ಎಂದು ಬಾಯಿ ತೆಗೆದಿದ್ದ ಧೃತರಾಷ್ಟ್ರ ತಕ್ಷಣ ಬಾಗಿ ಅವಳನ್ನು ತಬ್ಬಿಕೊಂಡ. ಅವನಿಗೂ ಉಸಿರು ಹಿಡಿದಂತೆ ಕಂಡಿತು.

'ಸಂಜಯ, ಈ ಯುದ್ಧವನ್ನು ನಿಲ್ಲಿಸಲು ಸಾಧ್ಯವಿಲ್ಲವೆ?' ಗಾಂಧಾರಿಯ ಗಂಟಲು ಹೂತುಹೋಗಿತ್ತು.

'ಈಗ ಸಾಧ್ಯವೇ ಇಲ್ಲ. ಇದುವರೆಗೆ ಬರೀ ರಾಜ್ಯದ ಪ್ರಶ್ನೆಯಾಗಿತ್ತು. ಈಗ ಅರ್ಜುನನ ಮಗ ಸತ್ತಿದ್ದಾನೆ. ಭೀಮನ ಮಗ ಸತ್ತಿದ್ದಾನೆ. ಇತ್ತ ದುರ್ಯೋಧನ ಮಹಾರಾಜನ ಮಗನೂ ಸತ್ತಿದ್ದಾನೆ. ಅಪ್ಪನನ್ನು ಯಾರಾದರೂ ಕೊಂದಾಗ ಹುಟ್ಟುವ ರೋಷಕ್ಕಿಂತ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ಕೊಂದಾಗ ಸಿಡಿಯುವ ರೋಷವು ದಮನಿಸಲು ಸಾಧ್ಯವಿಲ್ಲದ್ದು ಅಲ್ಲವೆ? ಅಲ್ಲದೆ ಅವರ ಕಡೆಯ ಸೇನಾಪತಿ ಧೃಷ್ಟದ್ಯುಮ್ನನ ಅಪ್ಪ ದ್ರುಪದನೂ ಸತ್ತಿದ್ದಾನೆ. ಆದ್ದರಿಂದ ಪಾಂಡವರು ಒಪ್ಪಿದರೂ ಅವರ ಸೇನಾಪತಿ ಒಪ್ಪುವುದಿಲ್ಲ. ಆ ಸೇನೆಯ ಪ್ರಧಾನ ಭಾಗ ಅವನದೇ. ಪಾಂಡವರು ಒಪ್ಪುವುದೂ ಸಾಧ್ಯವಿಲ್ಲ. ದರ್ಯೋಧನ ಮಹಾರಾಜನಂತೂ ಮಗ ಸತ್ತ ನಂತರ ಸರ್ಪದಂತೆ ಬುಸುಗುಟ್ಟುತ್ತಿದ್ದಾನೆ.'

'ಹಾಗಾದರೆ ನಾವೀಗ ಏನು ಮಾಡಬಹುದು?'

'ನಾನು ಸಂಗ್ರಹಿಸಿ ತಂದು ಹೇಳುವ ವರದಿಯನ್ನು ಕೇಳಬಹುದು.' ಗಾಂಧಾರಿ ಪ್ರತಿ ಮಾತನಾಡಲಿಲ್ಲ. ಸಂಜಯನೂ ಮಾತನಾಡಲಿಲ್ಲ. ಧೃತರಾಷ್ಟ್ರ ಸುಮ್ಮನಿದ್ದ. ವಿದುರ ಕಂಬ ಒರಗಿ ಮೌನವಾಗಿದ್ದ. ಎಣ್ಣೆ ಸಾಲದಾಗಿ ದೀಪ ಮಂಕಾಗುತ್ತಿತ್ತು. ಧೃತರಾಷ್ಟ್ರ ಎಂದ: 'ವಾಸನೆ ಬರುತ್ತಿದೆ. ದೀಪ ಉರಿಯುತ್ತಿದೆಯೆ ದಾಸೀ?'

ದಾಸಿ ಹೊರಗೆ ನಡೆದ ಸಪ್ಪಳ ಕೇಳಿಸಿತು. ಧೃತರಾಷ್ಟ್ರನ ಮನಸ್ಸೆಲ್ಲ ಎಣ್ಣೆ ತೀರುತ್ತಿರುವ ವಾಸನೆಯತ್ತ ಹರಿದು ನಿಂತುಬಿಟ್ಟಿತು. ಮೊದಲಿನಿಂದಲೂ ಅಷ್ಟೆ, ಆ ವಾಸನೆಯು ಅವನಿಗೆ ಮುಜುಗರ ಆತಂಕಗಳನ್ನುಂಟುಮಾಡುತ್ತಿತ್ತು. ಅದರಿಂದ ತಪ್ಪಿಸಿಕೊಳ್ಳಲೆಂಬಂತೆ ಕೇಳಿದ: 'ನನ್ನ ಅಳಿಯ ಜಯದ್ರಥನನ್ನು ಕೊಂದೇ ತೀರುವೆನೆಂದು ಅರ್ಜುನ ಶಪಥ ಮಾಡಿದುದು ಮೊದಲೇ ತಿಳಿಯಿತು ಎಂದು ಕೂಡ ಹೇಳಿದೆ. ಸತ್ತವರ ಪೈಕಿ ಜಯದ್ರಥನ ಹೆಸರನ್ನೂ ಹೇಳಿದೆ. ನಮ್ಮವರು ಮುನ್ನೆಚ್ಚರಿಕೆ ವಹಿಸಲಿಲ್ಲವೇ? ದುರ್ಯೋಧನನಿಗೆ ತಂಗಿ ಎಂದರೆ ತುಂಬ ಅಂತಃಕರಣವಿದೆ.'

'ಇದೆ. ಭಾವಮೈದುನರಲ್ಲಿ ಕೂಡ ಪರಸ್ಪರ ಪ್ರೀತಿ ಸಲಿಗೆಗಳಿದ್ದುವು. ಜಯದ್ರಥ ಮಹಾರಾಜನು ದ್ರೌಪದಿಯನ್ನು ಹೊತ್ತುಕೊಂಡು ಹೋಗುತ್ತಿದ್ದಾಗಲೇ...' ಎಂಬ ವಾಕ್ಯದ ನಡುವೆ ಗಾಂಧಾರಿ ಬಾಯಿ ಹಾಕಿ, 'ಯಾವಾಗ? ಏನದು ಸಂಗತಿ?' ಎಂದಳು.

'ಇನ್ನೂ ಎರಡು ವರ್ಷ ಕೂಡ ಆಗಿಲ್ಲವಂತೆ. ಪಾಂಡವರು ಅಜ್ಞಾತವಾಸಕ್ಕೆ ಹೊರಡುವ ಕೆಲವು ತಿಂಗಳುಗಳ ಮುಂಚೆ ಒಂದು ಸಲ ಜಯದ್ರಥ ಮಹಾರಾಜನು ಆ ಕಾಡಿಗೆ ಹೋಗಿ ಗಂಡಸರಿಲ್ಲದ ಸಮಯ ಸಾಧಿಸಿ ದ್ರೌಪದಿಯನ್ನು ಹೊತ್ತುಕೊಂಡು ಹೋಗುತ್ತಿದ್ದನಂತೆ. ನಡುವೆ ಓಡಿ ಬಂದ ಪಾಂಡವರು ಮಹಾರಾಜನನ್ನು ಸೆರೆ ಹಿಡಿದು, ಭೀಮನು ಅವನನ್ನು ಕೊಲ್ಲುತ್ತಿದ್ದನಂತೆ. ಅವರ ಮನೆಯ ಅಳಿಯ ಅಂತ ತಲೆಯ ಮೇಲೆ ಬರೀ ಮೂರು ಪಟ್ಟೆ ತೆಗೆಸಿ ಅವಮಾನ ಮಾಡಿ ಕಳಿಸಿದರಂತೆ. ಆ ಸಿಟ್ಟಿಗೆ...' ಎನ್ನುತ್ತಿರುವಾಗ 'ಅದು ಹೇಗೆ ಸಾಧ್ಯ? ಅವಳ ವಯಸ್ಸೇನು? ನನ್ನ ಅಳಿಯನ ವಯಸ್ಸೇನು! ಆಗ ಮೂವತ್ತೈದು ಮೂಹತ್ತಾರಲ್ಲವೆ ಇವನಿಗೆ, ಅವಳು ಐವತ್ತರ ಹತ್ತಿರ ಹತ್ತಿರದವಳು' ಎಂದು ಗಾಂಧಾರಿ ತಡೆದಳು.

'ಅದೆಲ್ಲ ನನಗೇನು ಗೊತ್ತು! ನನಗೆ ಕೂಡ ಏನೂ ತಿಳಿದಿರಲಿಲ್ಲ. ಸುದ್ದಿ ಸಂಗ್ರಾಹಕರು ಹೀಗಿದೆ ಹಿನ್ನೆಲೆ ಎಂದು ಹೇಳಿದ್ದಷ್ಟೆ.'

ಗಾಂಧಾರಿ ಸುಮ್ಮನಾದಳು. ಮಾತಿನ ಸರಣಿ ತಪ್ಪಿದಂತಾಗಿ ಸಂಜಯನೂ ಸುಮ್ಮನಾದ.

'**ಸಂ**ಜಯ, ನೀನು ಬರುಬರುತ್ತಾ ಹೆಚ್ಚು ಹೆಚ್ಚು ನಿಷ್ಠುರನಾಗುತ್ತಿದ್ದೀಯ, ಯಾಕೆ?'

'ಹಾಗೇಕೆ ಅನ್ನುತ್ತೀ ಮಹಾರಾಜ?'

'ಕೇಳುತ್ತಿರುವ ನನ್ನ ಮತ್ತು ಈ ದೇವಿಯ ಗತಿ ಏನಾಗುವುದೆಂಬುದನ್ನು ಲೆಕ್ಕಿಸದೆ ನಿಷ್ಠುರ ಸಂಗತಿಗಳನ್ನೇ ಹೇಳುತ್ತಿದ್ದೀಯ.'

'ನಾನೊಬ್ಬ ವರದಿಗಾರ. ಘಟನೆಯಲ್ಲಿಲ್ಲದ ಪ್ರಿಯವನ್ನು ವರದಿಯಲ್ಲಿ ಹೇಗೆ ಹುಟ್ಟಿಸಲಿ?'

'ಹೇಗೂ ನನ್ನ ಮಗ ಸೋಲುತ್ತಿದ್ದಾನೆಂದು ನಿನಗೂ ತಾತ್ಸಾರ ಬಂತೋ ಅಂತ.'

'ಹಾಗೆ ತಿಳಿಯಬೇಡ. ನಿನಗೆ ಬೇಡವಾದರೆ ವರದಿಯನ್ನು ನಿಲ್ಲಿಸಿಬಿಡುತ್ತೇನೆ.'

'ಬೇಕು, ಬೇಕು. ಪ್ರತ್ಯಕ್ಷ ನೋಡಲು ಸಾಧ್ಯವಿಲ್ಲದವರಿಗೆ ವರದಿಯೂ ಇಲ್ಲದಿದ್ದರೆ ಗತಿ ಏನು?'

'ಹಾಗಾದರೆ ಮುಂದುವರಿಸಲೆ? ನಾನು ಏನು ಹೇಳುತ್ತಿದ್ದೆ?'

ಧೃತರಾಷ್ಟ್ರನಿಗೆ ನೆನಪು ಬರಲಿಲ್ಲ, ವಿದುರ ಜ್ಞಾಪಿಸಿದ: 'ದುರ್ಯೋಧನನ ತಪ್ಪಿನಿಂದ ಭಾರೀ ಅನಾಹುತವಾಯಿತು.'

'ಕರ್ಣ ಮತ್ತು ದ್ರೋಣರಿಗೆ ಬಿರುಸು ಮಾತಿನ ಜಗಳ ಪ್ರಾರಂಭವಾಯಿತು. ಆದರೆ ಅಷ್ಟರಲ್ಲಿ ದುರ್ಯೋಧನ ಮಹಾರಾಜನೇ ಇಬ್ಬರಿಗೂ ಸಮಾಧಾನ ಹೇಳಿ, ಒಗ್ಗಟ್ಟಿನಿಂದಲೇ ಬಲ, ಅದನ್ನು ಕಳೆದುಕೊಳ್ಳಬಾರದು ಎಂದು ತಿಳಿಸಿ ಇನ್ನು ಮುಂದೆ ಸೇನಾಪತಿಗೆ ತಿಳಿಸದೆ ಇಂಥದೇನೂ ಮಾಡುವುದಿಲ್ಲ ವೆಂದು ಆಶ್ವಾಸನೆ ಕೊಟ್ಟನಂತೆ. ದ್ರೋಣರು ದೂರ ಹೋದ ಮೇಲೆ ಕರ್ಣ ಮಹಾರಾಜನನ್ನು ಬಿಗಿಯಾಗಿ ತಬ್ಬಿಕೊಂಡು ಕಣ್ಣಂಚಿನಲ್ಲಿ ನೀರು ತುಂಬಿ ಕೊಂಡನಂತೆ...'

'ಕರ್ಣ, ನಾನು ಹೆತ್ತದ್ದು ಹದಿನಾಲ್ಕು ಗಂಡು ಮಕ್ಕಳಲ್ಲ, ಹದಿನೈದು'– ಗಾಂಧಾರಿ ಎಷ್ಟೋ ಹೊತ್ತಿನ ನಂತರ ಬಾಯಿ ತೆರೆದಳು.

'ಹೌದು ದೇವಿ, ಆ ರಾತ್ರಿಯ ಯುದ್ಧವನ್ನು ಗೆದ್ದವನು ಕರ್ಣ ಮಹಾರಾಜನೇ. ಈಗ ಅದನ್ನೇ ಹೇಳಲು ಹೊರಟಿದ್ದೆ.'

'ಹೇಳು, ಹೇಳು. ಕರ್ಣನ ಪ್ರತಾಪವನ್ನು ಕೇಳಿದರೆ ನನಗೆ ದುರ್ಯೋಧನನ ಪ್ರತಾಪವನ್ನು ಕೇಳಿದಷ್ಟೇ ಸಂತೋಷವಾಗುತ್ತದೆ' ಎಂದು ಕೂಡಿಸಿದ ಗಾಂಧಾರಿ, ಅದುವರೆಗಿನ ಮ್ಲಾನತೆಯನ್ನು ಸ್ವಲ್ಪ ನೀಗಿಕೊಂಡು ಉತ್ಸಾಹ ತೋರಿಸಿದಳು.

'...ಮತ್ತೆ ನಿನ್ನ ಹತ್ತು ಜನ ಮಕ್ಕಳ ಶಿರವನ್ನು ಕತ್ತರಿಸಿ ನಮ್ಮ ಸೇನೆಯ ನಡುವೆ ಬೀಳುವಂತೆ ಎಸೆದ ನಂತರ, ಇದುವರೆಗೆ ಎಷ್ಟು ತಲೆಗಳಾದವೋ ನನಗೆ ಸರಿಯಾಗಿ ನೆನಪಿಲ್ಲ, ಅವನು ತನ್ನ ದಳದೊಡನೆ ದುಶ್ಶಾಸನನ ಮೇಲೆ ಬಿದ್ದ,' ಎಂದು ಹೇಳುತ್ತಾ ಭೀಮ ದುಶ್ಶಾಸನರ ಘೋರ ಯುದ್ಧದ ವಿವರಣೆಯನ್ನು ಕೊಟ್ಟು 'ರಥದ ಮೇಲುಮುಚ್ಚಳದ ಮೇಲೆ ಹತ್ತಿ ನಿನಗೆ ವರದಿ ಮಾಡಲೆಂದು ದೃಶ್ಯವನ್ನು ನೋಡುತ್ತಿದ್ದ ನಾನು ಸರಸರನೆ ಇಳಿದು ಧುಮುಕಿ ಓಡಿ ಜೀವ ಉಳಿಸಿಕೊಳ್ಳದಿದ್ದರೆ ಈಗ ನಿನಗೆ ಇದನ್ನು ಹೇಳುವವರು ಯಾರೂ ಇರುತ್ತಿರಲಿಲ್ಲ' ಎನ್ನುತ್ತಾ ಸಂಜಯ ಅತ್ತ ನೋಡಿದ.

ಹಣತೆಯ ಮಂಕು ಬೆಳಕಿನಲ್ಲಿ ಇದುವರೆಗೂ ಅವನ ದೃಷ್ಟಿ ಗಾಂಧಾರಿಯ ಕಡೆಗೆ ತಿರುಗಿರಲಿಲ್ಲ. ಕೇಳುತ್ತಾ ನಡುವೆ ಅವಳು ಮಲಗಿಬಿಟ್ಟಿದ್ದಳು. ಅವಳಿಗೆ ಪ್ರಜ್ಞೆ ತಪ್ಪಿರಬಹುದೇ ಎಂಬ ಆತಂಕದಿಂದ ಅವನು ಎದ್ದು ಹತ್ತಿರ ಹೋಗಿ ಕೈ ಹಿಡಿದು ಅಲುಗಿಸಿ, 'ದೇವಿ, ಮಹಾರಾಣಿ, ಎಚ್ಚರವಾಗಿರುವೆಯಾ?' ಎಂದ. ಕಂಬ ಒರಗಿ ಕುಳಿತಿದ್ದ ವಿದುರ ಕೂಡ ಎದ್ದು ಬಂದ. ಧೃತರಾಷ್ಟ್ರ ಗೂಟದಂತೆ ಕುಳಿತಿದ್ದ. ಗಾಂಧಾರಿ ತಕ್ಷಣ ಮಾತನಾಡಲಿಲ್ಲ. ಆದರೆ ಕೈಕಾಲು ಆಡಿಸಿದಳು. ಉಳಿದವರಿಗೆ ಹಗುರವೆನ್ನಿಸಿತು. ಸ್ವಲ್ಪ ಹೊತ್ತಿನ ನಂತರ ಕಿರುಚಿಕೊಂಡಳು. 'ಅಯ್ಯೋ ನನ್ನ ದುರ್ಯೋಧನನ ತೊಡೆ ಮುರಿದು ಹಾಕಿದ ಪಾಪೀ?'

'ದೇವಿ, ಮಹಾರಾಣಿ, ಯಾಕೆ ಹಾಗೆ ಕಿರುಚಿಕೊಂಡೆ? ಕರ್ಣ ಸತ್ತ ನಂತರ ಏನಾಯಿತೆಂದು ನನಗೂ ಗೊತ್ತಿಲ್ಲ. ನಾನು ಅಲ್ಲಿಂದ ಹೊರಟಾಗ ದುರ್ಯೋಧನ ಮಹಾರಾಜ ಕ್ಷೇಮವಾಗಿಯೇ ಇದ್ದ.'

ಅವಳು ತಕ್ಷಣ ಮಾತನಾಡಲಿಲ್ಲ. ಸಂಜಯ ಮತ್ತೆ ಭುಜ ಹಿಡಿದು ಅಲುಗಿಸಿದ ನಂತರ

# ಇದೋ! ಕಡು ಮತ್ತು ತೃಪ್ತಿಕರ ಟೀ!

## ಲಿಪ್ಟನ್ ಟಾಪ್ ಸ್ಟಾರ್ ಟೀ

ಕಡುವಾದ ಮತ್ತು ರುಚಿಕರವಾದ ಟೀ ಬೇಕೆಂದು ನೀವು ನಿರೀಕ್ಷಿಸುತ್ತಿದ್ದರೆ ಈಗ ಇದೋ ಅದು ಇಲ್ಲಿದೆ. ಹೊಸ ಲಿಪ್ಟನ್ ಟಾಪ್ ಸ್ಟಾರ್ ಟೀ ಬಹಳ ಕಡುವಾದ ಟೀಯನ್ನೇ ಮೆಚ್ಚುವ ನಿಮ್ಮಂತಹವರಿಗಾಗಿ. ರಫ್ತು ಮಾಡುವ ಅತ್ಯುತ್ತಮ ಗುಣಮಟ್ಟದ ಡಸ್ಟ್ ಟೀಗಳಿಂದ ಮಿಶ್ರಣ ಮಾಡಲಾಗಿದೆ. ಇಂದೇ ಲಿಪ್ಟನ್ ಟಾಪ್ ಸ್ಟಾರ್ ಟೀಯನ್ನು ಪಡೆಯಿರಿ. ಪೂರ್ಣವಾಗಿ ಫಾಯಿಲ್ ಪ್ಯಾಕ್‌ನಲ್ಲಿರುವುದರಿಂದ ಸದಾ ತಾಜಾತನವಿದ್ದು ನಿಮಗೆ ಕಡುವಾದ ಚಹವನ್ನು ನೀಡುವುದು.




**ಕಡು ಮತ್ತು ತೃಪ್ತಿಕರ**

ನಿಧಾನವಾಗಿ, 'ಭೀಮ ತೀರಿಸಿಕೊಳ್ಳಬೇಕಾದ ಶಪಥ ಅದೊಂದೇ ಅಲ್ಲವೆ?' ಎಂದು ಕನವರಿಸಿದಳು.

ಹದಿನೆಂಟು ದಿನಗಳ ಯುದ್ಧ ಮುಗಿದು ಕೌರವರೆಲ್ಲ ನಾಶವಾಗಿ ಕೃಪಾಚಾರ್ಯರು ಯುದ್ಧ ರಂಗದಿಂದ ತಿರುಗಿ ಹಸ್ತಿನಾವತಿಗೆ ಬಂದರು. ಕೃಪಾಚಾರ್ಯರು ಊರಿಗೆ ಬಂದಿದ್ದಾರೆಂದು ಒಬ್ಬ ದಾಸಿ ಹೇಳಿದಳು. ಆಗ 'ಕರಕಂಡು ಬಾ, ಓಡಿ ಹೋಗು. ಸಂಜಯನ ತಲೆಯೇ ಇಲ್ಲ'– ಎಂದು ಧೃತರಾಷ್ಟ್ರ ಓಡಿಸಿದ. ಗಾಂಧಾರಿ ಪಲ್ಲಂಗದ ಮೇಲೆ ಮಲಗಿದ್ದಳು. ಸ್ವಲ್ಪ ಹೊತ್ತಿಗೆ ದಾಸಿ ಹಿಂದಿರುಗಿದಳು. 'ಬಂದರು'– ಎಂದಳು. 'ಆಚಾರ್ಯ, ಬಾ, ಬಾ, ಸೀದಾ ಅರಮನೆಗೆ ಬರದೆ ಎಲ್ಲಿದ್ದೆ?'–ಎಂದು ಧೃತರಾಷ್ಟ್ರ ಕೇಳಿದ.

'ಅಂಗಳದಲ್ಲಿ ಬರುತ್ತಿದ್ದಾರೆ. ಸುಸ್ತಾಗಿದ್ದಾರೆ ಬೇಗ ನಡೆಯುವ ಶಕ್ತಿ ಇಲ್ಲ' ದಾಸಿ ಉತ್ತರಿಸಿದಳು.

ಅವರು ಬಂದು, 'ಮಹಾರಾಜ ಚಿರಾಯು ವಾಗಲಿ' ಎಂದು ಆಶೀರ್ವಾದ ಮಾತು ಹೇಳಿದ ತಕ್ಷಣ ಕುಸಿದಂತೆ ಕುಳಿತುಬಿಟ್ಟರು.

'ಆಚಾರ್ಯ, ಯುದ್ಧರಂಗದಿಂದ ಬಂದಿರ ಬೇಕು ನೀನು. ನಾನು ಸುದ್ದಿಗಾಗಿ ತಪಿಸು ತ್ತಿದ್ದೇನೆ. ನಿನಗೆ ತಿಳಿದದ್ದನ್ನೆಲ್ಲ ಬೇಗ ಹೇಳು.'

'ಮೊದಲಿನಿಂದಲೇ ಹೇಳಬೇಕೆ?'

'ಬೇಡ ಬೇಡ. ದುಶ್ಶಾಸನ ಕರ್ಣರು ಸತ್ತದ್ದು ಗೊತ್ತಾಯಿತು. ಆಮೇಲೆ ಶಕುನಿ ಶಲ್ಯರು ಸತ್ತದ್ದು ತಿಳಿಯಿತು. ಮುಂದೆ ಏನಾಯಿತು?'

'ಶಕುನಿ ಶಲ್ಯರು ಸತ್ತ ಮೇಲೆ ಯುದ್ಧವೇ ಆಗಲಿಲ್ಲ. ಆಗುವುದಕ್ಕೆ ಏನಾದರೂ ಉಳಿದಿದ್ದರೆ ತಾನೆ? ಸೈನ್ಯ, ರಥ, ಕುದುರೆ, ಆನೆ ಏನಾದರೂ.'

'ದುರ್ಯೋಧನ ಶತ್ರುಗಳಿಗೆ ಸಿಕ್ಕಿದನೊ?'

'ಅದನ್ನೇ ಹೇಳುತ್ತೀನಿ.'

'ಅವನನ್ನು ಕೊಲ್ಲಲಿಲ್ಲ ತಾನೆ?'

'ಇಲ್ಲ.'

'ಹಾಗಾದರೆ ವಿವರವಾಗಿ ಹೇಳು. ದೇವಿ ಗಾಂಧಾರಿ. ದುರ್ಯೋಧನನನ್ನು ಕೊಲ್ಲಲಿಲ್ಲವಂತೆ. ಉಳಿದಿದ್ದಾನಂತೆ. ಕೇಳು ಕೇಳು. ನಮ್ಮ ವಂಶ ಪೂರ್ತಿ ಹಾಳಾಗಲಿಲ್ಲ.'

ಗಾಂಧಾರಿ ಎದ್ದು ಕುಳಿತಳು.

'ದೇವಿ, ಗಾಂಧಾರೀ, ಕೇಳಿದೆಯ? ಭೀಮ ದುಷ್ಟನಿರಬಹುದು, ಧೀರನಲ್ಲ. ನಿಶ್ಚಯವಾಗಿ ಎದುರು ನಿಂತ ನನ್ನ ಮಗನನ್ನು ಎದುರಿಸಲು ಗುಂಡಿಗೆ ಇಲ್ಲದವನು.'

ಕೃಪಾಚಾರ್ಯರು ಯುದ್ಧ ಮುಗಿದ ಎಲ್ಲ ಸುದ್ದಿ ಯನ್ನು ಹೇಳಿದಾಗ ಗಾಂಧಾರಿ ಮೌನವಾಗಿ ಮಲ ಗಿದ್ದಳು.

'ಮಹಾರಾಜ, ಈಗ ಕಟುವಚನದಿಂದ ಯಾವ ಪ್ರಯೋಜನವೂ ಇಲ್ಲ. ನೀನು ಅವರನ್ನೂ ನಿನ್ನ ಮಕ್ಕಳಂತೆ ಭಾವಿಸಿದ್ದರೆ ಈ ಯುದ್ಧ ವಾಗುತ್ತಿರಲಿಲ್ಲ. ಸಂಧಿಗೆ ಬಂದಾಗಲೇ ನಾನು ಈ ಮಾತು ಹೇಳಿದೆ. ಈಗಲಾದರೂ ನೀನು ಅವರಲ್ಲಿ ಪುತ್ರಭಾವವನ್ನು ತಳೆ. ನಿನ್ನ ಮೇಲಿನ ಕ್ರೋಧವನ್ನು ತೊಳೆದು ಹಾಕುವಂತೆ ನಾನು ಅವರ ಮನವೊಲಿಸುತ್ತೇನೆ. ಗೆದ್ದವರು ಕಹಿ ಯನ್ನು ಮರೆಯುವದು ಸುಲಭ' ಕೃಷ್ಣ ಹೇಳಿದ.

ಧೃತರಾಷ್ಟ್ರ ಕಲ್ಲಿನಂತೆ ಕುಳಿತಿದ್ದ. ಬೆಳಗಿನ ಸೂರ್ಯಕಿರಣ ಕಿಟಕಿಯಿಂದ ಬರುತ್ತಿತ್ತು. ಕೃಷ್ಣ ಮತ್ತೆ ಅದೇ ಮಾತನ್ನು ಒತ್ತಿ ಹೇಳಿದ ನಂತರ ರಾಜಿಯ ಧ್ವನಿಯಲ್ಲಿ ಹೇಳಿದ:

'ಹಾಗಾದರೆ ಈಗಲೂ ಸಂಧಿಯಾಗೋಣ. ಅವರು ಅವರ ಖಾಂಡವಪ್ರಸ್ಥಕ್ಕೆ ಹೋಗಲಿ.'

'ಹಸ್ತಿನಾವತಿಯನ್ನು ಆಳುವವರಾರು?'

'ನನ್ನ ಮಗ ಬರುತ್ತಾನೆ. ಸೈನ್ಯ ತರುತ್ತಾನೆ. ಅವರನ್ನು ನಿರ್ನಾಮ ಮಾಡುತ್ತಾನೆ. ನಿನ್ನ ಮಾತಿಗೆ ಬೆಲೆ ಕೊಟ್ಟು ನಾನು ಅವನನ್ನು ಶಾಂತಿಗೆ ಒಪ್ಪಿಸುತ್ತೇನೆ.'

'ಮಹಾರಾಜ ನಿನ್ನ ಭ್ರಮೆಯ ಶಕ್ತಿ ದೊಡ್ಡದು. ದುರ್ಯೋಧನ ಸತ್ತುಹೋಗಿದ್ದಾನೆ. ಅವನ ಸಾವನ್ನು ಭೀಮ ಮೊದಲು ನೋಡಿದ. ಅನಂತರ ನಾನು ಗುರುತಿಸಿದೆ. ಅದನ್ನು ಗುರು ತಿಸುವ ಅನುಭವ ನನಗಿರುವುದರಿಂದ ಹೇಳು ತ್ತಿದ್ದೀನಿ, ಅವನು ಬದುಕಿಲ್ಲ.'

ಧೃತರಾಷ್ಟ್ರ ಅಳಲಿಲ್ಲ. 'ಕೃಪಾಚಾರ್ಯ ಸುಳ್ಳು ಹೇಳಿದನೆಂದು ನನಗೆ ಗೊತ್ತಿತ್ತು'– ಗಾಂಧಾರಿ ಎಂದಳು.

'ಕೃಪಾಚಾರ್ಯ ಹೇಳಿದ ತನಕ ನಿಜ. ಮುಂದಿನದನ್ನು ನೀವು ಹಟ ಮಾಡಿದಮರುತೆ ನಿಮ್ಮ ದಾರಿಯಲ್ಲೇ ಅರ್ಥಮಾಡಿಕೊಂಡಿರಿ. ಹೋಗಲಿ, ಅವರನ್ನು ಕರೆತರಲೆ? ಅವರು ಹಸ್ತಿನಾವತಿಯನ್ನು ಪ್ರವೇಶಿಸುವುದನ್ನು ಇಲ್ಲವಾಗಿಸಲು ಯಾರಿಗೂ ಸಾಧ್ಯವಿಲ್ಲ. ದ್ವೇಷ ಸಾಧಿಸಹೊರಟ ನೀವಾದರೂ ಹೇಗೆ ಜೀವನ ನಿರ್ವಹಣೆ ಮಾಡುತ್ತೀರಿ?' ಕೃಷ್ಣ ಗಾಂಧಾರಿಯ ಕೈ ಹಿಡಿದು ಹೇಳಿದ.

ಸ್ವಲ್ಪ ಹೊತ್ತಿನ ನಂತರ ಗಾಂಧಾರಿ ಎಂದಳು, 'ಕೃಷ್ಣ, ಹೋಗಿ ಕರೆದು ತಾ. ನಾನು ಒಬ್ಬೊಬ್ಬ ರಾಗಿ ಅವರ ತಲೆಯನ್ನು ಸವರಿ ಹಳಿಯದನ್ನು ಮರೆಯಿರೆಂದು ಕೇಳುತ್ತೇನೆ.'

ಕೃಷ್ಣ ಹೋದ. ಧರ್ಮಜ ಬೇಗ ಒಪ್ಪಿದ. ಅರ್ಜುನನೂ ಒಪ್ಪಿದ. ನಕುಲ-ಸಹದೇವರು ಅಸಮ್ಮತಿ ಸೂಚಿಸಿದರೂ ಹಟ ಮಾಡಲಿಲ್ಲ. ಭೀಮ ಮಾತ್ರ ತಾನು ಬರುವುದೇ ಇಲ್ಲ ವೆಂದ. 'ಆ ಕುರುಡನಿಂದಲೇ ಇಷ್ಟೆಲ್ಲ ಆದದ್ದು. ಯುದ್ಧಕ್ಕೆ ಮುಂಚೆಯೇ ನಾನು ಅವನಿಗೆ ನಮ ಸ್ಕರಿಸಲಿಲ್ಲ. ಗೆದ್ದ ಮೇಲೆ ಏಕೆ ಕೈ ಮುಗಿಯ ಬೇಕು? ಹಿರಿಯನಾದ ತಕ್ಷಣ ಪೂಜ್ಯನಾಗಿ ಬಿಡುತ್ತಾನೆಯೇ?' ಎಂದು ಕೃಷ್ಣನ ಮೇಲೆ ರೇಗಿದ. ಕೊನೆಗೆ ಕುಂತಿ ಹೇಳಿದಳೆಂದು ಒಪ್ಪಿ ಹೊರಟ. ಕೃಷ್ಣ ಹೇಳಿದಂತೆ ಕುಂತಿ ಹೊರ ಟಳು. ದ್ರೌಪದಿಯೂ ಮೂಕಿಯಂತೆ ಅನು ಸರಿದಳು. ವಿದುರ ಜೊತೆಗೆ ಬಂದ. ಮೊದಲು ಕೃಷ್ಣ, ಅನಂತರ ಒಬ್ಬೊಬ್ಬರಾಗಿ ಐವರು, ಅನಂತರ ಸಾತ್ಯಕಿ, ಕುಂತಿ, ದ್ರೌಪದಿ, ಕೊನೆಗೆ ವಿದುರ, ಪ್ರವೇಶಿಸಿದರು. ವಿದುರನನ್ನು ಕೈಸನ್ನೆ ಮಾಡಿ ಸ್ವಲ್ಪ ದೂರ ಕರೆದು ದಾಸಿ ಪಿಸು ಮಾತಿನಲ್ಲಿ ಎಂದಳು: 'ಚಿಕ್ಕಪ್ಪ, ನಾನು ಹೇಳಿದೆ ಅಂತ ಯಾರಿಗೂ ತಿಳಿಸಕೂಡದು. ಒಂದು ಮಾತಿದೆ.'

'ನನ್ನ ಕಿವಿಗೆ ಬಿದ್ದ ಯಾವ ಮಾತಿಗೂ ನಾಲಿಗೆ ಯಿಂದ ಹೊರ ಬರುವ ಚಟವಿರುವುದಿಲ್ಲ. ಹೇಳು.'

'ಈಗ ತಾನೆ ಬಂದಿದ್ದನಲ್ಲ ಆ ಮುಂದುಗಡೆಯ ಮಹಾರಾಜ ಕೃಷ್ಣ, ಅವನು ಹೋದ ತಕ್ಷಣ ಮಹಾರಾಜ ಒಂದು ಚೂರಿ ತರಿಸಿ ತನ್ನ ಕಂಬಳಿಯ ಒಳಗೆ ಇಟ್ಟುಕೊಂಡ. ಮಕ್ಕಳು ಸತ್ತ ಸಿಟ್ಟಿನಲ್ಲಿ ಕುಂತಿಯ ಮಕ್ಕಳಿಗೆ ಏನಾ ದರೂ ಮಾಡಿಯಾನು.'

ವಿದುರ ನಿಶ್ಶಬ್ದವಾಗಿ ಹೆಜ್ಜೆ ಹಾಕುತ್ತಾ ಒಳಗೆ ಹೋಗಿ ಕೃಷ್ಣನಿಗೆ ಕೈಸನ್ನೆ ಮಾಡಿ ಕರೆದು ಕಿವಿ ಯಲ್ಲಿ ಹೇಳಿದ. ಕೃಷ್ಣ ಹೋಗಿ ಧೃತರಾಷ್ಟ್ರನ ಬಲಭಾಗಕ್ಕೆ ಪಲ್ಲಂಗದ ಮೇಲೆ ಕುಳಿತ. ಎಡ ಭಾಗದಲ್ಲಿ ಕಣ್ಣು ಕಟ್ಟಿಕೊಂಡ ಗಾಂಧಾರಿ.

ಕೃಷ್ಣ ಹೇಳಿದ: 'ಮಹಾರಾಜ, ನಿನ್ನ ಐವರು ಮಕ್ಕಳೂ ಬಂದಿದ್ದಾರೆ. ಧರ್ಮಜ ಬಾ, ತಂದೆಯ ಕಾಲಿಗೆರಗು.'

ಧರ್ಮಜ ಬಂದು ಭಕ್ತಿಯಿಂದ ಎರಡು ಕಾಲುಗಳನ್ನೂ ಮುಟ್ಟಿದ. ಧೃತರಾಷ್ಟ್ರ ಮುಖ ವನ್ನು ತಬ್ಬಿ ಹಿಡಿದು ನೆತ್ತಿಯನ್ನು ಸವರಿ ದೀರ್ಘಾಯುವಾಗು ಎಂದ. ನಂತರ ಅವನು ಅತ್ತ ಹೋದ. 'ಭೀಮ, ನೀನು ಬಾ' ಎಂದು ಕೃಷ್ಣ ಕರೆದ. ಆದರೆ ಭೀಮ ತಕ್ಷಣ ಏಳಲಿಲ್ಲ. ಕೃಷ್ಣನೇ ಹೋಗಿ ಅವನ ರಟ್ಟೆ ಹಿಡಿದು ಎಬ್ಬಿಸಿ, 'ಮಹಾರಾಜ, ನೀನು ಕ್ಷಮಿಸುವಿಯೋ ಇಲ್ಲವೋ ಅನ್ನುವ ಸಂಕೋಚದಿಂದ ಭೀಮ ಹಿಂದೆ ನಿಲ್ಲುತ್ತಿದ್ದಾನೆ. ಅವನನ್ನು ನೀನು ಕ್ಷಮಿಸಿ ಅಲುಂಗಿಸಬೇಕು' ಎನ್ನುತ್ತಾ ಹತ್ತಿರ ಕರೆತಂದು ಕಾಲಿನ ಹತ್ತಿರ ಬಾಗಿಸಿದ. ಧೃತರಾಷ್ಟ್ರನ ಎಡಗೈ ಭೀಮನ ಬೆನ್ನನ್ನು ಬಳಸಿತು. ಕಂಬಳಿಯೊಳಕ್ಕೆ ಹೋದ ಬಲಗೈ ವೇಗವಾಗಿ ಹೊರಕ್ಕೆ ಬರು ವುದರಲ್ಲಿ ಕೃಷ್ಣ ಕೈ ಹಾಕಿ ಮಣಿಕಟ್ಟನ್ನು ಹಿಡಿದು ಕೊಂಡ. ತಕ್ಷಣ ಹಿಂದೆ ಸರಿದ ಭೀಮ ಗಟ್ಟಿಯಾಗಿ ಕೂಗಿದ: 'ಕೃಷ್ಣ ಈ ಮುದಿ ಹಾವಿನ ಯೋಗ್ಯತೆ ನಿನಗಿಂತ ನನಗೆ ಗೊತ್ತು. ಆದಕ್ಕೇ ನಾನು ಬರುವುದಿಲ್ಲ ಅಂದದ್ದು.'

ಅಷ್ಟರಲ್ಲಿ ಏನು ನಡೆಯಿತೆಂಬುದು ಎಲ್ಲ ರಿಗೂ ಕಂಡಿತು. ಧರ್ಮ ಅರ್ಜುನ ನಕುಲ ಸಹದೇವರು ನಡುಗಿದರು. ಧೃತರಾಷ್ಟ್ರ ಗಟ್ಟಿ ಯಾಗಿ ಕೂಗಿಕೊಂಡ.

'ಕೃಷ್ಣ, ನೀನು ಕುಟಿಲಗಾರನೆಂದು ನನಗೆ ಗೊತ್ತಿತ್ತು. ನನ್ನ ನೂರು ಜನ ಪುತ್ರರನ್ನು ಕೊಂದವನ ರಕ್ತವನ್ನು ಹರಿಸಿ ಸೇಡು ತೀರಿಸಿ ಕೊಳ್ಳುವ ಅಧಿಕಾರ ನನಗಿದೆ. ಅಷ್ಟು ಬಂದ

ನಿನಗೆ ನನ್ನ ಶಾಪವಿರಲಿ. ಮಕ್ಕಳು ಸಾಯುವುದರಿಂದರೇನು ಗೊತ್ತಿದೆಯೇ ನಿನಗೆ? ನೂರು ಮಕ್ಕಳು. ನನ್ನ ರಕ್ತದಿಂದ ಹುಟ್ಟಿದ ನೂರು ಮಕ್ಕಳು. ಇವನೊಬ್ಬನೇ ಕೊಂದನಂತೆ. ದುರ್ಯೋಧನನು ಬದುಕದೇ ಸತ್ತಿದ್ದರೆ ಅವನನ್ನೂ ಇವನೇ ಕೊಂದಿದ್ದಾನೆ. ತೇಜೋಭಂಗದಿಂದ ಕೊಂದಿದ್ದಾನೆ. ನನ್ನ ಕೈ ಬಿಡು'–ಎಂದು ಕಿರಿಚುತ್ತಾ, ಕುಳಿತಲ್ಲಿಂದ ಎದ್ದು ಮುಂದೆ ನುಗ್ಗಿದ. ಕೃಷ್ಣ ಚೂರಿಯನ್ನು ಕಿತ್ತು ಹತ್ತಿರವಿದ್ದ ವಿದುರನ ಕೈಗೆ ಕೊಟ್ಟು ಸಂತಯಿಸುವ ಧ್ವನಿಯಲ್ಲಿ ಹೇಳಿದ: 'ಮಹಾರಾಜ, ಭೀಮನನ್ನು ನೋಡಲು ನಿನಗೆ ಕಣ್ಣುಗಳಂತೂ ಇಲ್ಲ, ನಾನು ವರ್ಣಿಸುತ್ತೀನೆ ಕೇಳು. ಅವನ ಹಣೆ, ಕೆನ್ನೆ, ಗಲ್ಲ, ಎದೆ, ಭುಜ, ತೋಳು, ತೊಡೆ, ಕಾಲು ಎಲ್ಲೆಲ್ಲೂ ಗಾಯವಾಗಿ ಕಿತ್ತು ಮತ್ತೆ ಗಾಯವಾಗಿ ರಕ್ತ ಹರಿದು ಒಣಗಿ ಮತ್ತೆ ಹರಿದು ಕಲೆಗಟ್ಟಿ ಒರಟೋ ಒರಟಾಗಿದೆ. ಎಂತೆಂತಹ ಪಟು ಬಾಣಗಳ ಆಘಾತಗಳನ್ನು ಸಹಿಸಿರುವ ಜಡ್ಡು ಮೈ ಅದು. ನಿನ್ನ ದುರ್ಬಲ ಕೈಯ ಚೂರಿ ತಗುಲಿದ್ದರೂ ಏನೂ ಆಗುತ್ತಿರಲಿಲ್ಲ. ಇನ್ನೊಂದು ಸಾರೆ ರಕ್ತ ಹೋಗುತ್ತಿತ್ತು ಅಷ್ಟೆ. ಆದರೆ ಅದು ಚುರುಕ್ ಎಂದ ತಕ್ಷಣ ಅವನು ನಿನ್ನನ್ನು ಅಪ್ಪಳಿಸಿಬಿಡುತ್ತಿದ್ದ. ಅವನ ಸ್ವಭಾವ ಅದು. ನಾನು ಅವನನ್ನು ಉಳಿಸಲಿಲ್ಲ. ನಿನ್ನನ್ನು ಉಳಿಸಿದೆ.'

ಧೃತರಾಷ್ಟ್ರ ಪಲ್ಲಂಗದ ಮೇಲೆ ಕುಕ್ಕರಿಸಿದ. ಅನಂತರ ಇದ್ದಕ್ಕಿದ್ದಂತೆಯೇ ಗಟ್ಟಿಯಾಗಿ ಅಳತೊಡಗಿದ. ಹುಟ್ಟಿನಿಂದಲೇ ಕುರುಡಾಗಿ ಎಳೆದುಕೊಂಡ ವಿಕಾರ ಕಣ್ಣುಗಳಿಂದ ನೀರು ಸುರಿಸುತ್ತಾ ಒಂದೇ ಸಮನೆ ಬಿಕ್ಕಿದ. ಆವೇಗ ಕಳೆದು ಸ್ವಲ್ಪ ಹಿಡಿತ ಬಂದ ಮೇಲೆ. 'ಕೃಷ್ಣ, ಹಾಗಾದರೂ ಮಾಡಲು ಹೇಳು ಭೀಮನಿಗೆ, ನೂರು ಮಕ್ಕಳನ್ನು ಕಳೆದುಕೊಂಡ ನಾನು...' ಎನ್ನುವಾಗ ಕೃಷ್ಣ, 'ಗಾಂಧಾರಿ ನೂರು ಮಕ್ಕಳನ್ನು ಕಳೆದುಕೊಂಡ ನೀನು ಪಾಂಡವರನ್ನು ಕ್ಷಮಿಸಬಲ್ಲೆಯು? ಯುದ್ಧ ಬೇಕೆಂದು ಅವರೇನೂ ಕೇಳಿರಲಿಲ್ಲ. ನಿಜ ಹೇಳು ನಿನ್ನ ನೂರು ಮಕ್ಕಳನ್ನು...' ಎನ್ನುತ್ತಾ ಪಲ್ಲಂಗದ ಆ ಕಡೆಗೆ ಹೋಗಿ ಅವಳನ್ನು ಕೈ ಹಿಡಿದು ಪಕ್ಕದಲ್ಲಿ ಕುಳಿತು ಹೇಳಿದ: 'ನೋಡು. ನಾನು ನಿನ್ನ ಹಿರಿಯ ದುರ್ಯೋಧನನಿಗಿಂತ ಎರಡು ವರ್ಷಕ್ಕೆ ಚಿಕ್ಕವನು. ನೀನು ನನ್ನನ್ನು ಕ್ಷಮಿಸಬೇಕು.'

ಗಾಂಧಾರಿ ಅಳಲಿಲ್ಲ. ಗಂಭೀರಳಾಗಿ ಕುಳಿತಿದ್ದಳು. ಅನಂತರ ನಿಧಾನವಾಗಿ ಹೇಳಿದಳು: 'ನೂರು ಮಕ್ಕಳು ಅನ್ನುವುದು ಮಹಾರಾಜನದು, ಹಾಗಂತ ಅವನ ಲೆಕ್ಕ. ಈ ಗಾಂಧಾರಿ ಎನ್ನಿಸಿಕೊಂಡ ದಾಸಿ ಹೆತ್ತದ್ದು ಬರೀ ಹದಿನಾಲ್ಕು. ಜೊತೆಗೆ ಒಬ್ಬ ಅಳಿಯನೂ ಸತ್ತಿದ್ದಾನೆ. ನನ್ನ ದುಃಖ ಸಣ್ಣದು. ಮಹಾರಾಜನದರಷ್ಟು ದೊಡ್ಡದಲ್ಲ.'

'ನನ್ನ ಶಾಪಕ್ಕೆ ಶಕ್ತಿ ಇಲ್ಲದಿರಬಹುದು'–ಧೃತರಾಷ್ಟ್ರ ಎಂದ: 'ಈ ದೇವಿಯದು ಒಂದು ನಿಟ್ಟುಸಿರು ಸಾಕು, ಕುಂತಿಯ ಮಕ್ಕಳನ್ನು ಕೊಚ್ಚಿಕೊಂಡು ಹೋಗಲು.'

'ದೇವಿ ಗಾಂಧಾರಿ, ನಿನ್ನ ಕೈಲಿ ಒಂದು ಆಪ್ತ ವಿಷಯ ಮಾತನಾಡಬೇಕೆಂದು ಬಹು ದಿನಗಳಿಂದ ಆಸೆ ಇದೆ. ನೀನು ನಿಜ ಹೇಳುವೆಯಾದರೆ ಕೇಳುತ್ತೇನೆ. ಏನನ್ನೂ ಮುಚ್ಚಿಡದೆ ನಿಜವನ್ನು ಹೇಳಿಬಿಡುವ ಕಾಲ ಜೀವನದಲ್ಲಿ ಒಮ್ಮೆಯಾದರೂ ಬರಬೇಕು. ನಿನಗೆ ಈಗ ಆ ಮನಸ್ಥಿತಿ ಬಂದಿದೆ ಎಂದು ನನಗೆ ಅನ್ನಿಸುತ್ತದೆ. ಹೇಳುವೆಯಾ?'

'ಏನು ಕೇಳು.'

'ಬೇಕಾದರೆ ನಾನು ನೀನು ಇಬ್ಬರೇ ಒಂದು ಕೋಣೆಗೆ ಹೋಗಿ ಮಾತನಾಡೋಣ.'

'ಏನೆಂಬುದನ್ನು ಮೊದಲು ಹೇಳು.'

'ಮಹಾರಾಜನಂತೂ ಕುರುಡನಾಗಿಯೇ ಹುಟ್ಟಿದ, ನೀನೇಕೆ ಹೀಗೆ ಕಣ್ಣು ಕಟ್ಟಿಕೊಂಡೆ?'

'ಅವಳು ಮಹಾಪತಿವ್ರತೆ. ಗಂಡನಿಗಿಲ್ಲದ ದೃಷ್ಟಿಭಾಗ್ಯ ತನಗೆ ಬೇಡವೆಂದು'–ಧೃತರಾಷ್ಟ್ರ ಉತ್ತರಿಸಿದ.

'ಮಹಾರಾಜ, ಅವಳು ಹೇಳಲಿ. ಅವಳ ಅಂತರಂಗ ನುಡಿಯಲಿ. ಸ್ವಲ್ಪ ತಾಳು.'

'ಕೃಷ್ಣ, ನಿಜ ಹೇಳಿದ್ದರಿಂದ ಏನು ಬರು

ತ್ತದೆ?' ಗಾಂಧಾರಿ ಕೇಳಿದಳು.

'ಭ್ರಮೆ ಕಳೆಯುತ್ತದೆ. ಆದರಿಂದ ಶಾಂತಿ ಸಿಕ್ಕುತ್ತದೆ. ಆದ್ದರಿಂದ ಹೇಳು. ಬೇಕಾದರೆ ನಿನ್ನನ್ನು ನಾನೊಬ್ಬನೆ ಬೇರೆ ಕೋಣೆಗೆ ಕರೆದೊಯ್ಯಲೆ? ಇವರನ್ನೆಲ್ಲ ಹೊರಗೆ ಕಳಿಸಲೆ?'

ಗಾಂಧಾರಿ ಮೌನಿಯಾದಳು. ನೆಲದ ಚಾಪೆಯ ಮೇಲೆ ಕುಳಿತಿದ್ದವರೆಲ್ಲ ನಿಶ್ಶಬ್ದವಾಗಿದ್ದರು. 'ಮದುವೆ ನಿಶ್ಚಯವಾದ ನಂತರ ನೀನು ಹೀಗೆ ಕಣ್ಣು ಕಟ್ಟಿಕೊಂಡೆಯ?'

'ಆ ಮಾತು ಹೋಗಲಿಬಿಡು, ಕೃಷ್ಣ'– ಗಾಂಧಾರಿಯ ಧ್ವನಿ ಹತ್ತಿಕೊಂಡು ಬಂತು.

'ಆದರೂ ಹೇಳು, ತಾಯಿ, ಸಮಾಧಾನ ಮಾಡಿಕೊಂಡು ಹೇಳು'– ಕೃಷ್ಣ ಅಂತಃಕರಣ ತಟ್ಟುವ ಧ್ವನಿಯಲ್ಲಿ ಒತ್ತಾಯಿಸಿದ.

'ಮದುವೆ ನಿಶ್ಚಯವಾಯಿತು. ನಾನು ಬೇಡವೆಂದರೂ ನಿಶ್ಚಯವಾಯಿತು. ಮನೆಯನ್ನು ಬಿಟ್ಟು ಕದ್ದು ಓಡಿ ಹೋಗುವ ಯೋಚನೆಯನ್ನೂ ಮಾಡಿದೆ. ನಾನು ಓಡಿಹೋಗಿದ್ದರೂ ನನ್ನ ತಂದೆ ಬೇಕೆಂದೇ ಮಗಳನ್ನು ಮುಚ್ಚಿಟ್ಟಿದ್ದಾನೆಂದು ಭೀಷ್ಮನ ಸೈನಿಕರು ನಮ್ಮೂರನ್ನು ಸುಟ್ಟುಬಿಡುತ್ತಿದ್ದರು. ಆದ್ದರಿಂದ ಓಡಿಹೋಗಲಿಲ್ಲ. ಕೃಷ್ಣ, ನೀನು ಬಹಳ ದೇಶಗಳನ್ನು ಸುತ್ತಿರುವಿಯಂತೆ. ನನ್ನ ಗಾಂಧಾರ ದೇಶವನ್ನು ನೋಡಿರುವೆಯಾ?'

'ನೋಡಿದ್ದೀನಿ. ಸುಂದರವಾದ ಬೆಟ್ಟಗಳು, ಸದಾ ಹಸಿರು ಗಿಡಗಳು.'

'ನೀಲ ಆಕಾಶ, ಎಲ್ಲ ಋತುಗಳಲ್ಲೂ ಹೂ ಬಿಡುವ ಒಂದಿಲ್ಲೊಂದು ಗಿಡ ಬಳ್ಳಿಗಳು. ಸಿಹಿಯಾದ ನೀರು. ಕಾಡು ಹಣ್ಣುಗಳು. ಶಖೆಯೇ ಇಲ್ಲದ ಹವೆ. ಅಂತಹ ಸುಂದರ ದೇಶ ಬೇರೊಂದಿದೆಯೆ?'

'ಇಲ್ಲ.'

'ನಾವು ಬಡವರು. ಈ ಕಡೆಯಂತೆ ಮಟ್ಟಸವಾದ ನೆಲವಿಲ್ಲ. ಗಾಡಿ ಗಾಡಿ ಬೆಳೆಯುವ ಸಾರವಿಲ್ಲ. ಲೋಹ ಬಂಗಾರಗಳ ಸಂಪತ್ತಿಲ್ಲ. ಬೆಟ್ಟಗಳ ನಾಡಿನಲ್ಲಿ ಇವೆಲ್ಲ ಎಲ್ಲಿ ಬರಬೇಕು? ಸಂಪತ್ತಿಲ್ಲದ ಕಡೆ ದೊಡ್ಡ ಸೈನ್ಯ ಎಲ್ಲಿರಬೇಕು? ಭೀಷ್ಮ ದೊಡ್ಡ ಸೈನ್ಯ ಕಳಿಸಿದ. ಜೊತೆಗೆ ಗಾಡಿಗಟ್ಟಲೆ ದಿನಸಿ ಧಾನ್ಯ, ಲೋಹದ ಪಾತ್ರೆಗಳು, ಬಂಗಾರದ ಆಭರಣಗಳು. ಇವೆಲ್ಲ ಮೈತ್ರಿ ಸೂಚಕ. ನೀವು ನನ್ನ ಕುರುಡ ಮಗನಿಗೆ ಹೆಣ್ಣು ಕೊಡದಿದ್ದರೆ ಸೈನ್ಯವಿದೆ–ಭಯಸೂಚಕ. ನಮ್ಮಪ್ಪನಿಗೆ ಭಯವೂ ಹುಟ್ಟಿತು, ಲೋಭವೂ ಹುಟ್ಟಿತು. ಲೋಭವಿಲ್ಲದಿದ್ದರೆ ಸೈನ್ಯಕ್ಕೆ ಹೆದರಬೇಕಿರಲಿಲ್ಲ. ಬೆಟ್ಟಗಾಡಿನವರು ಅವಿತು ಕೂತು ಕಿರುಕುಳ ಕೊಡತೊಡಗಿದರೆ ಬಯಲು ಸೀಮೆಯ ಸೈನ್ಯ ಎಷ್ಟು ದಿನ ನಿಲ್ಲಬಹುದು, ಅದೂ ಇಷ್ಟು ದೂರದಿಂದ ಬಂದು? ನಿಲ್ಲುತ್ತದೆಯೇ ಹೇಳು.'

'ಖಂಡಿತ ಸಾಧ್ಯವಿಲ್ಲ.'

'ಅಪ್ಪ ಲೋಭಕ್ಕೆ ಪಕ್ಕಾದ. ಅವನ ಎದುರಿಗೇ ನಾನು ಹೊದೆದಿದ್ದ ಮೇಲು ವಸ್ತ್ರದ ಒಂದು ಸೆರಗನ್ನು ಸರ್ರನೇ ಗೀಳಿ ಕುರುಡನಿಗೇ ಕೊಡುವುದಾದರೆ ನಾನು ಅವನ ಮುಖ ನೋಡುವುದಿಲ್ಲ ಎಂದು ಎರಡು ಕಣ್ಣುಗಳನ್ನೂ ಕಟ್ಟಿಕೊಂಡೆ. ಆಗಲೂ ಅಪ್ಪನ ಅಂತಃಕರಣ ಜಾಗ್ರತವಾಗಲಿಲ್ಲ, ಹುಡುಗಿಯ ಮೊಂಡುತನ ನಾಲ್ಕು ದಿನದಲ್ಲಿ ಸರಿಯಾಗುತ್ತದೆಂದು ಭಾವಿಸಿದನೇನೋ! ಹಾಗೆಯೇ ಮೇನೆ ಹತ್ತಿಸಿ ಕಳಿಸಿದ. ಬೆಟ್ಟಗಳ ನಾಡು ಕಳೆದ ಮೇಲೆ ರಥದಲ್ಲಿ ಕೂರಿಸಿದರು. ನನ್ನ ಜನ್ಮದಲ್ಲಿ ರಥವನ್ನು ನೋಡಿರಲಿಲ್ಲ. ಅನಂತರ ಕೂತರೂ ನೋಡಲಿಲ್ಲ. ಕೃಷ್ಣ, ನಾನು ಎಷ್ಟು ಲಕ್ಷಣವಾಗಿದ್ದೆ ಬಲ್ಲೆಯ? ಸ್ವಲ್ಪವೂ ಬಗ್ಗಡವಿಲ್ಲದ ನಮ್ಮ ಬೆಟ್ಟದ ಬುಡದ ತಿಳಿ ನೀರಿನಲ್ಲಿ ನನ್ನನ್ನು ನಾನು ನೋಡಿಕೊಂಡು ಹಿಗ್ಗುತ್ತಿದ್ದೆ. ಗೆಳತಿಯರು ನನ್ನನ್ನಾಧರಿಸಿ ಕನಸಿನ ಕಥೆ ಹೆಣೆಯುತ್ತಿದ್ದರು. ಅಲ್ಲಿಗೆ ಮುಗಿಯಿತು ನನ್ನ ರೂಪ. ಅನಂತರ ನಾನೂ ನೋಡಿಕೊಳ್ಳಲಿಲ್ಲ. ನೋಡುವಂತಹ ಗಂಡನೂ ಸಿಕ್ಕಲಿಲ್ಲ. ರೂಪ ತಿಳಿಯದ ಗಂಡನಿಗೆ ಸಿಕ್ಕಿದೆ. ಅನಂತರ ಆದದ್ದೇನು? ಬೇಗ ಬಸುರಾಗಲಿಲ್ಲವೆಂದು ಭೀಷ್ಮನ ಚಟಪಟ. ನನಗೆ ತಿಳಿಯದು. ಈ ಗಂಡನಿಗೆ ತಿಳಿಯದು. ಅನಂತರ ಈ ಗಂಡನಿಗೆ ಒಬ್ಬ ದಾಸಿಯು ಹೇಳಿಕೊಟ್ಟಳಂತೆ. ಆಮೇಲೆ ನಾನೂ

ಗಂಡ ಮಾತನಾಡಿಸಲು ಶುರುಮಾಡಿದ. ಯುದ್ಧ ಆರಂಭವಾಗಿ ಆತಂಕ ಹೆಚ್ಚಿದ ಮೇಲೆ ಸದಾ ನನ್ನ ಜೊತೆಯಲ್ಲೇ ಇದ್ದಾನೆ. ಮಕ್ಕಳಿಂದ ಆಗಾಗ್ಗೆ ಸಿಗುತ್ತಿದ್ದುದು ಪೂಜ್ಯತೆಯೆ ಅಲ್ಲ ಪಾದಸೇವೆಯ ಪಾದಸ್ಪರ್ಶ ಸೇವೆ ಮಾತ್ರ. ಸೊಸೆಯರಿಂದ ದಾಸಿಯರಿಂದ ಕೂಡ. ನನ್ನ ಗಂಡನನ್ನು ಕಾಮಕೇಳಿಗೆಳೆಯುತ್ತಿದ್ದ ದಾಸಿಯರೂ ಆಗಾಗ್ಗೆ ನನ್ನ ಕಾಲು ಮುಟ್ಟುತ್ತಿದ್ದರು. ಅದು ಹೋಗಲಿ. ಯುದ್ಧವಾಯಿತು. ಸೋಲೂ ಕುಸಿಸಿದ್ದಾಯಿತು. ಅವರು ಬೆಳೆದರು. ಅವರು ಹೇಳಿದುದೇ ನ್ಯಾಯವೆಂದು ನಂಬಿದೆ. ಅವರ ಮಾತಲ್ಲದೆ ಪ್ರಪಂಚವನ್ನು ತಿಳಿಯುವ ಬೇರೆ ದಾರಿ ಯಾವುದಿತ್ತು ನನಗೆ? ಬೆಳೆದು ಯುದ್ಧ ಮಾಡಿ ಸತ್ತರು. ಬದುಕಿದ್ದಾಗ ಅವರ ರೂಪವನ್ನು ನೋಡಲಿಲ್ಲ. ನನ್ನ ಮಕ್ಕಳು ನನ್ನಂತೆಯೇ ಅಂದವಾದ ರೂಪಿನವರಂತೆ. ದಾಸಿಯರು ಹೇಳುತ್ತಿದ್ದ ಮಾತು. ನನ್ನನ್ನು ಮೆಚ್ಚಿಸಲೆಂದು ಸುಳ್ಳು ಹೇಳಲಿಕ್ಕೂ ಸಾಕು. ಕೃಷ್ಣ, ನೀನು ನಿಜ ಹೇಳು, ದುರ್ಯೋಧನ, ದುಶ್ಶಾಸನ, ದುರ್ಮರ್ಷಣ, ದುರ್ಮುಖಾದಿಗಳು ಲಕ್ಷಣವಾಗಿದ್ದರೆ? ನನ್ನ ಮಗಳು ಸುಂದರಿಯೆ?'—ಗಾಂಧಾರಿ ಪ್ರಶ್ನೆಗಳನ್ನು ಕೇಳಿಕೊಂಡು ಹೋಗುತ್ತಿದ್ದಳು. ಉತ್ತರವನ್ನು ನಿರೀಕ್ಷಿಸಿ ನಿಲ್ಲಿಸಲಿಲ್ಲ. 'ಮಕ್ಕಳ ಕಣ್ಣೆದುರಿಗೆ ತಾಯಿ ಸಾಯಬೇಕು. ಆದರೆ ನನಗಿಂತ ಮುಂಚೆ ಮಕ್ಕಳೆಲ್ಲ ಸತ್ತರು. ಹೆತ್ತದ್ದು, ಹಾಲು ಕುಡಿಸಿದ್ದು, ಸತ್ತ ಸುದ್ದಿ ಕೇಳಿದುದಷ್ಟೆ. ಒಮ್ಮೆಯೂ ಅವರನ್ನು ನೋಡಲಿಲ್ಲ.'

ಗಾಂಧಾರಿ ಸುಮ್ಮನಾದಳು. ಅವಳ ಬಳಿ ಕಲೆಯು ಕುಳಿತಿದ್ದವರೆಲ್ಲರ ಚಿತ್ತವನ್ನು ವಿಷಾದವಾಗಿ ಹಿಡಿದು ನಿಲ್ಲಿಸಿತ್ತು. ಕಿಟಕಿಯಿಂದ ಬರುತ್ತಿದ್ದ ಹೊನ್ನ ಬಿಸಿಲು ಈಗ ಸಣ್ಣದಾಗಿ ಧೂಳಿನ ಕಣಗಳು ಅದರಲ್ಲಿ ಸ್ಪಷ್ಟವಾಗಿ ಸುತ್ತು ಹಾಕುತ್ತಿದ್ದವು. ಅಷ್ಟರಲ್ಲಿ ಧೃತರಾಷ್ಟ್ರ ಬಿಕ್ಕಿ ಬಿಕ್ಕಿ ಅಳುವಂತೆ ಸದ್ದಾಯಿತು. 'ಯಾಕೆ ಮಹಾರಾಜ?'—ಕೃಷ್ಣ ಕೇಳಿದ.

'ಮಕ್ಕಳೆಲ್ಲ ಸತ್ತರು. ರಾಜ್ಯ ಹೋಯಿತು. ಅದರಿಂದ ಇವಳೂ ನನ್ನ ಕೈ ಬಿಟ್ಟಳು.'

'ನಾನೆಲ್ಲಿ ಕೈ ಬಿಟ್ಟಿದ್ದೇನೆ? ನೀನೆಲ್ಲಿ ನನ್ನ ಕೈ ಹಿಡಿದಿದ್ದೆ? ಮಹಾರಾಜ. ಇಷ್ಟು ವರ್ಷ ನಿನ್ನೊಡನೆ ಇದ್ದ ಮೇಲೆ ನನಗಾದರೂ ಬೇರೆ ದಿಕ್ಕೆಲ್ಲಿದೆಯೆಂದು ನನಗೆ ಗೊತ್ತಿಲ್ಲವೆ? ನೀನು ಕಾಡಿಗೆ ಹೋದರೂ ನಾನು ಹಿಂದೆ ಹಿಂದೆ ಬರುತ್ತೇನೆ. ನಿನ್ನ ಕಂಬಳಿಯ ಕೊನೆಯನ್ನು ಹಿಡಿದು'—ಗಾಂಧಾರಿ ತಕ್ಷಣ ಎಂದಳು. ಧೃತರಾಷ್ಟ್ರ ಸುಮ್ಮನಾದ.

ಕೃಷ್ಣ ಕೇಳಿದ: 'ತಾಯಿ. ನೀನು ಹುಟ್ಟು ಕುರುಡಿಯಂತೂ ಅಲ್ಲ. ಮೇಲೆ ಅರಿವೆ ಬಳಲು ಕಟ್ಟಿಕೊಂಡರೆ ದೃಷ್ಟಿಶಕ್ತಿ ನಷ್ಟವಾಗುವುದಿಲ್ಲ. ಈಗಲೂ ಏಕೆ ಅದನ್ನು ತೆಗೆದುಹಾಕಿ ಸುತ್ತ ಮುತ್ತ ನೋಡಬಾರದು?'

'ಇಷ್ಟು ವರ್ಷದ ಅಂಧತ್ವದ ನಂತರ!'

'ಅದರೇನಂತೆ?'

'ಇಷ್ಟು ವರ್ಷದ ಅಂಧತ್ವದ ನಂತರ ಏನನ್ನು ನೋಡುವುದು ಕೃಷ್ಣ?'

'ನಿನ್ನೆದುರಿಗಿರುವ ನನ್ನನ್ನು. ಪಕ್ಕದಲ್ಲಿರುವ ಮಹಾರಾಜನನ್ನು. ಎದುರಿಗೆ ಕೂತಿರುವವರನ್ನು, ವಸ್ತ್ರಾದಿಗಳನ್ನು. ಬೇಕೆನಿಸಿದರೆ ಯುದ್ಧರಂಗವನ್ನು ನೋಡಿ ನೀನೆ ಮಹಾರಾಜನಿಗೆ ಪ್ರತ್ಯಕ್ಷವಾಗಿ ಹೇಳಿದರೆ ನಿನ್ನ ಕಣ್ಣುಗಳ ಮೂಲಕ ಅವನ ಅಂಧತ್ವವನ್ನು ನೀಗಬಹುದು.'

'ಅವನಿಗೆ ದಾಸಿಯರ ಸಹಾಯವಿದೆ.'

'ದಾಸಿಯರ ಕಣ್ಣುಗಳ ಮೂಲಕ. ತನ್ನ ಮಕ್ಕಳ ಕಣ್ಣುಗಳ ಮೂಲಕ ಇದುವರೆಗೆ ನೋಡಿದಂತಾಯಿತಲ್ಲ. ನೀನು ಕೂಡ ಆ ಮಕ್ಕಳ ಕಣ್ಣುಗಳ ಮೂಲಕವೇ ನೋಡಿದುದು. ಈಗ ನಿನ್ನ ಸ್ವಂತ ಕಣ್ಣುಗಳಿಂದ ನೋಡು. ಮಹಾರಾಜನಿಗೂ ತೋರಿಸು' ಎಂದು ಕೃಷ್ಣ ಅವಳ ಕಣ್ಣು ಪಟ್ಟಿಗೆ ಕೈ ಹಾಕಿದ.

ಅವನ ಬೆರಳುಗಳು ತಗುಲಿದ ತಕ್ಷಣ ಅವಳು ಬೇಡ ಬೇಡವೆಂದು ಗಟ್ಟಿಯಾಗಿ ವಿರೋಧಿಸಿದಳು, ತನ್ನನ್ನು ಉಳಿಸಿಕೊಳ್ಳುವ ಪ್ರಯತ್ನದಿಂದ. ಕೃಷ್ಣ ಗಂಟುಗಳನ್ನು ಬಿಚ್ಚಿ ಅರಿವೆಯನ್ನು ತೆಗೆದು ಹಾಕಿದ. ಆದರೂ ಅವಳ ಕಣ್ಣುಗಳು ಮುಚ್ಚಿಕೊಂಡೇ ಇದ್ದವು. 'ಕಣ್ಣು ಬಿಡು ತಾಯಿ. ನಾನು ಕೇಳಿಕೊಳ್ಳುತ್ತೇನೆ ಕಣ್ಣು ಬಿಡು. ನೀನು ಕುರುಡಿಯಲ್ಲ.

ಪಟ್ಟಿಕಟ್ಟಿಕೊಳ್ಳುವ ಮೊದಲು ನಿದ್ರೆ ತಿಳಿದ ನಂತರ ಬಿಡುತ್ತಿರಲಿಲ್ಲವೇ ಹಾಗೆ ಬಿಡು'–ಎಂದು ಅವಳ ಎರಡು ರೆಪ್ಪೆಗಳ ಮೇಲೂ ಬೆರಳಿನಿಂದ ಸವರಿದ. ಅವಳು ನಿಧಾನವಾಗಿ ಕಣ್ಣು ಬಿಟ್ಟಳು. ಕಲಸಿ ಕಲಸಿದಂತಹ ಚಿತ್ರಗಳು. ಬೆಳಕನ್ನು ತಾಳ ಲಾರದೆ ರೆಪ್ಪೆಗಳು ಮುಚ್ಚಿಕೊಂಡವು.

"ಕೃಷ್ಣ, ನೋಡುವುದು ಕಷ್ಟವೆನ್ನಿಸುತ್ತದೆ. ಬೇಡ, ನನ್ನ ಪಟ್ಟಿಯನ್ನು ಕೊಡು."

"ಕಾಹಿಲೆ ಮಲಗಿ ಗುಣವಾದವರು ನಡೆಯಲು ಕಷ್ಟವಾಗುವಂತೆ ಆಗಿದೆ ನಿನಗೆ. ಮತ್ತೆ ಪಟ್ಟಿ ಬೇಡ" ಎಂದು ಮೇಲೆ ಎದ್ದ ಕೃಷ್ಣ ಕಿಟಕಿಯ ಬಾಗಿಲನ್ನು ಮುಚ್ಚಿದ. ಬಿಸಿಲುಕೋಲಿನ ಜಳ ಮುಚ್ಚಿ ಒಳಗೆ ನಸುಬೆಳಕು ನಿಂತಿತು. ಗಾಂಧಾರಿ ಮತ್ತೆ ಕಣ್ಣು ಬಿಟ್ಟಳು. ಸ್ವಲ್ಪ ಹೊತ್ತು ಪಿಳು ಕಿಸಿದಳು. ಇಷ್ಟು ವರ್ಷ ಹೊಂದಿಕೊಂಡಿದ್ದ ಕತ್ತ ಲಿನ ತಂಪು ಹೋಗಿ ಇದ್ದಕ್ಕಿದ್ದಂತೆಯೇ ಬೆಳಕಿನ ಬಿಸಿ ರಾಚಿದಂತಹ ನೋವು. ಒಳಗೆಲ್ಲ ಸಂಕಟ. ತನ್ನ ಊರಿನಲ್ಲಿ ಕಣ್ಣಿಗೆ ಬಟ್ಟೆ ಕಟ್ಟಿಕೊಳ್ಳುವಾಗ ಇದ್ದಂತಹ ತಿರಸ್ಕಾರ ಅಸಹಾಯಕ ರೋಷ–ಗಳು ಮರುಕಳಿಸಿದಂತಾಗಿ ಮಾತು ನಿಂತು ತುಟಿ ಗಳು ನಡುಗತೊಡಗಿದವು. ಈಗ ಅದೇ ತೆರನಾದ ಸಿಟ್ಟಿನ ಸಿತ್ತ್ವಯದಿಂದಲೆಂಬಂತೆ ಪ್ರಯತ್ನಪೂರ್ವ ಕವಾಗಿ ರೆಪ್ಪೆಗಳನ್ನು ತೆರೆದಿಟ್ಟುಕೊಂಡಳು. ದೃಷ್ಟಿಯು ನಿಧಾನವಾಗಿ ಸ್ತಿಮಿತಕ್ಕೆ ಬಂತು. ಮೂಕಳಾಗಿ ಇಡೀ ಕೋಣೆಯನ್ನು ದಿಟ್ಟಿಸಿದಳು. ಎದುರಿನ ಬಾಗಿಲು, ಆಚೆಗೆ ಕಾಣುವ ದೊಡ್ಡ ಅಂಗಳ, ಹಣತೆ ಇಟ್ಟಿರುವ ಗೂಡು, ಎದುರಿಗೆ ಕುಳಿತಿರುವ ಇಷ್ಟು ಜನ, ಪಕ್ಕದಲ್ಲೇ ನಿಂತು ಅವನ ಕೈಗಳನ್ನು ಇನ್ನೂ ತನ್ನ ಎರಡು ಕಿವಿಗಳ ಹತ್ತಿರ ಇಟ್ಟಿರುವ ಇವನು, ಇವನೇ ಅಲ್ಲವೆ ಕೃಷ್ಣ? ಹತ್ತಾರು ಸಲ ರೆಪ್ಪೆಯನ್ನು ಬಡಿದು ದೃಷ್ಟಿಯು ಇನ್ನಷ್ಟು ಸರಿಯಾಗಿ ಹೊಂದಿಕೊಂಡ ಮೇಲೆ ಮೂಕಳಂತಿರುವುದು ಮುಜುಗರವಾಗಿ ಕೇಳಿದಳು, "ಕೃಷ್ಣ ಇವರೆಲ್ಲ ಯಾರು?"

"ಒಬ್ಬೊಬ್ಬರಾಗಿ ಹತ್ತಿರ ಬಂದು ನಮಸ್ಕರಿಸಿ. ಧರ್ಮರಾಜ ನೀನು ಬಾ" ಎದ್ದು ಬಂದು ಎರಡು ಕಾಲುಗಳನ್ನು ಗಟ್ಟಿಯಾಗಿ ಹಿಡಿದಾಗ ಅವನ ಮುಖವು ಅವಳ ಕಣ್ಣುಗಳ ಹತ್ತಿರಕ್ಕೆ ಬಂತು. ಅವನ ಮೈಕಟ್ಟನ್ನು ಅವಳು ನೋಡಿದಳು. ಭೀಮನನ್ನು ಕರೆದಾಗ ಅವನೂ ಬಂದು ತನ್ನ ದಪ್ಪ ದೊಡ್ಡ ಹಸ್ತಗಳಿಂದ ಕಾಲುಗಳನ್ನು ಒತ್ತಿ ಹಿಡಿದ. ಅವಳು ಮೂಕಳಂತೆ ದಿಟ್ಟಿಸಿದಳು. ಅರ್ಜುನ ಬಂದ. ನಕುಲ ಸಹದೇವ ಬಂದರು. ಅನಂತರ ಕೃಷ್ಣ, "ಕುಂತಿ, ನೀನು ಬಾ" ಎಂದ.

"ಕುಂತಿಯೂ ಇಲ್ಲಿದ್ದಾಳೆಯೇ?" ಗಾಂಧಾರಿ ಕೇಳಿದಳು.

ಕುಂತಿ ಎದ್ದು ಬಂದು ಅವಳ ಎರಡು ಭುಜ ಗಳನ್ನೂ ಹಿಡಿದು ಹೇಳಿದಳು. "ನಾನೇ ಕುಂತಿ, ನಿನ್ನ ತಂಗಿ" ಗಾಂಧಾರಿ ಮುಖವನ್ನು ದಿಟ್ಟಿಸಿ ದಳು. ಅನಂತರ ಕುಂತಿ, "ಮಗು ಕೃಷ್ಣೆ, ಬಂದು ನಮಸ್ಕರಿಸು. ಗಾಂಧಾರಿ, ಇವಳೇ ದ್ರೌಪದಿ."

ಗಾಂಧಾರಿ ದ್ರೌಪದಿಯ ತಲೆಯನ್ನು ಸವರಿ ದಳು. ತನ್ನ ಬೆರಳುಗಳನ್ನು ಅವಳ ತಲೆಗೂದಲಿ ನಲ್ಲಿ ಹೊಗಿಸಿ ತಡಕಿದಳು. ಅವಳ ಕಣ್ಣಿನಲ್ಲಿ ನೀರು ತುಂಬಿಕೊಂಡಿತು.

ಕೃಷ್ಣ ಹೇಳಿದ: 'ತಾಯಿ ಈ ದಿನ ನೀನು ಬಿಸಿ ಲಿಗೆ ಹೋಗಬೇಡ. ಕಿಟಕಿಗಳನ್ನು ಪೂರ್ತಿ ತೆಗೆಸ ಬೇಡ. ಮಬ್ಬು ಬೆಳಕಿನಲ್ಲಿಯೇ ಇರು. ಕಣ್ಣಿಗೆ ಅಭ್ಯಾಸವಾಗಲಿ."

ಗಾಂಧಾರಿ ಬಲಗಡೆಗೆ ತಿರುಗಿದಳು. ಗೋಡೆ ಯೊರಗಿದ್ದ ಗಂಡ ಕಾಲು ಚಾಚಿ ಕುಳಿತಿದ್ದ. ಬಿಳಿಯ ಗಡ್ಡ, ಬೊಕ್ಕತಲೆ, ತುಂಬು ಹಲ್ಲುಗಳು, ಸೀದು ಹೋದ ಕಣ್ಣುಗಳು, ದಪ್ಪ ದಪ್ಪಗೆ ಎದ್ದು ಕಾಣುವ ಬಿಳಿ ನರಗಳ ಮುಂಗೈಗಳು. ಅವಳ ಕಣ್ಣು ಗಳು ಅವನ ಮೇಲೆಯೇ ನಟ್ಟವು. ಅನಂತರ ತನ್ನ ಎರಡು ಕೈಗಳನ್ನೂ ಮುಖದ ಹತ್ತಿರಕ್ಕೆ ಎತ್ತಿ ಹಿಡಿದು ಮುಂಗೈ ಅಂಗೈಗಳ ಸುಕ್ಕುಗಳನ್ನು ತಿರುಗಿಸಿ ತಿರುಗಿಸಿ ನೋಡಿಕೊಳ್ಳತೊಡಗಿದಳು.

ಅಷ್ಟರಲ್ಲಿ ಧೃತರಾಷ್ಟ್ರ ಕೇಳಿದ: "ಗಾಂಧಾರಿ, ನಿನಗೆ ಕಣ್ಣು ಕಾಣುತ್ತದೆಯೆ?" "ಹೌದು, ಈ ಕೃಷ್ಣ ಪಟ್ಟಿಯನ್ನು ಬಿಚ್ಚಿ ಹಾಕಿದ. ಇವರೆಲ್ಲ ಕಾಣುತ್ತಾರೆ. ನೀನು ಕಾಣುತ್ತಿದೀಯ."

"ಕೃಷ್ಣ ಪಾಪಿ ನೀನು" ಧೃತರಾಷ್ಟ್ರ ಆಕ್ರೋ–ಶದಿಂದ ಕಿರಿಚಿದ; "ಮಕ್ಕಳನ್ನು ಕಳೆದುಕೊಂಡ

ನನ್ನಿಂದ ನನ್ನ ಹೆಂಡತಿಯನ್ನು ದೂರ ಮಾಡುವ ತಂತ್ರ ನಿನ್ನದು. ಗಾಂಧಾರೀ, ದೇವಿ ಎಂದು ಪೂಜ್ಯ ಸ್ಥಾನ ಗಳಿಸಿದ್ದ ನಿನಗೆ ಇದು ಸಲ್ಲುವುದಿಲ್ಲ. ಸಾಧಾರಣ ಹೆಂಗಸಿನ ಮಟ್ಟಕ್ಕೆ ಕೆಡುವುವ ಇವನ ಹಂಚಿಕೆಗೆ ಬಲಿಯಾಗಬೇಡ.' ಎರಡು ಕಣ್ಣುಗಳಲ್ಲೂ ಬಳಬಳನೆ ನೀರು ಸುರಿಸುತ್ತಾ ಬಿಕ್ಕಿ ಬಿಕ್ಕಿ ಅಳತೊಡಗಿದ.

ಅವಳು ಇಡೀ ದಿನ ಮೌನವಾಗಿದ್ದಳು. ಪಲ್ಲಂಗದ ಮೇಲೆ ಧೃತರಾಷ್ಟ್ರ ಎಂದಿನಂತೆ ಕುಳಿತಿದ್ದ. ಒರಗಿದ್ದ, ಮಲಗಿದ್ದ. ಅವಳೂ ಸ್ವಲ್ಪ ಹೊತ್ತು ಕುಳಿತಿದ್ದಳು. ಒರಗಿದ್ದಳು. ಅನಂತರ ಎದ್ದು ತಾನೇ ಆ ಅರಮನೆಯ ಎಲ್ಲ ಕೋಣೆಗಳಲ್ಲೂ ತಿರುಗಾಡಿ ಬಂದಳು. ಕಂಬ, ಗೋಡೆ, ಕಿಟಕಿ, ನೆಲಗಳನ್ನು ದಿಟ್ಟಿಸಿ ದಿಟ್ಟಿಸಿ ನೋಡಿದಳು. ತನ್ನ ಗಾಂಧಾರದ ಅರಮನೆಗಿಂತ ಇದು, ಅದರ ನೆನಪು ಸರಿಯಾಗಿ ಬರುತ್ತಿಲ್ಲ, ಎಷ್ಟು ವರ್ಷಗಳಾದವು ಎಂದು ಕೊಂಡು ಅಲ್ಲೇ ನಿಂತಳು. ಅಷ್ಟರಲ್ಲಿ ಕೈಲಿ ಒಂದು ಪಾತ್ರೆ ಹಿಡಿದು ಒಬ್ಬ ಗಂಡಸು ಬಂದು ನಿಂತ. ಮುದುಕ. ಕಪ್ಪು ಬಣ್ಣ. ಬಿಳಿ ತರಚಲು ಗಡ್ಡ, ಬಿಳೀ ವಸ್ತ್ರಗಳು. ಅವಳಿಗೆ ಗುರುತು ಸಿಕ್ಕಲಿಲ್ಲ. ಅವನೇ ಕೇಳಿದ.

'ಗುರುತು ಸಿಕ್ಕಲಿಲ್ಲವೆ? ಬೆಳಿಗ್ಗೆ ನೋಡಿದ್ದೆಯಲ್ಲ,'

'ಓ ವಿದುರ! ನೆನಪು ನಿಂತಿರಲಿಲ್ಲ'.

ತಾನೇ ಎರಡು ಪುಟ್ಟ ಬೋಗುಣಿಗಳಲ್ಲಿ ಅಂಬಲಿಯನ್ನು ಹಂಚಿ ಗಂಡನಿಗೂ ಕೊಟ್ಟು ತಾನೂ ತಿಂದಳು. ದಾಸಿಗಾಗಿ ಕಾಯಲಿಲ್ಲ. ಹೊಟ್ಟೆಗಿಲ್ಲದೆ ಇಬ್ಬರ ಹೊಟ್ಟೆಯೂ ಚಕ್ಕಳ ಕಟ್ಟಿತ್ತು. ಆದರೂ ಅವನು ಅಂಬಲಿಯನ್ನು ತಿನ್ನುವ ಆತುರದ ರೀತಿ ಅವಳಿಗೆ ಪ್ರಿಯ–ವೆನ್ನಿಸಲಿಲ್ಲ. ಅದರೆ ಹಾಗೆಂದು ಬಾಯಿ ಬಿಟ್ಟು ಹೇಳಲಿಲ್ಲ. ಬೋಗುಣಿಗಳನ್ನು ತೆಗೆದು ಕೋಣೆಯ ಬಾಗಿಲಿನ ಹತ್ತಿರವಿಟ್ಟ ಮೇಲೆ ಅವಳು ಅದೇ ಪಲ್ಲಂಗದ ಮೇಲೆ ಮಲಗಿದಳು. ಆಯಾಸವೆನ್ನಿಸುತ್ತಿತ್ತು. ಎಲ್ಲವನ್ನೂ ಕಳೆದುಕೊಂಡ ಮೇಲೆ ಏನೋ ಹಗುರ ಭಾವ. ನಿದ್ರೆ ಬರುತ್ತಿದ್ದರೂ ಕಣ್ಣುಗಳನ್ನು ಬಿಗ್ಗಿಸಿ ಬಿಟ್ಟು ಬಂತೆ. ದೀಪದ ಗೂಡು, ಬಾಗಿಲುಗಳನ್ನು ಮತ್ತೆ ಮತ್ತೆ ನೋಡುತ್ತಿದ್ದಳು. ಸ್ವಲ್ಪ ಹೊತ್ತಿಗೆ ಕಣ್ಣು ತನಗೆ ತಾನೇ ಮುಚ್ಚಿಕೊಂಡಿತು. ನಿದ್ರೆ ಹತ್ತಿತು. ಎಷ್ಟು ಹೊತ್ತು ನಿರ್ಮಳವಾದ ನಿದ್ದೆ ಬಂದಿತೋ ಎಷ್ಟು ಹೊತ್ತು ಕಲಸಿದಂತಹ ಅಸಂಬದ್ಧ ಚಿತ್ರಗಳ ಕನಸು ಬೆರೆಯಿತೋ ತಿಳಿಯಲಿಲ್ಲ. ಎಚ್ಚರವಾಗುವ ಹೊತ್ತಿಗೆ ಪಕ್ಕದಲ್ಲಿ ಧೃತರಾಷ್ಟ್ರ ಮೆದುವಾಗಿ ಗೊರಕೆ ಹೊಡೆಯುತ್ತಿದ್ದ. ಅಥವಾ ಗೊರಕೆಯಿಂದಲೇ ತನಗೆ ಎಚ್ಚರವಾಯಿತೋ. ಎಚ್ಚರವಾದರೂ ಕಣ್ಣು ಮುಚ್ಚಿಕೊಂಡೇ ಇತ್ತು. ಒಳಗೆಲ್ಲ ಅಭ್ಯಾಸವಾದ ಕತ್ತಲು. ಎಷ್ಟೋ ಹೊತ್ತಿನ ಮೇಲೆ ನೆನಪು ಹತ್ತಿ ಕಣ್ಣು ಬಿಟ್ಟಳು. ಕೋಣೆ ಕಾಣುತ್ತಿದೆ. ಅದರ ಹೊರಗೆ ಹೋದರೆ ಪ್ರಪಂಚವೂ ಕಾಣುತ್ತದೆ. ಎದ್ದು ಕಿಟಕಿಗಳನ್ನು ತೆಗೆದಳು. ಸರಿಯಾಗಿ ಬೆಳಕು ಕಂದಿದ್ದುದರಿಂದಲೋ. ಅಥವಾ ತನ್ನ ಕಣ್ಣುಗಳಿಗೆ ಅಭ್ಯಾಸವಾಗಿರುವುದರಿಂದಲೋ ಬೆಳಕಿನ ಝಳವು ಕಣ್ಣಿಗೆ ಚುಚ್ಚುತ್ತಿಲ್ಲ. ಕಿಟಕಿಯ ಆಚೆಗೆ ಒಂದು ಭವನದ ಗೋಪುರ ಕಾಣಿಸುತ್ತಿದೆ. ಅದೇ ಅಲ್ಲವೇ ರಾಜಸಭಾಭವನ? ಸ್ವಲ್ಪ ಹೊತ್ತು ಕಿಟಕಿಯಿಂದ ನೋಡುತ್ತಾ ನಿಂತಿದ್ದು ಹೊರಗಿನ ತೋಟಕ್ಕೆ ನಡೆದು ಗೋಡೆಯ ಹತ್ತಿರ ಹಾಸಿದ್ದ ಚಾಪೆಯ ಮೇಲೆ ಒಬ್ಬಳೇ ಕುಳಿತಳು. ದೊಡ್ಡ ತೋಟ. ತಾನೊಬ್ಬಳೇ. ಇದ್ದಕ್ಕಿದ್ದಂತೆಯೇ ಎನ್ನಿಸಿತು– ತಾನು ಈಗ ಬೇರೆಯಾಗಿದ್ದೇನೆ. ಧೃತರಾಷ್ಟ್ರ ಬೇರೆ, ತಾನು ಬೇರೆ. ಇದುವರೆಗೆ ಅವನನ್ನು ನೋಡಿರಲಿಲ್ಲ. ಅವನ ಮಕ್ಕಳನ್ನು ಹೆತ್ತು ಹೆಂಡತಿಯಾಗಿದ್ದೆ. ಈಗ ಆ ಮಕ್ಕಳಿಲ್ಲ ಸತ್ತರು. ನಾನು ನೋಡಲು ಶುರು ಮಾಡಿದ್ದೇನೆ. ಸಮಾನ ಅಂಧತ್ವವನ್ನು ಬಿಟ್ಟರೆ ತಮ್ಮಿಬ್ಬರನ್ನೂ ಬಂಧಿಸುವ ಬೇರೆ ಯಾವ ತಂತುವಿತ್ತು?–ಎಂದು ಕೊಳ್ಳುವಾಗ ತನ್ನ ಗಳಿತವಾದ ಶರೀರಕ್ಕೆ ರೆಕ್ಕೆ ಬಂದಂತಾಯಿತು.

ತಕ್ಷಣ ಕುಂತಿಯ ನೆನಪು ಬಂತು. ಎಷ್ಟು ಎತ್ತರ ಎಷ್ಟು ಅಗಲವಾದ ಮೈಕಟ್ಟು. ಈಗಲೂ ಯಾರು ನೋಡಿದರೂ ಮಹಾರಾಣಿ ಎನ್ನಬೇಕು. ಅದಕ್ಕೇ ಅಂತಹ ಶಕ್ತಿವಂತ ಮಕ್ಕಳು ಹುಟ್ಟಿದರೇನೊ! ಎಂಬ ಊಹೆ ಹುಟ್ಟಿತು. ತನ್ನಮಕ್ಕಳನ್ನು ಮಾತ್ರ ಕಣ್ಣು ಬಿಟ್ಟು ಒಮ್ಮೆಯೂ ನೋಡ

ಲಿಲ್ಲ. ಹೇಗಿದ್ದರೋ? ಧ್ವನಿಯ ನೆನಪು ಹತ್ತುತ್ತದೆ. ಎತ್ತರ ಗಾತ್ರ ರೂಪ ಬಣ್ಣಗಳ ಚಿತ್ರ ಬರುತ್ತಿಲ್ಲ. ಊಹಿಸುವುದು ಸಾಧ್ಯವಿಲ್ಲ. ಕಣ್ಣಿನ ಮುಂದೆ ಭೀಮ ಅರ್ಜುನ ನಕುಲ ಸಹದೇವರ ಚಿತ್ರವೇ ಬರುತ್ತಿದೆ. ಪಾಂಡು ಕುಂತಿಯರಿಗೆ ಧಾನ್ಯ ಸರಬರಾಜು ಮಾಡುತ್ತಿದ್ದವನು ಹೇಳಿದ್ದ ನೆನಪು ಬಂತು, ಎಷ್ಟು ವರ್ಷದ ಹಿಂದೆ? ಐವತ್ತಾರು ಕಳೆದಿರಬಹುದು. "ಈ ಧರ್ಮಜನನು ಕ್ಷತ್ರಿಯ ಸಹಜವಾದ ಹುಟ್ಟಲ್ಲ. ವೀರಪ್ರತಾಪಗಳಿಗೆ ಸರಿಯಾದ ಒಬ್ಬ ಮಗ ನನಗೆ ಬೇಕು. ಅದಕ್ಕೆ ತಕ್ಕ ಬೀಜದ ಶಕ್ತಿವಂತನನ್ನು ಹುಡುಕಿ ತರುತ್ತೇನೆ. ನೀನು ನಿಯೋಗ ಮಾಡಿಸಿಕೊಂಡು ನಾನು ಹೆಮ್ಮೆ ಪಡುವಂತಹ ಶಕ್ತಿಯ ಒಬ್ಬ ಮಗನನ್ನು ಹೆತ್ತು ಕೊಡಬೇಕು" ಅಂದನಂತೆ ಪಾಂಡುವೇ. ಅವನೇ ಹುಡುಕಿ ತಂದನಂತೆ ದೇವಲೋಕದ ಸೇನಾಪತಿ ಮರುತ್ತನನ್ನು. ಭೀಮನ ಚಿತ್ರ ಕಣ್ಣಿಗೆ ಕಟ್ಟುತ್ತದೆ. ಮತ್ತೊಮ್ಮೆ ನೋಡುವ ಆಶೆಯಾಗುತ್ತಿದೆ. ಅದೆಷ್ಟು ಎತ್ತರ, ಅದೆಷ್ಟು ವಿಶಾಲ ಭುಜ, ಎದೆಯ ಅಗಲ. ತೋಳಿನ ಗಾತ್ರ ಇಡೀ ಯುದ್ಧದಲ್ಲಿ ಮೆರೆದ ಪೌರುಷ ಅರ್ಜುನನ ರೂಪ, ಈ ವಯಸ್ಸಿನಲ್ಲೂ, ಐವತ್ತು ಕಳೆದಿಲ್ಲವೇ ಅವನಿಗೆ? ದುಶ್ಶಾಸನನ ವಯಸ್ಸು. ಈ ವಯಸ್ಸಿನಲ್ಲೂ ಎಂತಹ ಆಕರ್ಷಕ ಲಕ್ಷಣ. ಪಾಂಡು ಆರಿಸಿದನೋ, ಕುಂತಿಯೋ ಆರಿಸಿಕೊಂಡಳೋ. ದೇವಜನರ ರಾಜನನ್ನು. ಭೀಮನಂತಹ ಮಗ ಹುಟ್ಟಿದ ಮೇಲೆ ಮತ್ತೆ ಏಕೆ ನಿಯೋಗ? ನಿಯೋಗದಿಂದ ಮೂರನೆಯ ಮಗುವನ್ನು ಹೆತ್ತ ಕುಂತಿಯ ಶೀಲವನ್ನು ತಾನು ದಾಸಿಯರ ಎದುರಿಗೆಲ್ಲ ಬಯ್ಯುತ್ತಿದ್ದ ನೆನಪಾಗಿ ನಾಚಿಕೆ ಎನ್ನಿಸಲು ಶುರುವಾಯಿತು. ನಕುಲ ಸಹದೇವರ ಮೋಹಕ ರೂಪ! ಇನ್ನೂ ಮೂವತ್ತರೊಳಗಣ ಎಳೆಯರಂತೆಯೇ ಇದ್ದಾರೆ. ಎತ್ತರವಲ್ಲದ ಕುಳ್ಳವಲ್ಲದ ಭಾರಿಯಲ್ಲದ ಪೀಚಲ್ಲದ ಮಧ್ಯಮ ಮಾಟ! ಐವರನ್ನೂ ಮತ್ತೆ ಕರೆಸಿ ನೋಡುವ ಬಯಕೆಯಾಗುತ್ತಿದೆ. ಅದೇ ಸರಿ. ತನಗೆ ಬೇಕಾದ ಬೀಜಗುಣದ ಗಂಡಸನ್ನು ಆಹ್ವಾನಿಸಿ ನಿಯೋಗದಿಂದಲೇ ಮಕ್ಕಳನ್ನು ಹಡೆಯಬೇಕೆನ್ನಿಸಿತು. ಗಂಡನನ್ನು ಕೇಳುವುದೂ ಬೇಡ; ತನ್ನ ಶಿಶುವಿನ ರೂಪ ಆಕಾರ ಬಣ್ಣ ಬುದ್ಧಿ ಸ್ವಭಾವಗಳನ್ನು ಬಯಸಿ ನಿರ್ಧರಿಸುವ, ಅದಕ್ಕೆ ತಕ್ಕ ಗಂಡಸನ್ನು ಹುಡುಕಿ ಆಯ್ದು ಬೀಜವನ್ನು ಬೇಡಿ ಧರಿಸಿ ಮಕ್ಕಳನ್ನು ಹಡೆಯುವಂತಿದ್ದರೆ ಎಷ್ಟು ಚೆನ್ನ ಎನ್ನಿಸಿತು. ಇಷ್ಟವಿರಲಿ ಇಲ್ಲದಿರಲಿ ಕುರುಡನಂತೆ ಕಣ್ಣು ಕಟ್ಟಿಕೊಂಡು ಕುರುಡು ಗಂಡನ ಹೀನ ವೀರ್ಯಕ್ಕೆ ಮಾತ್ರ ಕಟ್ಟುಬಿದ್ದು ಹೀನ ತಳಿಗಳನ್ನು ಸೃಷ್ಟಿಸಿ ಅವುಗಳ ತಿರಸ್ಕಾರವನ್ನು ಸಹಿಸಿಕೊಳ್ಳುವ ಬದಲು ಕುಂತೀ ನೀನು ಪುಣ್ಯವಂತೆ. ಎಂದು ಮನಸ್ಸು ಒಳಗೇ ಹೇಳಿಕೊಂಡಿತು. ಈ ತರದ ಅವಕಾಶವಿದ್ದರೆ ಧೃತರಾಷ್ಟ್ರನಿಗೆ ನಾನೂ ವೀರರನ್ನು ವಿವೇಕಿಗಳನ್ನು ಹೆತ್ತು ಕೊಡುತ್ತಿದ್ದೆ, ಈ ಸೋಲು ಹುಟ್ಟದಂತೆ ಎಂದುಕೊಳ್ಳುವಾಗ ಒಳಗಿಂದ ಧೃತರಾಷ್ಟ್ರ 'ದಾಸೀ' ಎಂದು ಕೂಗಿದ. ದಾಸಿ ಇರಲಿಲ್ಲ. ಹೊಟ್ಟೆಗಿಲ್ಲದೆ ಕೆಲಸ ಮಾಡಲಾಗದೆ ಬರಲಿಲ್ಲವೋ ಅಥವಾ ಈ ವೈಭವನಷ್ಟ ಅರಮನೆಯಲ್ಲಿ ದುಡಿದರೆ ಕೂಲಿ ಕೊಡುವವರಿಲ್ಲವೆಂದು ತಪ್ಪಿಸಿಕೊಂಡಳೋ! ಎನ್ನಿಸುತ್ತಿರುವಾಗ ಅವನು ಕೋಪದಿಂದ ಇಡೀ ಅರಮನೆಯಲ್ಲಿ ಕರ್ಕಶ ತುಂಬುವಂತೆ ಮತ್ತೆ ಕಿರುಚಿದ. ಅವಳೇ ಎದ್ದು ಹೋಗಿ ಕೇಳಿದಳು.

'ಏನು ಬೇಕು?'

'ದಾಸಿ ಎಲ್ಲಿ?'

'ಬಂದಿಲ್ಲ.'

'ದೀಪ ಉರಿಯುತ್ತಿದೆಯೇ?'

'ಇನ್ನೂ ಹೊತ್ತು ಮುಳುಗಿಲ್ಲ.'

'ಸುಳ್ಳು ಹೇಳುತ್ತಿದೀಯೆ. ಕತ್ತಲಲ್ಲಿ ನನ್ನೊಬ್ಬನನ್ನೇ ಬಿಟ್ಟು ಹೋಗುತ್ತೀಯೆ' ಅವನು ಕಿರುಚಿದ.

ಅವಳು ಮಾತನಾಡಲಿಲ್ಲ. ಸುಮ್ಮನೆ ನಿಂತಳು.

'ನಿನ್ನ ಕಟ್ಟನ್ನು ಈಗಲೂ ತೆಗೆದು ಹಾಕಿದೀಯ?' ಅವನು ಕೇಳಿದ.

'ಬೆಳಿಗ್ಗೆಯೇ ತೆಗೆದದ್ದಾಯಿತಲ್ಲ.'

'ಕಾಣುತ್ತದೆಯೆ ಕಣ್ಣು?'

'ಹೂಂ.'

ಅವನು ಮಾತನಾಡಲಿಲ್ಲ. ನಿಟ್ಟುಸಿರು ಬಿಟ್ಟ. ಅವನ ಸೀಯ್ದ ಕಣ್ಣುಗಳು ಒದ್ದೆಯಾದುದು ಅವಳಿಗೆ ಕಾಣಿಸಿತು.

'ಯಾಕೆ ದುಃಖ?'–ಅವಳು ಕೇಳಿದಳು.

# ಒಸಡುಗಳ ತೊಂದರೆಯಿಂದ ಪರಿಹಾರ ಪಡೆದ ಅದ್ಭುತ ವರದಿಗಳು

ಫೋರ್‌ಹನ್ಸ್ ಉಪಯೋಗಿಸುತ್ತಿರುವವರು ಸ್ವಸಂತೋಷದಿಂದ ಬರೆದ ಅನೇಕ ಪತ್ರಗಳಲ್ಲಿ ಎರಡು ಇಲ್ಲಿವೆ

**"...ಹಲ್ಲುಗಳನ್ನು ಸ್ವಚ್ಛಗೊಳಿಸುತ್ತದೆ, ಅಷ್ಟೇ ಅಲ್ಲ, ಹಲ್ಲಿನ ತೊಂದರೆಗಳನ್ನು ದೂರಗೊಳಿಸುತ್ತದೆ..."**

"...ನನಗೆ ಅಥವಾ ನಮ್ಮ ಪರಿವಾರದಲ್ಲಿ ಯಾರಿಗಾದರೂ ಹಲ್ಲಿನ ಮತ್ತು ಒಸಡುಗಳ ನೋವಿನ ಬಾಧೆಯಾದಾಗ, ನಾವು ಫೋರ್‌ಹನ್ಸ್ ಟೂಥ್‌ಪೇಸ್ಟ್ ಉಪಯೋಗಿಸುತ್ತೇವೆ...ನೋವು ಕೂಡಲೇ ಕಡಿಮೆಯಾಗುತ್ತದೆ. ನಿಮ್ಮ ಫೋರ್‌ಹನ್ಸ್ ಟೂಥ್‌ಪೇಸ್ಟ್ ಹಲ್ಲುಗಳನ್ನು ಸ್ವಚ್ಛಗೊಳಿಸುತ್ತದೆ, ಅಷ್ಟೇ ಅಲ್ಲ, ಹಲ್ಲಿನ ತೊಂದರೆಗಳನ್ನು ದೂರಗೊಳಿಸುತ್ತದೆ..."

(ಸಹಿ/- ದೀಪಾ ಶರದ ಪಟವರ್ಧನ್, ಬೊಂಬಾಯಿ)

**"...ಉತ್ತಮ ಒಸಡು ಪಡೆಯಲು ಸಹಾಯ ಮಾಡುತ್ತದೆ..."**

"...ಫೋರ್‌ಹನ್ಸ್‌ನ ಗುಣಗಳು ಅದ್ವಿತೀಯವಾಗಿವೆ ಎಂದರೆ ಅತಿಶಯೋಕ್ತಿಯಲ್ಲ. ಅದನ್ನು ಹೊಗಳಲು ನಾನು ಹಿಂಜರಿಯುವುದಿಲ್ಲ. ಇದು ವಿಶೇಷವಾಗಿ ಒಸಡು ಹಾಗೂ ಹಲ್ಲುಗಳ ತೊಂದರೆಯಿಂದ ಬಳಲುವವರಿಗೆಲ್ಲ ಆದರ್ಶ ಪೇಸ್ಟ್ ಆಗಿದೆ..."

"...ನನ್ನ ಕಾಲೇಜು ಜೀವನದಲ್ಲಿ ನಾನು ಒಸಡುಗಳ ತೊಂದರೆಗೆ ಬಲಿಯಾಗಿದ್ದೆ. ಆದರೆ ನಮ್ಮ ಕಾಲೇಜಿನ ಡಾಕ್ಟರರು ಉಪಯೋಗಿಸಲು ಶಿಫಾರಸು ಮಾಡಿದ ಪೇಸ್ಟ್ ನನಗೆ ಸಹಾಯ ಮಾಡಿತು ಮತ್ತು ಇದು ಕೂಡ ಉತ್ತಮ ಒಸಡು ಪಡೆಯಲು ಸಹಾಯ ಮಾಡುತ್ತಿದೆ..."

(ಸಹಿ/- ಗೌರ್ ಕಿಶೋರ್ ಚಕ್ರಬರ್ತಿ ಬರ್ದ್ವಾನ್)

(ಈ ಪತ್ರಗಳ ಮತ್ತು ಇಂಥ ಪತ್ರಗಳ ಫೋಟೋಸ್ಟ್ಯಾಟ್ ಪ್ರತಿಗಳನ್ನು ಜೆಫ್ರೀ ಮೇನರ್ಸ್ ಅಂಡ್ ಕಂ. ಲಿ. ಅವರ ಯಾವುದೇ ಆಫೀಸಿನಲ್ಲಿ ನೋಡಬಹುದು.)

## ದಂತವೈದ್ಯರಿಂದ ಸೃಷ್ಟಿಸಲ್ಪಟ್ಟ ಟೂಥ್‌ಪೇಸ್ಟ್ ಆದ ಫೋರ್‌ಹನ್ಸ್‌ನಿಂದ ನಿಮ್ಮ ಒಸಡುಗಳನ್ನು ರಕ್ಷಿಸಿಕೊಳ್ಳಿರಿ




### ಡಾಕ್ಟರ್ ಫೋರ್‌ಹನ್ಸ್ ಅವರ ಅಪ್ರತಿಮ ಫಾರ್ಮ್ಯುಲಾ

ಡಾಕ್ಟರ್ ಫೋರ್‌ಹನ್ಸ್ ಅವರ ಫಾರ್ಮ್ಯುಲಾ ತನ್ನ ಪ್ರಭಾವಕಾರಿ ಬಂಧಕ (ಅಸ್ಟ್ರಿಂಜಂಟ್) ಕ್ರಿಯೆಯಿಂದ ನಿಮ್ಮ ಒಸಡುಗಳ ಹೊರಮೈಯನ್ನು ಗಟ್ಟಿಗೊಳಿಸಿ ನಿಮಗೆ ಒಸಡುಗಳ ತೊಂದರೆಯನ್ನು ಪ್ರತಿರೋಧಿಸುವ ಶಕ್ತಿಯನ್ನು ನೀಡುತ್ತದೆ.

### ದಂತವೈದ್ಯರು ಹೇಳುತ್ತಾರೆ

ಒಸಡುಗಳ ತೊಂದರೆಯಿಂದ ಆರೋಗ್ಯಕರ ಹಲ್ಲುಗಳು ಕೂಡ ಬೀಳಬಹುದು. ಪ್ರತಿ ರಾತ್ರಿ ಮತ್ತು ಮುಂಜಾನೆ ನಿಮ್ಮ ಹಲ್ಲುಗಳನ್ನು ಸ್ವಚ್ಛಗೊಳಿಸಲು ಹಾಗೂ ಒಸಡುಗಳನ್ನು ಮಸಾಜು ಮಾಡಲು ಫೋರ್‌ಹನ್ಸ್ ಟೂಥ್‌ಪೇಸ್ಟ್ ಮತ್ತು ಫೋರ್‌ಹನ್ಸ್ ಡಬ್ಬಲ್ ಆ್ಯಕ್ಶನ್ ಟೂಥ್‌ಬ್ರಶ್ ಉಪಯೋಗಿಸಿರಿ.

ಒಸಡುಗಳು ಕೆಟ್ಟರೆ, ದೇಹಾರೋಗ್ಯ ಕೆಡುವುದು

**ಉಚಿತ!** "ನಿಮ್ಮ ಹಲ್ಲು ಮತ್ತು ಒಸಡುಗಳ ರಕ್ಷಣೆ" ದಂತಸಂರಕ್ಷಣೆಯ ಬಗ್ಗೆ ಒಂದು ವರ್ಣರಂಜಿತ ಬೋಧಪ್ರದ ಪುಸ್ತಿಕೆ. ಅಂಚೆವೆಚ್ಚಕ್ಕಾಗಿ 25 ಪೈಸೆಯ ಸ್ಟ್ಯಾಂಪನ್ನು ಜೊತೆಗಿಟ್ಟು ಈ ವಿಳಾಸಕ್ಕೆ ಬರೆಯಿರಿ: ಫೋರ್‌ಹನ್ಸ್ ಡೆಂಟಲ್ ಎಡ್ವೈಜರಿ ಬ್ಯೂರೋ, ಪೋಸ್ಟ್ ಬ್ಯಾಗ್ ನಂ. 11463, ಡಿಪಾರ್ಟ್‌ಮೆಂಟ್ T139-220 ಬೊಂಬಾಯಿ-400 020. ಬೇಕಾದ ಭಾಷೆಯನ್ನು ನಮೂದಿಸಿರಿ.

## ಫೋರ್‌ಹನ್ಸ್

ದಂತವೈದ್ಯರಿಂದ ಸೃಷ್ಟಿಸಲ್ಪಟ್ಟ ಟೂಥ್‌ಪೇಸ್ಟ್

220F-172 KAN

Regd. T.M: Geoffrey Manners & Co. Ltd.

'ಮಕ್ಕಳೆಲ್ಲ ಸತ್ತರು. ನೀನೂ ದೂರವಾದೆ ಅಂತ' ಎಂದು ಅವನು ಗೋಡೆಯ ಕಡೆ ಹೊರಳಿ ಕಂಬಳಿ ಮುಸುಕು ಹಾಕಿಕೊಂಡ. ಅವಳು ಅಲ್ಲೇ ನಿಂತಿದ್ದಳು. ಅವನಿಗೆ ಏನಾದರೂ ಸಮಾಧಾನ ಹೇಳುವ, ತಾನು ದೂರವಾಗಿಲ್ಲವೆಂದು ಆಶ್ವಾಸ-ಕೊಡುವ ಮನಸ್ಸು. ಆದರೆ ಮಾತು ರೂಪು ಗೊಳ್ಳುತ್ತಿಲ್ಲ. ಸ್ವಲ್ಪ ಹೊತ್ತಿನ ನಂತರ ಅವನು ಕೂಗಿದ:

'ದಾಸೀ.'

'ಯಾವ ದಾಸಿಯೂ ಇಲ್ಲ: ಏನು ಬೇಕು?'

'ಜಲಬಾಧೆಗೆ ಹೋಗಬೇಕು.'

'ನಾನು ಕರೆದುಕೊಂಡು ಹೋಗುತ್ತೀನಿ ಬಾ' ಎಂದು ಅವಳು ಮುಂದೆ ನಡೆದು ಕೈ ಹಿಡಿದಳು.

'ಬೇಡ-ಬೇಡ' ಎಂದು ಅವನು ಕೊಸರಿದ. 'ದಾಸಿಯೇ ಸರಿ. ನಿನ್ನ ಜೊತೆಗೆ ಹೋಗಲು ನಾಚಿಕೆಯಾಗುತ್ತೆ. ನಿನಗೆ ಕಣ್ಣು ಕಾಣುತ್ತದಲ್ಲ ಈಗ' ಎಂದು ಕೈಯನ್ನು ಕಿತ್ತು ಕಂಬಳಿ ಯೊಳಕ್ಕೆ ಸೇರಿಸಿ ಮತ್ತೆ ಮುಸುಕು ಹಾಕಿ ಕೊಂಡ. ಅವಳು ಕಾಯ್ದು ನಿಂತಳು. ಅವನು ಹೊರಳಲಿಲ್ಲ. ಮಿಸುಕಲಿಲ್ಲ. ಒಂದು ನಿಮಿಷವೂ ಜಲಬಾಧೆಯನ್ನು ತಡೆಯುವುದು ಅವನಿಗೆ ಕಷ್ಟವೆಂದು ಅವಳಿಗೆ ನೆನಪಾಯಿತು. ಹೊರಗೆ ತೊಟ್ಟಿಗೆ ನಡೆದಳು. ಅಲ್ಲಿಂದ ದೊಡ್ಡ ಅಂಗ ಳಕ್ಕೆ ಬಂದಳು. ಅದನ್ನು ದಾಟಿ ಪಡಸಾಲೆ ಯನ್ನು ದಾಟಿದಳು. ಅದರಾಚೆಯ ಹೊರ ತೊಟ್ಟಿಯಲ್ಲಿ ನಡೆದು ಎಷ್ಟು ದೊಡ್ಡ ಅರ ಮನೆ ಇದು, ದೊಡ್ಡ ಬಾಗಿಲನ್ನು ದಾಟಿ ಮುಂದಿನ ಪೌಳಿಯ ಬಯಲಿನಲ್ಲಿ ದಿಟ್ಟಿಸಿ ನೋಡಿದಳು. ಹೊತ್ತು ಮುಳುಗುತ್ತಿತ್ತು, ರಾಜಸಭಾಭವನದ ಹತ್ತಿರ ಯಾರೋ ಒಬ್ಬಳು. ದಾಸಿಯೇ ಇರುವಂತೆ ಕಾಣಿಸುತ್ತದೆ. ಕೈಸನ್ನೆ ಮಾಡಿದಾಗ ಬಂದಳು. ಹೌದು, ಮಂಡಿಯ ಕೆಳಗೆ ಬೆತ್ತಲು, ತಲೆಗೆ ಮುಸುಕಿಲ್ಲ, ತೋಳು ಗಳು ಬೆತ್ತಲು, ಹತ್ತಿರ ಬಂದು ನಿಂತಳು.

'ನಮ್ಮ ಅರಮನೆಯ ದಾಸಿಯೆ ನೀನು?'

'ಹೌದು ದೇವಿ.'

'ಮಹರಾಜ ಕರೆಯುತ್ತಿದ್ದಾನೆ. ಹೋಗಿ ಕೇಳಿ ಬಾ,' ಗಾಂಧಾರಿ ಅಲ್ಲಿಯೇ ನಿಂತಳು. ಸೂರ್ಯ ಮುಳುಗುತ್ತಿದೆ. ಹಳದಿ ಬಣ್ಣ. ರಾಜಸಭಾಭವನ ಅಡ್ಡವಾಗಿದೆ. ಇಲ್ಲದಿದ್ದರೆ ಚೆಂದ ಕಾಣಿಸುತ್ತಿತ್ತು. ತನ್ನ ಊರಿನ ನಡು ವೆಯೇ ಇರುವ ಬೆಟ್ಟದ ಶಿಖರವನ್ನು ಹತ್ತಿ ನೋಡುತ್ತಿದ್ದ ಸೂರ್ಯಾಸ್ತ ಸೂರ್ಯೋದಯಗಳ ನೆನಪು ಹತ್ತಿತು. ಮದುವೆಯಾದ ಮೇಲೆ ಹೆಣ್ಣುಮಕ್ಕಳು ವರ್ಷಕ್ಕೊಮ್ಮೆ ಎರಡು ವರ್ಷಕ್ಕೊಮ್ಮೆಯಾದರೂ ತೌರಿಗೆ ಹೋಗು-ತ್ತಾರೆ. ನಾನು ಒಮ್ಮೆಯೂ ಹೋಗಲಿಲ್ಲ. ಏನು ನೋಡಲು ಹೋಗಬೇಕು ಕಟ್ಟಿ ಕೊಂಡ ಕಣ್ಣಿನಿಂದ? ಜೊತೆಗೆ ಪುಕ್ಕಲ, ಲೋಭಿ ಅಪ್ಪನನ್ನು ನೋಡಕೂಡದೆಂಬ ಹಟ. ಈಗ ಹೋದರೂ ಗಾಂಧಾರ ನನ್ನದಲ್ಲ, ಎಲ್ಲ ಕಡಿದು ಹೋಗಿದೆ ಎಂಬ ಅರಿವಾಗಿ ಕಣ್ಣು ತುಂಬಿ ಬಂತು. ಎದುರಿನ ಇಡೀ ದೃಶ್ಯವು ಒದ್ದೆಯಾ ಯಿತು. ದಾಸಿ ಹಿಂತಿರುಗಿದಳು.

'ನೋಡು, ವಿದುರನ ಮನೆಗೆ ಹೋಗಿ ಅಲ್ಲಿ ಕೃಷ್ಣ. ಅಂತ ಇದ್ದಾನೆ, ಪಾಂಡವರ ಜೊತೆ. ನಾನು ಕರೆದೆ ಅಂತ ಹೇಳುತ್ತೀಯ?'

ದಾಸಿ ಬಯಲನ್ನು ದಾಟಿ ಎಡಕ್ಕೆ ತಿರುಗಿ, ನಡೆದಳು. ಓ, ವಿದುರನ ಮನೆ ಆ ಕಡೆ-ಗಿದೆ ಎಂದು ಗಾಂಧಾರಿಗೆ ಅರ್ಥವಾಯಿತು. ನದಿಯ ದಂಡೆಯಲ್ಲಿ ಮನೆ ಕಟ್ಟಿಕೊಂಡು ಹೊರಟು ಹೋದ. ಈ ಊರ ನದಿಯನ್ನು ನೋಡ ಬೇಕು. ತುಂಬ ದೊಡ್ಡದಂತೆ, ನಮ್ಮ ದೇಶದ ಹೊಳೆಗಳಂತಲ್ಲವಂತೆ, ಬಲು ಗಂಭೀರವಂತೆ ಎಂದುಕೊಳ್ಳುತ್ತಿರುವಾಗ ಸೂರ್ಯ ಪೂರ್ತಿ ಮುಳುಗಿತು, ನಸುಗತ್ತಲು. ಇನ್ನು ಸ್ವಲ್ಪ ಹೊತ್ತಿಗೆ ಪೂರ್ತಿ ಕತ್ತಲಾಗುತ್ತದೆ. ದೀಪ ವಿಲ್ಲದಿದ್ದರೆ ಕಣ್ಣು ಕಟ್ಟಿಕೊಂಡಂತೆಯೇ ಎನ್ನಿ-ಸುವಾಗ ಚಳಿಯಾಯಿತು. ಒಳಗೆ ನಡೆದಳು.

ಸ್ವಲ್ಪ ಹೊತ್ತಿಗೆ ಕೃಷ್ಣ ಬಂದ.

'ತಾಯಿ, ಹೇಗಿವೆ ಕಣ್ಣುಗಳು?'

'ಇದೀಗ ಸೂರ್ಯ ಮುಳುಗುವಾಗ ಹೊರಗೆ ಹೋಗಿದ್ದೆ. ಸ್ವಲ್ಪ ನೋವು ಎನ್ನಿಸಿತು.'

'ಎರಡು ದಿನದಲ್ಲಿ ಅಭ್ಯಾಸವಾಗುತ್ತದೆ.'

'ಕೃಷ್ಣ ನನಗೊಂದು ಆಶೆ ಹುಟ್ಟಿದೆ. ಅದನ್ನು ಈಡೇರಿಸಿ ಕೊಡಲು ನಮ್ಮಲ್ಲಿ ಯಾರೂ ಗಂಡಸು

ಉಳಿದಿಲ್ಲ. ಕುಂತಿಯು ಮಕ್ಕಳನ್ನು ಕೇಳಲು ಮುಜುಗರ, ನೀನಾದರೆ ಸರಿ ಅಂತ ಹೇಳಿ ಕಳಿಸಿದೆ.'

'ಏನು ಹೇಳು.'

'ಸಾಧ್ಯವಾದರೆ ನನ್ನ ಮಕ್ಕಳ ಹೆಣವನ್ನಾದರೂ ನೋಡಬೇಕು.' ಕೃಷ್ಣ ಮಾತನಾಡಲಿಲ್ಲ, ತಲೆ ತಗ್ಗಿಸಿ ನಿಂತ. 'ಯಾಕೆ ಕೃಷ್ಣ?'–ಅವಳು ನೆನೆದ ಧ್ವನಿಯಲ್ಲಿ ಕೇಳಿದಳು.

'ಯಾರು ಎಲ್ಲಿ ಸತ್ತರೆಂಬ ಬಯಲಿನ ನೆನಪು ಹುಟ್ಟಬಹುದು. ಆದರೆ ಹದ್ದು, ನಾಯಿ-ನರಿಗಳು ರಾಜರು ಸಾಮಾನ್ಯರು ಎಂಬ ಭೇದವಿಲ್ಲದೆ ಎಲ್ಲರ ಹೆಣಗಳನ್ನೂ ಕಿತ್ತು ಗುರುತನ್ನು ಅಳಿಸಿಬಿಟ್ಟಿರುತ್ತವೆ. ಇಲ್ಲಿದ್ದರೂ ಹೆಣಗಳು ತಾವೇ ಕೊಳೆತಿರುತ್ತವೆ.'

'ಅದು ನನಗೆ ಗೊತ್ತು. ಆದರೂ ಪ್ರಯತ್ನಿಸುವ ಚಪಲ. ಯುದ್ಧರಂಗ ಹೇಗಿರುತ್ತದೆಂದು ಕಣ್ಣಿನಿಂದ ಕಾಣುವ ಆಶೆ.'

ನಾಳೆ ಬೆಳಿಗ್ಗೆ ಸೂರ್ಯೋದಯಕ್ಕೆ ಮೊದಲೇ ತಾನು ರಥದೊಡನೆ ಬರುವುದಾಗಿ ಕೃಷ್ಣ ಹೇಳಿ ಹೋದ.

**ನ**ಸುಕಿನ ಕೊರೆಯುವ ಚಳಿಯಲ್ಲಿ ಕೃಷ್ಣನ ಕೈ ಹಿಡಿದು ರಥ ಹತ್ತುವಾಗ ಒಬ್ಬ ಹೆಂಗಸು ಕುಳಿತಿದ್ದುದು ಕಾಣಿತು.

'ಯಾರು ನೀನು?'–ಗಾಂಧಾರಿ ಕೇಳಿದಳು.

'ಕಣ್ಣಿನ ನೆನಪು ಸರಿಯಾಗಿ ಕೂರಲು ಸಮಯ ಬೇಕು. ಕುಂತಿಯಲ್ಲವೇ?' ಎಂದು ಕೃಷ್ಣ ಸಾರಥಿಯ ಸ್ಥಾನದಲ್ಲಿ ಕುಳಿತು ಕುದುರೆಗೆ ಸನ್ನೆ ಮಾಡಿದ.

ರಥವು ಹಸ್ತಿನಾವತಿಯನ್ನು ದಾಟಿ ಬಡಬಲ ಹೊಲಗಳ ನಡುವಣ ದಾರಿಯಲ್ಲಿ ಹೋಗುವಾಗ ಗಾಂಧಾರಿಗೆ ಜೋಳು ಬೋಳಾಗಿ ಕಾಣಿಸಿತು. ಅಲ್ಲದೆ ಮನಸ್ಸಿಗೆ ಮುಜುಗರ. ನನ್ನ ಮಕ್ಕಳ ಹೆಣವನ್ನು ಹುಡುಕಿಕೊಂಡು ನಾನು ಹೋಗುತ್ತಿದ್ದೇನೆ. ತನ್ನ ಮಕ್ಕಳು ಕೊಂದ ಹೆಣಗಳನ್ನು ನೋಡಲು ಇವಳೂ ಬರುತ್ತಿದ್ದಾಳೆ ನನ್ನ ಜೊತೆಯೇ ಎಂಬ ತಿರಸ್ಕಾರ.

'ಕೃಷ್ಣ, ನನಗೆ ಅಲ್ಲಿಗೆ ಹೋಗಿ ನೋಡುವ ಇಚ್ಛೆ ಇಲ್ಲ, ವಾಪಸು ಹೋಗೋಣ' ಎಂದಳು. ಆದರೆ ಕೃಷ್ಣ ಹೇಳಿದ: 'ಹೊರಟದ್ದಾಗಿದೆ. ಪಯಣಕ್ಕೆ ಬೇಕಾದ ಆಹಾರ ನೀರು ಮೊದಲಾಗಿ ಎಲ್ಲವನ್ನೂ ಕಟ್ಟಿಸಿ ತಂದಾಗಿದೆ. ನೀವು ಕುಂತಿ ಓರಗಿತ್ತಿ, ಅಕ್ಕ ತಂಗಿಯರು, ಜೊತೆಗಿರಲಿ ಎಂದು ಕರೆತಂದೆ. ಹಳೆಯ ವೈಷಮ್ಯ ಅವಳಿಗೂ ಇಲ್ಲ, ನಿನಗೂ ಇಲ್ಲ. ಅಲ್ಲವೆ?'

ಗಾಂಧಾರಿ ಸುಮ್ಮನಾದಳು. ಈ ಕೃಷ್ಣನ ಬುದ್ಧಿ ಬಲು ಚುರುಕು. ಇನ್ನೊಬ್ಬರು ಮನಸ್ಸಿನಲ್ಲಿರುವುದನ್ನು ಗುರಿ ಇಟ್ಟಂತೆ ಗ್ರಹಿಸಿಬಿಡುತ್ತಾನೆ ಎಂದುಕೊಂಡಳು.

ಕುಂತಿ ಮಾತನಾಡಿದಳು: 'ಗಾಂಧಾರಿ, ಕರ್ಣನ ವಿಷಯ ನಿನಗೆ ಗೊತ್ತಿದೆಯೋ ಇಲ್ಲವೋ. ಅವನು ನಿನ್ನನ್ನು ತಾಯಿ ಅಂತ ತಿಳಿದಿದ್ದ.'

'ವಿದುರ ಹೇಳಿದ. ಅವನು ನಿನ್ನನ್ನು ಯುದ್ಧರಂಗಕ್ಕೆ ಕರೆದೊಯ್ದಿದ್ದನಂತೆ' ಎಂದು ಗಾಂಧಾರಿ ಕುಂತಿಯ ಮುಖವನ್ನು ದಿಟ್ಟಿಸಿ ನೋಡಿದಳು. 'ನಿನ್ನದೇ ಮುಖವಂತೆ, ನಿನ್ನದೇ ಉದ್ದ ತೋಳು, ದೊಡ್ಡ ಭುಜವಂತೆ. ವಿದುರ ವರ್ಣಿಸಿದ. ನನ್ನ ಮುಂಗಾಲು ಮುಟ್ಟುತ್ತಿದ್ದ ಅವನ ಅಂಗೈಗಳು ಬಲಿಷ್ಠವಾದುವು, ಅಗಲವಾದುವು ಎಂದು ಮಾತ್ರ ನೇರವಾಗಿ ಗೊತ್ತಿತ್ತು. ಉಳಿದದ್ದೆಲ್ಲ ಕೇಳಿ ತಿಳಿದದ್ದು.'

ಕುಂತಿ ಗಾಂಧಾರಿಯ ಕೈಗಳನ್ನು ಹಿಡಿದಳು. ಅವಳ ಕಣ್ಣು ತುಂಬಿಕೊಂಡವು. ಗಾಂಧಾರಿಯ ಕಣ್ಣುಗಳೂ ತುಂಬಿ ಬಂದವು. ರಥ ವೇಗವಾಗಿ ಹೋಗುತ್ತಿತ್ತು. ಕೃಷ್ಣ ಮಾತನಾಡದೆ ತನ್ನ ಪಾಡಿಗೆ ತಾನಿದ್ದ. ಏಳೆಂಟು ಘಳಿಗೆ ಕಳೆದು ಒಂದು ಹಳ್ಳದ ಹತ್ತಿರ ರಥ ನಿಲ್ಲಿಸಿ ಅವನು ಕುದುರೆಗಳಿಗೆ ನೀರು ಕುಡಿಸಿದ. ಕುಂತಿ ತಂದಿದ್ದ ಮೆತ್ತನೆಯ ಅನ್ನವನ್ನು ಗಾಂಧಾರಿಗೆ ಕೊಟ್ಟಳು. ಕೃಷ್ಣನಿಗೆ ರೊಟ್ಟಿ ಕೊಟ್ಟು ತಾನು ಅನ್ನ ಹಿಡಿದು ಕುಳಿತಳು.

ಮತ್ತೆ ಪ್ರಯಾಣ ಹೊರಟಾಗ ಗಾಂಧಾರಿ ಅಂದಳು: 'ಕುಂತಿ. ಧೃತರಾಷ್ಟ್ರನಿಗೆ ಮದುವೆ ಮಾಡಿ ನನ್ನನ್ನು ತಂದ ಸುದ್ದಿ ತಿಳಿದಾಗ, ಮೊದಲು ಮಗು ಹೆರದಿದ್ದರೆ ರಾಜ್ಯ ದಕ್ಕುವುದಿಲ್ಲವೆಂದು ನೀನು ಚಡಪಡಿಸಿದೆಯಂತೆ. ಪಾಂಡುವೂ ಚಡಪಡಿಸಿ ನಿನಗೆ ನಿಯೋಗದ ಸಲಹೆ ಮಾಡಿದನಂತೆ. ಅಲ್ಲವೆ? ನನಗೂ ಧೃತರಾಷ್ಟ್ರನ

ಸುದ್ದಿ ಬಂತು. ನನ್ನ ವಿಷಯದಲ್ಲಿ ನಿನಗೆ ಮತ್ಸರವಿತ್ತು. ಮೊದಲು ಮಗು ಹೆತ್ತೆ ಎಂದು ನಿನ್ನ ಬಗೆಗೆ ನನಗೂ ಮತ್ಸರವಿತ್ತು. ಅನಂತರ ಅದು ಹಾಗೆಯೇ ಬೆಳೆಯಿತು. ಈಗ ನಿನ್ನ ಮಕ್ಕಳು ಗೆದ್ದರೂ ಅದರಿಂದ ಉಬ್ಬದೇ ದೂರ ಉಳಿದಿದ್ದೀಯೆಂತೆ ನೀನು. ವಿದುರ ಹೇಳಿದ.'

ಮಧ್ಯಾಹ್ನದ ಹೊತ್ತಿಗೆ ಅವರು ಯುದ್ಧದ ಸ್ಥಳವನ್ನು ತಲುಪಿದರು. ಈಗ ರಣಹದ್ದುಗಳ ಸಂಖ್ಯೆ ಕಡಿಮೆಯಾಗಿತ್ತು. ನಾಯಿ ನರಿಗಳೂ ಕಡಿಮೆಯಾಗಿದ್ದವು. ಹಲವು ಕಡೆಗಳಲ್ಲಿ ಹೆಣಗಳ ರಕ್ತಮಾಂಸಗಳು ಕೊಳೆತು ಕರಗಿ ಮೂಳೆಯ ರಚನೆಗಳು ಮಾತ್ರ ಇದ್ದವು. ವಾಸನೆಯೂ ಇಳಿದಿತ್ತು. ಮತ್ತೆ ಕೆಲವು ಕಡೆ ಇನ್ನೂ ದಟ್ಟವಾದ ವಾಸನೆ. ಕೃಷ್ಣ ಒಂದೊಂದು ಬಯಲನ್ನೂ ತೋರಿ-ಸುತ್ತಾ ಮುಖ್ಯ ಮುಖ್ಯವಾದ ಯುದ್ಧಗಳನ್ನು ವಿವರಿಸುತ್ತಿದ್ದ. ಮುಂದೆ ಒಂದು ಕಡೆ ಬಂದಾಗ ಇಡೀ ಬಯಲನ್ನು ನೂರಾರು ಜನರು ಶೋಧಿಸುತ್ತಿದ್ದರು, ಹೆಣಗಳನ್ನು ಉರುಡಿಸಿ ಉರುಡಿಸಿ ರಥಗಳನ್ನು ನೂಕಿ ಉರುಳಿಸಿ. 'ಕೃಷ್ಣ, ಏನು ಮಾಡುತ್ತಿದ್ದಾರೆ ಅವರು?' ಗಾಂಧಾರಿ ಕೇಳಿದಳು.

'ದೊಡ್ಡ ಯುದ್ಧ ನಡೆದ ಜಾಗವಿದು. ದ್ರೋಣ ಸತ್ತ ದಿನವೋ ಏನೊ, ಅಥವಾ ಜಯದ್ರಥ ಸತ್ತ ದಿನವಿರಬೇಕು. ಹಲವು ಮುಖ್ಯರು ಹತರಾದರು. ಅವರ ಒಡವೆ – ವಸ್ತ್ರ, ಬಿಲ್ಲಿನ ಲೋಹ, ರಥ ಮತ್ತು ಕುದುರೆಗಳ ಅಲಂಕಾರದ ವಸ್ತುಗಳನ್ನು ಆರಿಸಿಕೊಳ್ಳುತ್ತಿರಬೇಕು.'

'ಯಾರು ಅವರು?'

'ಯಾರೋ ಸುತ್ತಮುತ್ತಣ ಜನಗಳು. ನಿಮ್ಮ ಕುರುರಾಜ್ಯದ ಪ್ರಜೆಗಳೇ ಇರಬೇಕು. ಒಂದೊಂದಾಗಿ ಯುದ್ಧದ ಬಯಲುಗಳನ್ನು ಶೋಧಿಸುತ್ತಿದ್ದಾರೆ.'

ಗಾಂಧಾರಿ ದಿಟ್ಟಿಸಿ ನೋಡಿದಳು. ಮಧ್ಯಾ-ಹ್ನದ ಬಿಸಿಲಿನಲ್ಲಿ ಕಣ್ಣುಗಳು ಸ್ವಲ್ಪ ನೋಯುತ್ತಿದ್ದವು. ಆದರೆ ಸ್ಪಷ್ಟವಾಗಿ ಕಾಣುತ್ತಿತ್ತು. ಹೆಣಗಳನ್ನು ಕಾಲಿನಿಂದ ಒದೆದು ಉರುಡಿಸಿ, ಕವಚ ವಸ್ತ್ರ ಮೊದಲಾದುವುವನ್ನು ಬಿಚ್ಚಿಕೊಳ್ಳುತ್ತಿದ್ದರು. ಕೆಲವರು ಚೂರಿ ಹಾಕಿ ಕಿವಿಗಳನ್ನೇ ಕೊಯ್ದು ಕರ್ಣಕುಂಡಲಗಳನ್ನಿರಬೇಕು, ಕಿತ್ತುಕೊಳ್ಳುತ್ತಿದ್ದರು. ಯಾರೋ ಒಬ್ಬ ಕಿರೀಟವನ್ನು ಎತ್ತಿ ಹಿಡಿದು ನೋಡುತ್ತಿದ್ದ. ಇನ್ನೊಬ್ಬ ಸತ್ತ ಕುದುರೆಯ ಮುಖದಿಂದ ಅಲಂಕಾರದ ಮುಖವಾಡವನ್ನು ಕೀಳುತ್ತಿದ್ದ.

'ಕೃಷ್ಣ, ನಾವು ಅರಮನೆಯಲ್ಲಿ ಇಷ್ಟು ಶೋಕ ಅನುಭವಿಸುತ್ತಿರುವಾಗ ನಮ್ಮ ಪ್ರಜೆಗಳು ತಮಗೂ ದುಃಖಕ್ಕೂ ಸಂಬಂಧವೇ ಇಲ್ಲವೆಂಬಂತೆ ಹೆಣಗಳಿಂದ ಇವುಗಳನ್ನು ಕಿತ್ತುಕೊಳ್ಳಬಹುದೆ?' ಗಾಂಧಾರಿ ಕೇಳಿದಳು.

'ಅವರ ಬಂಧು ಬಾಂಧವರೂ ಈ ಯುದ್ಧದಲ್ಲಿ ಸತ್ತಿದ್ದಾರೆ.'

ಗಾಂಧಾರಿ ಆ ದೃಶ್ಯವನ್ನೇ ನೋಡುತ್ತಾ ರಥದಲ್ಲಿ ಕುಳಿತಳು. ಅನಂತರ ಉದ್ಗರಿಸಿದಳು, 'ನೀನು ಹೇಳಿದುದು ಸರಿ. ಇಲ್ಲಿ ಯಾವ ಹೆಣದ ಗುರುತೂ

---




"ಸಂಗೀತ ಪಾಠ ಯಾವಾಗ ಮುಗಿಯುತ್ತೇಂತ ಹೇಳಿ ನೋಡ್ತೀ, ಆಮೇಲೆ 'ಶ್ರವಣ ಸಾಧನ' ತಗೊಳ್ತೀನಿ."

ಸಿಕ್ಕುವುದಿಲ್ಲ. ನನ್ನ ಮಕ್ಕಳದೂ ಸಿಕ್ಕುವುದಿಲ್ಲ. ಹಿಂತಿರುಗಿ ಹೋಗೋಣ ನಡಿ.'

ಕೃಷ್ಣ ರಥವನ್ನು ತಿರುಗಿಸಿದ.

ಮರುಪ್ರಯಾಣ ಮಾಡುವಾಗ ಗಾಂಧಾರಿ ಬಳಲಿದ್ದಳು. ಕುಂತಿಯೂ ಬಳಲಿದ್ದಳು. ಯಾರೂ ಮಾತನಾಡಲಿಲ್ಲ. ಓಡುವ ರಥದಲ್ಲಿ ಇಬ್ಬರೂ ಒಬ್ಬರ ಮಗ್ಗುಲಲ್ಲಿ ಒಬ್ಬರು ಮಲಗಿದ್ದರು. ಕೃಷ್ಣ ತನ್ನ ಪಾಡಿಗೆ ತಾನು ರಥ ನಡೆಸುತ್ತಿದ್ದ. ಕುದುರೆಗಳೂ ಬಳಲಿದ್ದವು. ನಡುವೆ ಒಮ್ಮೊಮ್ಮೆ ಗಾಂಧಾರಿ ಬೆಚ್ಚಿದಂತೆ ಕೃಷ್ಣನಿಗೆ ಅನ್ನಿಸುತ್ತಿತ್ತು. ಅವನು ಅವಳ ಕಡೆಗೆ ಅರ್ಧ ಗಮನವಿಟ್ಟು ನೋಡಲು ಶುರುಮಾಡಿದ. ಅವಳು ವಾಸ್ತವವಾಗಿ ಬೆಚ್ಚುತ್ತಿದ್ದಳು. ನಡುವೆ ನೀರು ಸಿಕ್ಕಿದಾಗ ರಥ ನಿಲ್ಲಿಸಿ ನೀರು ಕುಡಿಯಲು ಕುದುರೆಗಳನ್ನು ಬಿಚ್ಚಿದಾಗ ಅವಳಿಗೆ ಎಚ್ಚರವಾಯಿತು. ಮತ್ತೆ ಕುದುರೆಗಳನ್ನು ಕಟ್ಟಿ ಕೃಷ್ಣ ಪಯಣವನ್ನು ಮುಂದುವರಿಸಿದ. ಅವನಿಗೂ ತೂಕಡಿಕೆ ಬಂತು. ಸ್ವಲ್ಪದೂರ ಕಳೆದ ನಂತರ ತೂಕಡಿಕೆ ಹರಿದು ನೀರು ಕುಡಿಯಬೇಕೆನ್ನಿಸಿ ನೀರಿನ ಮೊಗೆಗೆಂದು ಅವನು ತಿರುಗಿದ. ಆಶ್ಚರ್ಯವಾಯಿತು. ಗಾಂಧಾರಿ ಎದ್ದು ಕುಳಿತಿದ್ದಾಳೆ. ಎರಡು ಕಣ್ಣುಗಳನ್ನು ತೆರೆದಿದ್ದಾಳೆ. ರೆಪ್ಪೆಗಳು ಆಡುತ್ತಿವೆ. ಆದರೆ ಏನೂ ಕಾಣಿಸುತ್ತಿಲ್ಲ ವೆಂಬ ಅಂಧಭಾವ ಮುಖದಲ್ಲಿ. ಕೃಷ್ಣ ಅವಳನ್ನೇ ನೋಡತೊಡಗಿದ. ಅವಳು ತನ್ನ ಎರಡು ಕೈಗಳನ್ನೂ ಎತ್ತಿ ಕಣ್ಣುಗಳನ್ನು ಮೃದುವಾಗಿ ಹೊಸಕಿಕೊಂಡು ಮತ್ತೆ ರೆಪ್ಪೆ ತೆಗೆದು ನೋಡಲು ಪ್ರಯತ್ನಿಸುತ್ತಾಳೆ.

'ಯಾಕೆ, ಏನಾಯಿತು?' ಕೃಷ್ಣ ಕೇಳಿದ.

'ಇದ್ದಕ್ಕಿದ್ದಂತೆಯೇ ಎಚ್ಚರವಾಯಿತು. ಎದ್ದು ಕುಳಿತು ಕಣ್ಣು ಬಿಟ್ಟೆ. ಏನೂ ಕಾಣಿಸುತ್ತಿಲ್ಲ. ನಾನು ನಿಜವಾಗಿಯೂ ಕುರುಡಿಯಾದೆ ಎನ್ನಿಸುತ್ತದೆ.'

ಕುಂತಿ ನಿದ್ರಿಸುತ್ತಿದ್ದಳು. ಕೃಷ್ಣ ಮೌನವಾಗಿ ಕುಳಿತಿದ್ದ. ಕುದುರೆಗಳು ತಮ್ಮ ಪಾಡಿಗೆ ತಾವು ಹೋಗುತ್ತಿದ್ದವು. ಎಷ್ಟೋ ಹೊತ್ತಾದ ಮೇಲೆ ಗಾಂಧಾರಿ ಎಂದಳು: 'ಕೃಷ್ಣ ನನಗೆ ಮತ್ತೆ ದೃಷ್ಟಿ ಬರುವುದಿಲ್ಲವೆಂದು ಮನಸ್ಸು ಖಚಿತವಾಗಿ ಹೇಳುತ್ತಿದೆ. ನಾನು ಹೀಗೆಯೇ ಮೊದಲಿನಂತೆಯೇ ಇರುತ್ತೇನೆ. ಧೃತರಾಷ್ಟ್ರನ ಸಂಗಡ, ಅದೂ ಒಂದು ತೆರನಾದ ನೆಮ್ಮದಿ.'

ಕೃಷ್ಣನಿಗೆ ಮಾತು ತಿಳಿಯಲಿಲ್ಲ. ಅವಳನ್ನೇ ದಿಟ್ಟಿಸಿ ನೋಡಿದ. ಯಾವ ಭಾವವೂ ಇಲ್ಲದ ಕೆನ್ನೆ ಮೂಗು ಬಾಯಿ ಗದ್ದಗಳ ಮುಖವನ್ನು ಅವಳು ತನ್ನ ಕುತ್ತಿಗೆಯ ಮೇಲೆ ಹೊತ್ತು ಕುಳಿತಿದ್ದಳು.

✡



ಅತಿಕಾಮರ್ಗತಿ ಹಾನಿಯೈ

—ಪುಲಿಗೆರೆ ಸೋಮನಾಥ

ಧರೆಯು ಸಂಪದವಿಲ್ಲದಡವಿಯು
ತಿರುಕರಾವಿನಿಬರನು ಸಲೆ ಸಂ-
ತರಿಸಲಾಪೆವೆ ಕೃಷ್ಣ ನೀನೇ ಸಾಕು

— ಕುಮಾರವ್ಯಾಸ

Printed & Published by H. R. Basavaraj for the Proprietors, The Jaya Karnataka News Printers Ltd., at Samyukta Karnataka Press, Koppikar Road, Hubli–580 020. Rept : Bombay : V. Satyamurthy Phone : 522412; Calcutta : H. Majumdar 46–4233; Madras : K. A. Subramanian Phone : 842201; New Delhi : P. R. Chopra Phone : 714130.

ಸ್ತ್ರೀಯರ ಕೆಲವು
ಅತ್ಯಂತ ಸುಂದರ
ಸನ್ನಿವೇಶಗಳಲ್ಲಿ
ಖಟಾವ್
ಪಾಲ್ಗೊಳ್ಳುತ್ತದೆ.



ಖಟಾವ್‌ನ ಚೆರ್‌ಕೂಸಾ ಸೀರೆಗಳು

Rediffusion/K/1222, KN

